# ಬಳ್ಳಾರಿ ಜಿಲ್ಲಾ ಗಣಿ ಕಾರ್ಮಿಕರ ಸಮಾಜೋ-ಆರ್ಥಿಕ ಅಧ್ಯಯನ

(ಬುಡಕಟ್ಟು ಸಮುದಾಯಗಳನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ. ಮಹಾಪ್ರಬಂಧ


ಸಂಶೋಧಕ

ಪಿ. ಹುಚ್ಚೂಸಾಬ್

ಮಾರ್ಗದರ್ಶಕರು

ಡಾ. ಅಶೋಕ್ ಕುಮಾರ್

ಹಿ.ಶ್ರೇಣಿ ಉಪನ್ಯಾಸಕರು





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

192

# ಬಳ್ಳಾರಿ ಜಿಲ್ಲಾ ಗಣಿ ಕಾರ್ಮಿಕರ ಸಮಾಜೋ-ಆರ್ಥಿಕ ಅಧ್ಯಯನ

(ಬುಡಕಟ್ಟು ಸಮುದಾಯಗಳನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕ

**ಪಿ. ಹುಚ್ಚೂಸಾಬ್**

ಮಾರ್ಗದರ್ಶಕರು

**ಡಾ. ಅಶೋಕ್ ಕುಮಾರ್**

ಹಿ.ಶ್ರೇಣಿ ಉಪನ್ಯಾಸಕರು





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ದೃಢೀಕರಣ ಪತ್ರ

ಬಳ್ಳಾರಿ ಜಿಲ್ಲಾ ಗಣಿ ಕಾರ್ಮಿಕರ ಸಮಾಜೋ-ಆರ್ಥಿಕ ಅಧ್ಯಯನ (ಬುಡಕಟ್ಟು ಸಮುದಾಯಗಳನ್ನು ಅನುಲಕ್ಷಿಸಿ) ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಪಿಎಚ್.ಡಿ. ಪದವಿಗಾಗಿ ಪಿ. ಹುಚ್ಚೂಸಾಬ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ :

(ಡಾ. ಅಶೋಕ್ ಕುಮಾರ್)
ಮಾರ್ಗದರ್ಶಕರು

## ಪ್ರಮಾಣ ಪತ್ರ

ಬಳ್ಳಾರಿ ಜಿಲ್ಲಾ ಗಣಿ ಕಾರ್ಮಿಕರ ಸಮಾಜೋ-ಆರ್ಥಿಕ ಅಧ್ಯಯನ (ಬುಡಕಟ್ಟು ಸಮುದಾಯಗಳನ್ನು ಅನುಲಕ್ಷಿಸಿ) ಎಂಬ ಸಂಪ್ರಬಂಧವನ್ನು ಡಾ. ಅಶೋಕ್ ಕುಮಾರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 23-5-2007

(ಪಿ. ಹುಚ್ಚೂಸಾಬ್)
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

೧.೧. ಪ್ರಸ್ತಾವನೆ

೧.೨. ಉದ್ದೇಶ

೧.೩. ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

೧.೪. ಅಧ್ಯಯನದ ಗ್ರಹಿಕೆಗಳು

೧.೫. ಅಧ್ಯಯನದ ವಿನ್ಯಾಸ

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

## ೧.೧. ಪ್ರಸ್ತಾವನೆ

ಈ ಭೂಮಿಯ ಮೇಲೆ ಮಾನವ ಸಮಾಜದ ಇತಿಹಾಸವನ್ನು ಸಮಗ್ರವಾಗಿ ಮತ್ತು ವೈಜ್ಞಾನಿಕವಾಗಿ ಅಭ್ಯಸಿಸಿದರೆ ನಮಗೆ ಅನೇಕ ಸತ್ಯಾಂಶಗಳು ಗೋಚರಿಸುತ್ತವೆ. ಮೊದಲನೆಯದಾಗಿ ನಮ್ಮ ಇಡೀ ಸೌರವ್ಯವಸ್ಥೆಯಲ್ಲಿ ನಿರಂತರವಾಗಿ ನಡೆಯುತ್ತಿರುವ ವಿಕಾಸನದ ವಿವಿಧ ಫಲಿತಾಂಶಗಳು ಪ್ರಮುಖವೆನಿಸುತ್ತವೆ. ಎರಡನೆಯದಾಗಿ ಭೂಮಿಯ ಮೇಲೆ ಆಶ್ರಯ ಪಡೆದಿರುವ ಎಲ್ಲಾ ಸೂಕ್ಷ್ಮಾತಿಸೂಕ್ಷ್ಮ ಜೀವಿಗಳಿಂದ ಮೊದಲಗೊಂಡು ಬೃಹತ್ ಸಸ್ಯವರ್ಗ ಹಾಗೂ ಪ್ರಾಣಿವರ್ಗಗಳು ಈ ಜೀವವಿಕಾಸನ ಸಿದ್ಧಾಂತದ ಫಲಶ್ರುತಿಗಳೇ ಆಗಿವೆ. ಕಾಲಾನುಕ್ರಮದಲ್ಲಿ ಇವುಗಳೆಲ್ಲಾ ತಮ್ಮದೇ ಆದ ವಿಭಿನ್ನ ಸ್ವರೂಪಗಳಲ್ಲಿ ತಮ್ಮ ಸುತ್ತಲಿನ ಪರಿಸ್ಥಿತಿಗೆ ಅನುಗುಣವಾಗಿ ವಿಕಾಸಗೊಳ್ಳುತ್ತಾ ಸಾಗಿವೆ. ಈ ಪ್ರಕ್ರಿಯೆಯಲ್ಲಿ ಪರಿಸ್ಥಿತಿಗೆ ಹೊಂದಿಕೊಳ್ಳಲಾಗದ ಎಷ್ಟೋ ಪ್ರಾಣಿ ಹಾಗೂ ಸಸ್ಯವರ್ಗಗಳು ನಶಿಸಿಹೋಗಿವೆ. ಹಾಗೆಯೇ ನಿಸರ್ಗದ ಪರಿಸ್ಥಿತಿಗೆ ಅನುಗುಣವಾಗಿ ಅನೇಕ ಹೊಸ ಹೊಸ ಪ್ರಾಣಿ ಹಾಗೂ ಜೀವರಾಶಿಗಳು ಹುಟ್ಟಿಕೊಂಡಿವೆ. ಆದರೆ ಮನುಷ್ಯನು ಮಾತ್ರ ನಿರಂತರವಾಗಿ ಬದಲಾವಣೆಯಾಗುತ್ತಿರುವ ಪರಿಸ್ಥಿತಿಗೆ ಗುಲಾಮನಾಗದೇ ಪರಿಸ್ಥಿತಿಗೆ ಹೊಂದಿಕೊಂಡು, ಪರಿಸ್ಥಿತಿಯನ್ನು ನಿಯಂತ್ರಿಸಬಲ್ಲ ಜೀವಿಯಾಗಿದ್ದಾನೆ. ಇದಕ್ಕೆ ಮುಖ್ಯ ಕಾರಣವೆಂದರೆ ಬೇರೆಲ್ಲಾ ಪ್ರಾಣಿಗಳಲ್ಲಿ ಇಲ್ಲವಾದ ಮತ್ತು ಮನುಷ್ಯನಲ್ಲಿ ಮಾತ್ರ ಇರುವ ಚಿಂತನಾ ಸಾಮರ್ಥ್ಯವು ಒಂದು ಮುಖ್ಯ ಕಾರಣವಾಗಿದೆ. ಮನುಷ್ಯನ ಈ ಚಿಂತನ ಸಾಮರ್ಥ್ಯಕ್ಕೆ ಕಾರಣವಾದ ಅವನ (Cerebral System)...... ಇದು ಕೂಡಾ ಮನುಷ್ಯ ವಿಕಾಸದ ಫಲಶ್ರುತಿಯೇ ಹೊರತು, ಧಿಡೀರನೇ ಸೃಷ್ಟಿಗೊಂಡ ಪ್ರಕ್ರಿಯೆಯಲ್ಲ.

ನಾವು ಪ್ರಪಂಚದ ಸಾಮಾಜಿಕ ಬೆಳವಣಿಗೆಯ ಇತಿಹಾಸವನ್ನು ಅವಲೋಕಿಸಿದರೆ, ಮಾನವನ ನಾಗರಿಕತೆಯ ಬೆಳವಣಿಗೆಯಲ್ಲಿ ಲೋಹಗಳ ಬಳಕೆಯು ಜಾರಿಗೆ ಬಂದ ನಂತರ ಮಾನವನಲ್ಲಿ ಗಣನೀಯ ಪ್ರಮಾಣದಲ್ಲಿ ಬದಲಾವಣೆಯಾಗಿರುವುದನ್ನು ಕಾಣುತ್ತೇವೆ. ಮನುಷ್ಯ ಲೋಹಗಳ ಬಳಕೆಯನ್ನು ಕೈಗೊಳ್ಳುವ ಮೊದಲು ಕೃಷಿ, ಪಶು ಸಂಗೋಪನೆ, ನೆಯ್ಗೆ, ಮಣ್ಣಿನ ಕುಡಿಕೆ ಮಾಡುವಿಕೆ, ಮನೆಕಟ್ಟುವಿಕೆ, ಕಲ್ಲನ್ನು ಮೊನಚುಮಾಡಿ ಬಳಸುವಿಕೆ ಇತ್ಯಾದಿಗಳನ್ನು ಕಲಿತಿದ್ದರೂ ಇಂದಿನ ವಸ್ತು ಪ್ರಪಂಚದ ನಾಗರಿಕತೆ ಬೆಳೆದಿದ್ದೂ ಮಾತ್ರ ಲೋಹಗಳ ಕುರಿತು ಮಾನವನಲ್ಲಿದ್ದ ಜ್ಞಾನ ಮತ್ತು ಅವುಗಳ

ಬಳಕೆಯಲ್ಲಿ ಸಾಧಿಸಿದ ಪ್ರಗತಿಯು ಪ್ರಮುಖ ಘಟ್ಟವಾಗಿ ಕಂಡುಬರುತ್ತದೆ. ೧೮ನೇ ಶತಮಾನದ ಯೂರೋಪ್‌ನಲ್ಲಿ ಕಂಡು ಬಂದ ಕೈಗಾರಿಕಾ ಕ್ರಾಂತಿಗಿಂತ ಮುಂಚೆ ಪ್ರಪಂಚದ ಎಲ್ಲಾ ರಾಷ್ಟ್ರಗಳಲ್ಲಿ ಕೃಷಿಯೇ ಪ್ರಧಾನ ಉದ್ಯೋಗವಾಗಿತ್ತು. ಇದರೊಂದಿಗೆ ಭೂ-ಗರ್ಭದಲ್ಲಿ ಅಡಗಿದ್ದ ಹಲವು ಖನಿಜ ಸಂಪತ್ತಿನ ಗಣಿಗಾರಿಕೆ ನಡೆದರೂ ಖನಿಜ ಸಂಪತ್ತಿನ ಪ್ರಾಮುಖ್ಯತೆಗೆ ಅಷ್ಟೇನೂ ಮಹತ್ವ ನೀಡಿರಲಿಲ್ಲ. ಆದರೆ ಕೈಗಾರಿಕಾ ಕ್ರಾಂತಿಯ ಕಾಲದಲ್ಲಿ ಕಂಡುಬಂದ ವಿವಿಧ ಆವಿಷ್ಕಾರಗಳಿಂದಾಗಿ ಪ್ರತಿಯೊಂದು ರಾಷ್ಟ್ರಗಳು ತಮ್ಮ ಖನಿಜ ಸಂಪತ್ತಿನ ಉತ್ಪಾದನೆ ಹಾಗೂ ವಿತರಣಾ ಚಟುವಟಿಕೆಗಳಿಗೆ ಪ್ರಾಮುಖ್ಯತೆ ನೀಡಲು ಪ್ರಾರಂಭಿಸಿದವು. ಹೀಗಾಗಿ ಪ್ರಸ್ತುತ ಸನ್ನಿವೇಶದಲ್ಲಿ ಆಯಾ ದೇಶಗಳಲ್ಲಿ ಲಭ್ಯವಿರುವ ಖನಿಜ ಸಂಪತ್ತಿನ ಆಧಾರದ ಮೇಲೆ ಹಾಗೂ ಅವುಗಳ ಬಳಕೆಯ ಪ್ರಮಾಣದ ಮೇಲೆ ಪ್ರತಿಯೊಂದು ರಾಷ್ಟ್ರಗಳ ಆರ್ಥಿಕ ಪ್ರಗತಿಯು ನಿರ್ಧಾರಗೊಳ್ಳುವ ಹಂತಕ್ಕೆ ಬಂದು ತಲುಪಿದೆ. ಅಲ್ಲದೇ ಕೈಗಾರಿಕರಣದ ಪ್ರಕ್ರಿಯೆಯು ಈ ಹಿಂದಿನ ಎಲ್ಲಾ ಉತ್ಪಾದನಾ ತಂತ್ರಗಳನ್ನು ತಿರುವು-ಮುರುವುಗೊಳಿಸಿದೆ. ಇಂತಹ ಬದಲಾವಣೆಯು ಜನಸಮುದಾಯಗಳ ಅಲೋಚನಾ ಕ್ರಮ, ಉತ್ಪಾದನೆಯ ವಿಧಾನ, ಉದ್ಯೋಗದ ಸ್ವರೂಪ, ಆದಾಯದ ಮಿತಿ, ಅನುಭೋಗದ ವಿಧಾನ ಹಾಗೂ ಜನರ ಜೀವನ ಶೈಲಿಯನ್ನು ಬದಲಾಯಿಸಿದೆ.

ಜಾಗತೀಕರಣವೆಂಬ ಸುಂಟರಗಾಳಿಯಲ್ಲಿ ಉತ್ಪಾದನಾ ಸಂಬಂಧಗಳು ಹಾಗೂ ಉತ್ಪಾದನಾ ಮೌಲ್ಯಗಳೆಲ್ಲವೂ ಬದಲಾವಣೆಗೊಂಡು ಉತ್ಪಾದನಾಂಗಗಳ ಅರ್ಥವ್ಯಾಪ್ತಿಯೇ ಸಂಕುಚಿತಗೊಂಡಿದೆ. ಹೀಗಾಗಿ ಕಾರ್ಮಿಕನೇ ಪ್ರತಿಯೊಂದು ಉತ್ಪಾದನಾಂಗಗಳ ನಿರ್ಣಾಯಕನೂ ಎಂಬ ಲೋಕೋಕ್ತಿ ಸುಳ್ಳಾಗುತ್ತಿದೆ. ಅಭಿವೃದ್ಧಿಯ ಪರಿಕಲ್ಪನೆಗೆ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಪ್ರಕ್ರಿಯೆಗಳು ಹೊಸ ಆಯಾಮಗಳನ್ನು ಒದಗಿಸಿಕೊಟ್ಟಿವೆ. ಈ ಹಿನ್ನೆಲೆಯಲ್ಲಿ ಮೂಡಿಬಂದ ತಂತ್ರಗಾರಿಕೆಯು ಬಂಡವಾಳ ಸಂಬಂಧಿ ಉತ್ಪಾದನಾ ವ್ಯವಸ್ಥೆಗೆ ಹೆಚ್ಚು ಮಹತ್ವ ನೀಡಿದೆ ಹಾಗೂ ಮಾನವ ಸಂಬಂಧಿ ಚಟುವಟಿಕೆಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದೆ. ಈ ಹಿನ್ನೆಲೆಯಲ್ಲಿ ಆಯಾ ವಲಯಗಳಲ್ಲಿ ಲಭ್ಯವಿರುವ ಕಾರ್ಮಿಕರ ಉದ್ಯೋಗ, ಕೂಲಿ, ಜೀವನಶೈಲಿಯ ವಿಧಿ-ವಿಧಾನಗಳು ಅಧ್ಯಯನಕ್ಕೆ ಪೂರಕವಾಗಿ ಕಂಡುಬರುತ್ತವೆ.

ಪ್ರಸ್ತುತ ಬಳ್ಳಾರಿ ಜಿಲ್ಲೆಯ ಗಣಿಕಾರ್ಮಿಕರ ಸಮಾಜೋ-ಆರ್ಥಿಕ ಅಧ್ಯಯನವನ್ನು ಕೂಲಂಕುಶವಾಗಿ ಅರಿಯಲು ಜಿಲ್ಲೆಯ ಗಣಿ ಪ್ರಗತಿಯನ್ನು ನಾಲ್ಕು ಎರಡು ಕಾಲಘಟ್ಟಗಳಲ್ಲಿ ವರ್ಗೀಕರಿಸಿ, ಅಧ್ಯಯನ ಮಾಡಬೇಕಾಗುತ್ತದೆ. ಮೊದಲನೆಯದಾಗಿ ಇತ್ತೀಚಿನ ೧೦ ವರ್ಷಗಳಲ್ಲಿ ಜಿಲ್ಲೆಯ ಗಣಿಗಾರಿಕೆಯು ಸಂಪೂರ್ಣ ಯಾಂತ್ರೀಕರಣಗೊಂಡು, ಅದಿರು ಮಾರಾಟದ ವ್ಯವಹಾರದಲ್ಲಿ ಸರ್ಕಾರದ ನಿಯಂತ್ರಣವನ್ನು ತೆಗೆದು ಹಾಕಿರುವ ಹಾಗೂ ಜಾಗತೀಕರಣದ ನೀತಿಗಳು ಅನುಷ್ಠಾನಗೊಂಡ ಅವಧಿ ಮತ್ತು ಅದಕ್ಕೂ ಮುಂಚೆ ಭಾಗಶಃ ಯಾಂತ್ರೀಕರಣವಿದ್ದು, ಜಿಲ್ಲೆಯ ಖನಿಜದ ವಹಿವಾಟಿನ ಮೇಲೆ ಕೇಂದ್ರ ಸರ್ಕಾರದ

ಅಧೀನ ಸಂಸ್ಥೆ ಎಂ.ಎಂ.ಟಿ.ಸಿ. (ಮೈಸೂರು ಮಿನಿರಲ್ಸ್ ಟ್ರಾನ್ಸ್‌ಪೋರ್ಟ್ ಕಾರ್ಪೋರೇಷನ್) ನಿಯಂತ್ರಣವಿದ್ದ ಕಾಲಾವಧಿ ಎಂದು ವರ್ಗೀಕರಿಸಬಹುದಾಗಿದೆ.

ಜಾಗತೀಕರಣ ಪೂರ್ವದಲ್ಲಿ ಜಿಲ್ಲೆಯ ಗಣಿಗಾರಿಕೆ ಭಾಗಶಃ ಯಾಂತ್ರೀಕರಣಗೊಂಡಿದ್ದಲ್ಲದೇ ಗಣಿಗಾರಿಕೆಯಲ್ಲಿ ನೇರವಾಗಿ ಹಾಗೂ ಶ್ರಮಾಧಾರಿತ ಉದ್ಯೋಗಗಳಿಗೆ ಬಹಳಷ್ಟು ಅವಕಾಶವಿತ್ತು. ಗಣಿ ಉತ್ಪನ್ನದ ಪ್ರಮಾಣ ಪ್ರಸ್ತುತ ಉತ್ಪನ್ನಕ್ಕಿಂತ ಅನೇಕ ಪಟ್ಟು ಕಡಿಮೆಯಾಗಿತ್ತು. ತೆರದ ಗಣಿಗಾರಿಕೆಯಿಂದ ಪರಿಸರ ಮಾಲಿನ್ಯವಿದ್ದರೂ ಈಗಿರುವಷ್ಟು ಅಪಾಯಕಾರಿಯಾಗಿ ಪರಿವರ್ತನೆಗೊಂಡಿರಲಿಲ್ಲ. ಸುತ್ತಲಿನ ಜನ ಜೀವನದ ಆರೋಗ್ಯ ಹಾಗೂ ವ್ಯವಸಾಯದ ಮೇಲೆ ಇಂದಿನಷ್ಟು ದುಷ್ಪರಿಣಾಮಕಾರಿಯಾಗಿರಲಿಲ್ಲ. ಜಿಲ್ಲೆಯ ಹಲವು ಗಣಿಗಳಲ್ಲಿ ಕಾರ್ಮಿಕರಿಗೆ ಕಾನೂನಿನ್ವಯ ಕನಿಷ್ಠ ಕೂಲಿ ದೊರೆಯುತ್ತಿತ್ತು. ಕೆಲವು ಗಣಿಗಳಲ್ಲಿ ಇದು ಕೂಡ ಸಿಗುತ್ತಿರಲಿಲ್ಲ. ಆದರೆ ಈ ಕನಿಷ್ಠ ಕೂಲಿ ನಿಯಮವು ಕಾರ್ಮಿಕನ ಕುಟುಂಬದ ಮೇಲೆ ನೆರವಾಗಿ ಪರಿಣಾಮ ಬಿರುತ್ತಿತ್ತು. ಒಂದು ವೇಳೆ ಕಾನೂನಿನ್ವಯ ಅವನ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯದಿದ್ದರೆ ಹಲವಾರು ಸಮಸ್ಯೆಗಳಿಗೆ ತುತ್ತಾಗಿ ಕಾರ್ಮಿಕನು ಆರೋಗ್ಯಕರ ಜೀವನವನ್ನು ನಡೆಸಲು ಅಸಾಧ್ಯವಾಗುತಿತ್ತು. ಅಲ್ಲದೇ ಅವನು ನಿವೃತ್ತಿ ಹೊಂದುವ ವೇಳೆಗೆ ದೈಹಿಕ ಸಾಮರ್ಥ್ಯ ಸಂಪೂರ್ಣ ಕುಸಿದು, ಬಾಡಿಗೆ ಎತ್ತಿನಂತೆ ದುಡಿದು, ನಿವೃತ್ತಿ ಹೊಂದಿದ ಒಂದೆರಡು ವರ್ಷಗಳಲ್ಲಿ ಅಸುನೀಗುತ್ತಿದ್ದನು. ಆದರೆ ಜಾಗತೀಕರಣದ ಪೂರ್ವ ಹಾಗೂ ನಂತರದ ಅವಧಿಗಳಿಂದ ಹಿಡಿದು ಮಾಲೀಕನ ಲಾಭ ಮಾತ್ರ ದ್ವಿಗೂಣಗೊಳ್ಳುತ್ತಾ ಸಾಗಿದೆ. ಜಿಲ್ಲೆಯ ಅನೇಕ ಗಣಿಗಳಲ್ಲಿ ಕಾರ್ಮಿಕರಿಗೆ ಕನಿಷ್ಠ ವೇತನದ ಖಾತ್ರಿಯಿಲ್ಲ. ಏಕೆಂದರೆ ಅವನು ಒಬ್ಬ ಗುತ್ತಿಗೆದಾರನ ಅಡಿಯಲ್ಲಿ ಕೆಲಸ ಮಾಡುತ್ತಿದ್ದಾನೆ. ಗುತ್ತಿಗೆದಾರನು ತನ್ನ ಜೇಬನ್ನು ತುಂಬಿಕೊಂಡು ಕಾರ್ಮಿಕನನ್ನು ವಂಚಿಸುವುದು ಸರ್ವೆಸಾಮಾನ್ಯವಾಗಿದೆ.

ಜಾಗತೀಕರಣದ ನಂತರ ಹಾಗೂ ಇತ್ತೀಚಿನ ದಶಕಗಳಲ್ಲಿ ಗಣಿ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳಾಗಿವೆ. ಮೊದಲನೆಯದಾಗಿ ಜಿಲ್ಲೆಯ ಗಣಿ ಉತ್ಪಾದನೆಯು ಸಂಪೂರ್ಣ ಯಾಂತ್ರೀಕರಣಗೊಂಡಿದೆ. ಉದ್ಯೋಗವಕಾಶಗಳು ಕಡಿತಗೊಂಡಿವೆ. ಉತ್ಪಾದನೆಯ ಪ್ರಮಾಣದಲ್ಲಿ ಸಾವಿರಾರು ಪಟ್ಟು ಹೆಚ್ಚಳವಾಗಿದೆ. ಈ ಹಿಂದೆ ಗಣಿಗಾರಿಕೆಯ ಮೇಲಿದ್ದ ಸರ್ಕಾರದ ಎಲ್ಲಾ ನಿಯಂತ್ರಣಗಳನ್ನು ತೆಗೆದು ಹಾಕಿ ಖಾಸಗಿಯವರಿಗೆ ಗಣಿ ಉತ್ಪನ್ನ ಹಾಗೂ ಮಾರಾಟ ಮಾಡಲು ಮುಕ್ತಪರವಾನಿಗೆ ನೀಡಲಾಗಿದೆ. ಇದರಿಂದ ಗಣಿ ಮಾಲೀಕರು ಹಾಗೂ ಮಾರಾಟಗಾರರು ಶತಕೋಟಿ ಲಾಭದ ಒಡೆಯರಾಗಿ ಪರಿವರ್ತನೆಗೊಂಡಿದ್ದಾರೆ. ಪ್ರಸ್ತುತ ಗಣಿಗಾರಿಕೆಯಲ್ಲಿ ಜನರಿಗೆ ನೇರ ಉದ್ಯೋಗವಿಲ್ಲದಿದ್ದರೂ ಪರೋಕ್ಷವಾಗಿ ಸಾವಿರಾರು ಕಾರ್ಮಿಕರು ಗುತ್ತಿಗೆದಾರರ ಅಡಿಯಲ್ಲಿ ಸೇವೆಸಲ್ಲಿಸುತ್ತಾ ಕಾನೂನಾತ್ಮಕ ಸೌಲಭ್ಯಗಳಿಂದ ವಂಚಿತಗೊಂಡಿದ್ದಾರೆ. ಜಿಲ್ಲೆಯ ಗಣಿಗಾರಿಕೆ ನಡೆಯುವ ಪ್ರದೇಶಗಳ ಸುತ್ತಮುತ್ತ ವಾಯು, ನೆಲ, ಜಲ ಸಂಪೂರ್ಣವಾಗಿ ಮಲಿನಗೊಂಡು ಜನ ಜೀವನ ಅಸ್ತವ್ಯಸ್ತಗೊಳಿಸಿದೆ.

ಪ್ರಸ್ತುತ ಅಧ್ಯಯನವು ಜಾಗತೀಕರಣದ ಪೂರ್ವ ಗಣಿಗಾರಿಕೆಯ ಸ್ಥಿತಿಗತಿಯ ಬಗ್ಗೆ ಚರ್ಚಿಸದೆ ಜಾಗತೀಕರಣದ ನಂತರ ಅವಧಿಯಲ್ಲಾದ ಗಣಿಗಾರಿಕೆಯ ವೈಪರಿತ್ಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಸಂದರ್ಭದಲ್ಲಿ ಸಂಶೋಧನಾತ್ಮಕ ಮಹಾಪ್ರಬಂಧವು ಬುಡಕಟ್ಟು ಸಮುದಾಯಗಳನ್ನು ಅನುಲಕ್ಷಿಸಿ, ಜಿಲ್ಲೆಯ ಗಣಿಕಾರ್ಮಿಕರ ಸಮಾಜೋ-ಆರ್ಥಿಕ ಅಧ್ಯಯನವನ್ನು ಕೇಂದ್ರಬಿಂದುವಾಗಿ ಪರಿಗಣಿಸಿದೆ. ಗಣಿ ಕಾರ್ಮಿಕರ ಕೂಲಿ, ಶಿಕ್ಷಣ, ಆರೋಗ್ಯ, ಜೀವನಶೈಲಿ ಇತ್ಯಾದಿ ವಿಷಯಗಳ ಮೇಲೆ ಬೆಳಕು ಚೆಲ್ಲಿ, ಕಾರ್ಮಿಕರ ಒಂದು ನೈಜ ಚಿತ್ರಣಕೊಡುವ ಪ್ರಯತ್ನ ಮಾಡಲಾಗಿದೆ. ಕಾರ್ಮಿಕರ ದುಸ್ಥಿತಿಗೆ ಕಾರಣವಾದ ಅಡ್ಡಿ-ಆತಂಕಗಳನ್ನು ಅನಾವರಣಗೊಳಿಸುವ ಹಾಗೂ ಬದಲಾವಣೆಗೆ ತಕ್ಕಂತೆ ಕಾರ್ಮಿಕರ ಕಾಯ್ದೆಗಳಲ್ಲಿನ ಸುಧಾರಣೆ, ಶಿಕ್ಷಣದ ಅರಿವು ಮತ್ತು ಸಂಘಟನಾ ಶಕ್ತಿಯಿಂದ ಕಾರ್ಮಿಕರು ಪಡೆಯಬಹುದಾದ ಫಲಶ್ರುತಿಗಳನ್ನು ಸಂಕ್ಷಿಪ್ತವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.

### ೧.೨. ಉದ್ದೇಶ

೧. ಜಾಗತೀಕರಣದ ನೀತಿಯಿಂದಾಗಿ ಉದಾರೀಕರಣ, ಖಾಸಗೀಕರಣದ ಪ್ರಾಬಲ್ಯವು ಯಾವ ವರ್ಗದ ಹಿತಾಸಕ್ತಿಗಳನ್ನು ರಕ್ಷಿಸುತ್ತಿದೆ ಮತ್ತು ಯಾವ, ಯಾವ ಉತ್ಪಾದನಾಂಗಗಳ ಸ್ವಾತಂತ್ರ್ಯವನ್ನು ಕಸಿದುಕೊಂಡಿದೆ. ಎಂಬುದನ್ನು ಪ್ರಧಾನವಾಗಿ ಚರ್ಚೆಗೆ ಒಳಪಡಿಸುವುದಾಗಿದೆ.

೨. ಖಾಸಗೀಕರಣ ಹಾಗೂ ಆಧುನಿಕತೆಯನ್ನು ಮೈಗೂಡಿಸಿಕೊಂಡಿರುವ ಗಣಿಗಾರಿಕೆಯು ಕಾರ್ಮಿಕರಿಗೆ ನೀಡಿರುವ ಸೌಲಭ್ಯಗಳ ಸ್ವರೂಪ ಹೇಗಿದೆ? ಅವುಗಳ ಪರಿಣಾಮಗಳಾವುವು? ಎಂಬುದನ್ನು ಕಾರ್ಮಿಕರಿಂದ ಚರ್ಚಿಸುವುದು.

೩. ಗಣಿಗಾರಿಕೆಯಲ್ಲಿರುವ ಪುರುಷ ಹಾಗೂ ಮಹಿಳಾ ಕಾರ್ಮಿಕರ ನಡುವೆ ಕಂಡುಬರುವ ಲಿಂಗತಾರತಮ್ಯ, ಕೂಲಿತಾರತಮ್ಯ, ಶಿಕ್ಷಣ ತಾರತಮ್ಯ ಹಾಗೂ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳನ್ನು ಪರಿಶೀಲಿಸುವುದು.

೪. ಜಾಗತೀಕರಣದ ಪರಿಣಾಮದಿಂದಾಗಿ "ಭಾಷೆ"ಯು ಒಂದು ಪ್ರಮುಖ ಮಾನದಂಡವಾಗಿದ್ದು, ಅದು ಉದ್ಯೋಗ, ವರಮಾನ ಹಾಗೂ ಅಂತಸ್ತನ್ನುಗಳಿಸಲು ಮತ್ತು ಕಾರ್ಮಿಕರನ್ನು ಶೋಷಣೆ ಮಾಡಲು ಹೇಗೆ ಬಳಕೆಯಾಗುತ್ತಿದೆ ಎಂಬುದನ್ನು ಚರ್ಚಿಸುವುದು.

೫. ಗಣಿಕಾರ್ಮಿಕರ ಹಿತಾರಕ್ಷಣೆಗೆ ಕಟಿಬದ್ಧವಾಗಿರುವ ಕಾರ್ಮಿಕ ಸಂಘಟನೆಗಳ ಪಾತ್ರ, ಸಂಘಟನೆಯ ವೈಫಲ್ಯಕ್ಕೆ ಕಾರಣಗಳೇನು? ಸಂಘಟನೆಯ ಬಲವರ್ಧನೆಗೆ ಕೈಗೊಳ್ಳಬೇಕಾದ ಅಂಶಗಳನ್ನು ವಿಶ್ಲೇಷಣೆಗೊಳಪಡಿಸುವುದು.

೬. ಗಣಿಗಾರಿಕೆಗೆ ಸಂಬಂಧಿಸಿದ ಕಾಯ್ದೆ ಕಾನೂನುಗಳು, ಅವುಗಳ ಬಗ್ಗೆ ಕಾರ್ಮಿಕರಲ್ಲಿರುವ ಅರಿವು, ಮಹತ್ವ, ಅನುಷ್ಠಾನ ಹಾಗೂ ಅವುಗಳ ಅನುಷ್ಠಾನಕ್ಕೆ ಅಡ್ಡಿಯಾಗಿರುವ ಅಂಶಗಳನ್ನು ಪರಿಶೀಲಿಸುವುದು.

### ೧.೩. ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

ಪ್ರತಿಯೊಂದು ಸಂಶೋಧನಾತ್ಮಕ ಮಹಾಪ್ರಬಂಧದ ರಚನೆಯ ಹಿಂದೆ ಒಂದು ಸ್ಪಷ್ಟವಾದ ಉದ್ದೇಶವಿರುತ್ತದೆ. ಈ ಹಿನ್ನೆಲೆಯಲ್ಲಿ ಸಂಶೋಧನೆಯ ಉದ್ದೇಶ ಮತ್ತು ಆಶಯಗಳನ್ನು ಕಾರ್ಯಗತಗೊಳಿಸಲು

೧. ಅನ್ವೇಷಣೆ ಅಥವಾ ಶೋಧನೆ (Exploration)

೨. ಪ್ರಯೋಗಾತ್ಮಕ ಅಥವಾ ಅನುಭವಾತ್ಮಕ ವಿಶ್ಲೇಷಣೆ (Experimentation)

೩. ಶಾಬ್ದಿಕ ವರ್ಣನೆ ಅಥವಾ ಸ್ಪಷ್ಟತೆ (Discription)

೪. ತಪಾಸಣೆ ಅಥವಾ ವಿಶ್ಲೇಷಣೆ (Diagnosis)

ಈ ಮೇಲಿನ ನಾಲ್ಕು ಹಂತಗಳನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳುವ ಮೂಲಕ ಮಹಾಪ್ರಬಂಧದ ರಚನೆಯನ್ನು ಸಾಮಾನ್ಯ ಸರ್ವೇಕ್ಷಣೆ, ಅಂಕಿ-ಅಂಶಗಳ ಸಂಗ್ರಹ, ವಿಷಯ ವಸ್ತುವಿನ ವಿಶ್ಲೇಷಣೆಯು ಈ ಕೆಳಗಿನ ಮಾದರಿಯಲ್ಲಿರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ಸುಮಾರು ೫೦ಕ್ಕೂ ಹೆಚ್ಚು ಕಬ್ಬಿಣ ಮತ್ತು ಮ್ಯಾಂಗನೀಸ್ ಉತ್ಪಾದನಾ ಗಣಿ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. ಹೀಗಾಗಿ ಈ ಎಲ್ಲಾ ಕೈಗಾರಿಕೆಗಳಲ್ಲಿರುವ ಕಾರ್ಮಿಕರನ್ನು ಅಧ್ಯಯನಕ್ಕೆ ಒಳಪಡಿಸುವುದು ತುಂಬಾ ಕಷ್ಟಕರವಾದ ಸಂಗತಿ. ಏಕೆಂದರೆ ಯಾವುದೇ ಒಂದು ಅಧ್ಯಯನ ಕ್ಷೇತ್ರವು ವಿಶಾಲವಾದಂತೆ ಆಯಾ ಕ್ಷೇತ್ರಗಳಲ್ಲಿರುವ ಸೂಕ್ಷ್ಮ ವಿಷಯಗಳನ್ನು ಅರಿಯಲು ಅಸಾಧ್ಯವಾಗುವುದರಿಂದ, ಸಂಶೋಧನಾ ಕ್ಷೇತ್ರದ ಸ್ಪಷ್ಟ ಮತ್ತು ವಸ್ತುನಿಷ್ಠ ವಿಶ್ಲೇಷಣೆಗಾಗಿ ಇಲ್ಲಿರುವ ಒಟ್ಟು ಕಬ್ಬಿಣ ಮತ್ತು ಮ್ಯಾಂಗನೀಸ್ ಉತ್ಪದನಾ ಸಂಸ್ಥೆಗಳಲ್ಲಿ ೧೦ ಗಣಿ ಸಂಸ್ಥೆಗಳನ್ನು ಮಾದರಿಯ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗೆಯೇ ಈ ವಿವಿಧ ಗಣಿ ಸಂಸ್ಥೆಗಳಲ್ಲಿ ದುಡಿಯುತ್ತಿರುವ ಒಟ್ಟು ಕಾರ್ಮಿಕರಲ್ಲಿ ಪ್ರತಿಯೊಂದು ಗಣಿಸಂಸ್ಥೆಯಿಂದ ತಲಾ ೨೦ ಕಾರ್ಮಿಕರಂತೆ ಒಟ್ಟು ೨೦೦ ಕಾರ್ಮಿಕರನ್ನು ಮಾದರಿಯಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಜೊತೆಗೆ ಗಣಿ ಮಾಲೀಕರು, ಅಧಿಕಾರಿಗಳು, ಕಾರ್ಮಿಕ ಕಲ್ಯಾಣ ಅಧಿಕಾರಿಗಳು, ಗಣಿಗಾರಿಕೆಗೆ ಸಂಬಂಧಿತ ಬೇರೆ ಬೇರೆ ಇಲಾಖೆಗಳ ಮುಖ್ಯಸ್ಥರು ಮತ್ತು ಕಾರ್ಮಿಕ ಸಂಘಟನೆಯ ಮುಖಂಡರನ್ನು ಸಹಿತ ಅಧ್ಯಯನದ ಅವಶ್ಯಕತೆಗೆ ತಕ್ಕಂತೆ ಮಾಹಿತಿ ಸಂಗ್ರಹಿಸಲು ಬಳಸಿಕೊಳ್ಳಲಾಗಿದೆ.

#### ಅಧ್ಯಯನದ ವ್ಯಾಪ್ತಿ

ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕು ಪ್ರದೇಶಗಳು ಹೊಂದಿರುವ ವಿವಿಧ ಸಂಪನ್ಮೂಲಗಳಿಂದಾಗಿ ತಮ್ಮದೇ ಆದ ವಿಶೇಷ ಸ್ಥಾನ-ಮಾನಗಳನ್ನು ಪಡೆದಿವೆ. ಜಿಲ್ಲೆಯ ಪೂರ್ವ ತಾಲ್ಲೂಕುಗಳೆಂದು

ಗುರುತಿಸಲ್ಪಡುವ ಸಂಡೂರು, ಬಳ್ಳಾರಿ, ಮತ್ತು ಹೊಸಪೇಟೆ ತಾಲ್ಲೂಕುಗಳಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಗಣಿ ಸಂಪನ್ಮೂಲವು ಹೇರಳವಾಗಿದೆ. ಇಂತಹ ಅತ್ಯಮೂಲ್ಯ ಕಚ್ಚಾ ಸಂಪನ್ಮೂಲದ ಉತ್ಪಾದನೆಯಲ್ಲಿ ಹಲವು ಹೆಚ್ಚು ಸಂಸ್ಥೆಗಳು ಕಾರ್ಯೋನ್ಮುಖವಾಗಿವೆ. ಅವುಗಳಲ್ಲಿ ಕೆಲವು ಸಾರ್ವಜನಿಕ ಮತ್ತು ಖಾಸಗಿ ಒಡೆತನದಲ್ಲಿವೆ.

ಮಹಾಪ್ರಬಂಧದ ಸಂಶೋಧನೆಯ ಸ್ಪಷ್ಟತೆಗಾಗಿ ಶೇಕಡ ೨೦ ರಂತೆ ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ೧೦ ಗಣಿ ಸಂಸ್ಥೆಗಳಲ್ಲಿ ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಜಿಲ್ಲೆಯ ಒಟ್ಟು ಗಣಿಕೈಗಾರಿಕೆಯ ಶೇಕಡ ೬೦ ಕ್ಕಿಂತಲೂ ಹೆಚ್ಚು ಗಣಿ ಸಂಸ್ಥೆಗಳು ಕೇಂದ್ರೀಕೃತ ಗೊಂಡಿರುವುದರಿಂದ ಈ ಭಾಗದಲ್ಲಿ ೦೬ ಗಣಿ ಉತ್ಪಾದನಾ ಸಂಸ್ಥೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅವುಗಳೆಂದರೆ,

| ಕ್ರ. ಸಂ. | ಗಣಿ ಕಂಪನಿಯ ಹೆಸರು | ಎಂ.ಎಲ್. ಸಂಖ್ಯೆ | ವಿಸ್ತೀರ್ಣ ಹೆಕ್ಟೇರು ಗಳಲ್ಲಿ | ಒಡೆತನ | ಅನುಮತಿ ದೊರೆತ ದಿನಾಂಕ | ಗುತ್ತಿಗೆಯ ಅವಧಿ |
|---|---|---|---|---|---|---|
| ೧. | ಎನ್.ಎಂ.ಡಿ.ಸಿ. | ೮೩೯ | ೨೦೧೩.೩೫ | ಸಾರ್ವಜನಿಕ | ೪.೧.೮೫ | ೨೦ವರ್ಷ |
| | (ದೋಣಿಮಲೈ) | ೧೧೧೧ | ೪೯೭೩<br>೧೬೦೦ | | ೧೮.೧೦.೭೨ | ೩೦ವರ್ಷ |
| ೨. | ಎಂ.ಎಂ.ಎಲ್. (ಹರಿಶಂಕರ್) | ೧೭೫೪ | ೬.೦೭ | ಸಾರ್ವಜನಿಕ | ೨೭.೦೫.೮೧ | ೨೦ವರ್ಷ |
| ೩. | ಸ್ಮಯೋರ್ (ದೇವಗಿರಿ) | ೧೧೭೯ | ೧೮೨೦೫ | ಖಾಸಗಿ | ೧.೦೧.೭೪ | ೨೦ವರ್ಷ |
| ೪. | ವಿ.ಎಸ್.ಲಾಡ್ ಅಂಡ್ ಸನ್ಸ್(ಎಸ್.ಜೆ. ಹರವು) | ೧೫೨೪ | ೧೦೫.೦೬ | ಖಾಸಗಿ | ೧೩.೧.೭೬ | ೨೦ವರ್ಷ |
| ೫. | ತುಂಗಭದ್ರ ಮಿನರಲ್ಸ್, (ಉಬ್ಬಲಗಂಡಿ) | ೨೨೮ | ೨೦೦ ಎಕರೆ | ಖಾಸಗಿ | ೨೭.೪.೫೯ | ೩೦ವರ್ಷ |
| ೬. | ಕೆ.ಎಸ್.ವ್ಹಿ ಆಂಡ್ ಸನ್ಸ್ (ಧರ್ಮಾಪುರ) | -- | ೪೦೦ ಎಕರೆ | ಖಾಸಗಿ | ೨೭.೦೫.೮೧ | ೨೦ವರ್ಷ |

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಂಡು ಬರುವ ಶೇಕಡ ೩೦ ಕ್ಕಿಂತಲೂ ಹೆಚ್ಚು ಗಣಿ ಉತ್ಪಾದನಾ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿರುವುದರಿಂದ ಈ ಭಾಗದ ೩ ಗಣಿ ಕೈಗಾರಿಕೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅವುಗಳೆಂದರೆ.

| ಕ್ರ. ಸಂ. | ಗಣಿ ಕಂಪನಿಯ ಹೆಸರು | ಎಂ.ಎಲ್. ಸಂಖ್ಯೆ | ವಿಸ್ತೀರ್ಣ ಹೆಕ್ಟೇರು ಗಳಲ್ಲಿ | ಒಡೆತನ | ಅನುಮತಿ ದೊರೆತ ದಿನಾಂಕ | ಗುತ್ತಿಗೆಯ ಅವಧಿ |
|---|---|---|---|---|---|---|
| ೧. | ಕಾರಿಗನೂರು ಮಿನಿರಲ್ಸ್ ಮೈನಿಂಗ್ ಇಂಡಸ್ಟ್ರೀಸ್ (ಕಾರಿಗನೂರು) | ೧೭೯೯ | ೪೯೨.೮೦ | ಖಾಸಗಿ | ೦೮.೦೩.೮೨ | ೨೦ ವರ್ಷ |
| ೨. | ಎಂ.ಎಸ್.ಪಿ.ಎಲ್. (ವ್ಯಾಸನಕೇರಿ) | ೧೮೦೧ | ೩೪೭.೨೨ | ಖಾಸಗಿ | ೧೪.೧೧.೦೨ | ೨೦ ವರ್ಷ |
| ೩. | ಆರ್. ಪಿ.ಮೈನ್ಸ್ (ಟಿ.ಎನ್.ಹಳ್ಳಿ) | ೧೮೦೬ | ೪೫೦ ಎಕರೆ | ಖಾಸಗಿ | ೦೫.೦೪.೮೨ | ೩೦ ವರ್ಷ |

ಬಳ್ಳಾರಿ ತಾಲ್ಲೂಕಿನ ವ್ಯಾಪ್ತಿ ಪ್ರದೇಶದಲ್ಲಿ ಶೇಕಡ ೧೦ ರಷ್ಟು ಗಣಿ ಉತ್ಪಾದನಾ ಸಂಸ್ಥೆಗಳು ಅಸ್ತಿತ್ವದಲ್ಲಿರುವುದರಿಂದ ಈ ಭಾಗದಲ್ಲಿ ಕೇವಲ ೦೧ ಗಣಿ ಸಂಸ್ಥೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅವುಗಳೆಂದರೆ,

| ಕ್ರ. ಸಂ. | ಗಣಿ ಕಂಪನಿಯ ಹೆಸರು | ಎಂ.ಎಲ್. ಸಂಖ್ಯೆ | ವಿಸ್ತೀರ್ಣ ಹೆಕ್ಟೇರು ಗಳಲ್ಲಿ | ಒಡೆತನ | ಅನುಮತಿ ದೊರೆತ ದಿನಾಂಕ | ಗುತ್ತಿಗೆಯ ಅವಧಿ |
|---|---|---|---|---|---|---|
| ೧. | ವ್ಹಿ.ಜಿ.ಎಮ್ ಬೆಳಗಲ್ ಪ್ರೈ.ಲಿ. | ೧೧೯೩ | ೧೧೨.೫೬ | ಖಾಸಗಿ | ೦೫.೦೭.೧೯೭೪ | ೨೦ ವರ್ಷ |

ಈ ಮೇಲ್ಕಾಣಿಸಿದ ಎಲ್ಲಾ ಗಣಿ ಉತ್ಪಾದನಾ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ಸಮುದಾಯಗಳ ಕಾರ್ಮಿಕರನ್ನು ಆಯ್ಕೆಗೆ ಪರಿಗಣಿಸದೇ ಕೇವಲ ಬುಡಕಟ್ಟು ಸಮುದಾಯಗಳ ಕಾರ್ಮಿಕರನ್ನು ಮಾತ್ರ ಅಧ್ಯಯನಕ್ಕೊಳಪಡಿಸಲಾಗಿದೆ. ಏಕೆಂದರೆ ಬುಡಕಟ್ಟು ಜನಾಂಗವು ತಮ್ಮ ಹಿಂದಿನ ಮೂಲವೃತ್ತಿ ಹಾಗೂ ವಾಸಸ್ಥಳದಿಂದ ಪಲ್ಲಟಗೊಂಡು, ವಲಸೆ ಬಂದವರಾಗಿದ್ದಾರೆ. ಹೀಗಾಗಿ ಅವರಿಗೆ ಯಾವುದೇ ನಿರ್ದಿಷ್ಟ ಪ್ರಮಾಣದ ಸ್ಥಿರ ಮತ್ತು ಚರ ಆಸ್ತಿಯ ಒಡೆತನ ಹೊಂದಿಲ್ಲ ಅಥವಾ ಕಾರಣ ಅಥವಾ ಅತ್ಯಲ್ಪ ಪ್ರಮಾಣದಲ್ಲಿದೆ. ಕಾರಣ ಈ ಭಾಗದ ಬುಡಕಟ್ಟು ಕುಟುಂಬದವರು ಹೆಚ್ಚಾಗಿ ಗಣಿಗಾರಿಕೆಯನ್ನೇ ತಮ್ಮ ಜೀವನದ ಮುಖ್ಯ ಆಧಾರಸ್ಥಂಭವೆಂದೂ ನಂಬಿಕೊಂಡಿದ್ದಾರೆ. ಅಲ್ಲದೇ ತಮ್ಮ ದೈನಂದಿನ ಜೀವನೋಪಾಯಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಉದ್ಯೋಗವನ್ನು ಅರಸಿ ಕುಟುಂಬ ಸಮೇತರಾಗಿ ಅಲೆಯುವವರಾಗಿದ್ದಾರೆ. ಹೀಗಾಗಿ ಅವರ ಕುಟುಂಬ ವ್ಯವಸ್ಥೆ, ಸಾಮಾಜಿಕ ಬದುಕು, ಹಾಗೂ ಆರ್ಥಿಕ ಸ್ಥಿರತೆಯನ್ನು ಪತ್ತೆಹಚ್ಚಲು ಪ್ರತಿಯೊಂದು ಗಣಿ ಸಂಸ್ಥೆಯಿಂದ ತಲಾ ೨೦ ಕಾರ್ಮಿಕರನ್ನು ಅಧ್ಯಯನಕೋಸ್ಕರ ಆಯ್ಕೆ ಮಾಡಿಕೊಳ್ಳಲಾಗಿದೆ.

## ೧.೪. ಅಧ್ಯಯನದ ಗ್ರಹಿಕೆಗಳು

ಸ್ವಾತಂತ್ರ್ಯ ಭಾರತದ ಗೌರವಾನ್ವಿತ ಸಂವಿಧಾನದಲ್ಲಿ ಸ್ಪಷ್ಟಪಡಿಸಿರುವ ಸಮಾನತೆಯ ಹಕ್ಕುಗಳಿಗೆ ಸಂಬಂಧಿಸಿದಂತೆ ೧೪, ೧೫, ೧೬ನೇ ಅನುಚ್ಛೇದಗಳ ಪ್ರಕಾರ ಸಮಸ್ತ ಭಾರತದ ಪ್ರತಿಯೊಬ್ಬ ಪ್ರಜೆಗೂ ಸಮಾನ ಅವಕಾಶ, ಗೌರವ ಮತ್ತು ಸ್ವಾತಂತ್ರ್ಯದ ಜೊತೆಗೆ ಲಿಂಗಭೇದ, ಜಾತಿಭೇದ, ವರ್ಗಭೇದದ ತಾರತಮ್ಯ ಸಲ್ಲದು. ಹಾಗೂ ಪ್ರತಿಯೊಬ್ಬ ಪ್ರಜೆಗೂ ಅವರ ಹಕ್ಕುಗಳನ್ನು ರಕ್ಷಿಸತಕ್ಕದ್ದು ಎಂಬ ವಾಗ್ದಾನ ಮಾಡಿದೆ. ಸಂವಿಧಾನವು ನಿಗದಿಪಡಿಸಿರುವ ಮೂಲಭೂತ ಹಕ್ಕುಗಳನ್ನು ಅನುಭವಿಸುವ ಸಮಾನ ಅಧಿಕಾರ ಹಾಗೂ ಅವಕಾಶಗಳು ಸರ್ವ ಪ್ರಜೆಗಳಿಗಿವೆ ಎಂಬೀ ಆಧಾರದ ಮೇಲೆ ಮಹಾಪ್ರಬಂಧವು ಈ ಕೆಳಗಿನ ಪೂರ್ವ ಕಲ್ಪನೆಗಳಿಂದ ಕೂಡಿರುತ್ತದೆ.

೧. ಗಣಿಗಳಲ್ಲಿ ದುಡಿಯುವ ಕಾರ್ಮಿಕರು ಅನಕ್ಷರಸ್ಥರು, ಅತ್ಯಂತ ಹಿಂದುಳಿದ ವರ್ಗಗಳಿಂದ ಬಂದವರಾಗಿದ್ದು, ಹೆಚ್ಚಾಗಿ ಬುಡಕಟ್ಟು ಜನಾಂಗಗಳಿಗೆ ಸೇರಿದ್ದಾರೆ. ಅಥವಾ ಸರ್ಕಾರದ ಘೋಷಣೆಯಂತೆ ಪರಿಶಿಷ್ಟ ಪಂಗಡದವರಾಗಿದ್ದಾರೆ.

೨. ಅಸ್ತಿತ್ವದಲ್ಲಿರುವ ಸಾರ್ವಜನಿಕ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರಿಗೆ ಕಾನೂನಿನನ್ವಯ ಕಾರ್ಮಿಕ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ವಿತರಿಸಲಾಗುತ್ತಿಲ್ಲ.

೩. ಗಣಿ ಕಾರ್ಮಿಕರಿಗೆ ಸಂವಿಧಾನದಲ್ಲಿ ಸ್ಪಷ್ಟಪಡಿಸಲಾಗಿರುವ ಕಾರ್ಮಿಕ ಕಾಯ್ದೆ, ಮೂಲಭೂತ ಹಕ್ಕುಗಳ ಬಗ್ಗೆ ಏನೂ ತಿಳಿಯದವರಾಗಿದ್ದಾರೆ. ಅಥವಾ ಸರ್ಕಾರ ಜಾರಿಗೊಳಿಸಿರುವ ಕಾರ್ಮಿಕ ಕಾಯ್ದೆ ಹಾಗೂ ಕಾರ್ಖಾನೆಗಳ ಕಾಯ್ದೆಗಳ ಬಗ್ಗೆ ಮಾಲೀಕರು ಹಾಗೂ ಅಧಿಕಾರಿಗಳಿಗೆ ಸ್ಪಷ್ಟತೆ ಇರುತ್ತದೆ.

೪. ಕಾನೂನಾತ್ಮಕವಲ್ಲದ ಚಟುವಟಿಕೆಗಳು ಸರ್ಕಾರಿ ಮತ್ತು ಖಾಸಗಿ ಗಣಿ ವಲಯಗಳಲ್ಲಿ ಅವ್ಯಾಹತವಾಗಿ ನಡೆದಿವೆ.

೫. ಕಾರ್ಮಿಕರ ರಕ್ಷಣೆ ಮತ್ತು ಕಾರ್ಮಿಕರ ಯೋಗಕ್ಷೇಮವನ್ನು ಕಾಪಾಡುವಲ್ಲಿ ಸರ್ಕಾರದ ಕಾರ್ಮಿಕ ಅಧಿಕಾರಿಗಳು, ಗಣಿ ಇಲಾಖೆಯ ನಿರ್ದೇಶಕರು ಹಾಗೂ ಭೂಗರ್ಭ ಶಾಸ್ತ್ರಜ್ಞರು ಮತ್ತು ಗಣಿ ಮಾಲೀಕರ ಸೇವೆಯು ತೃಪ್ತಿಕರವಾಗಿಲ್ಲ.

೬. ಗಣಿ ಉದ್ಯಮದ ಜೊತೆಗೆ ಗಣಿ ಕಾರ್ಮಿಕರಿಗೆ ಪರ್ಯಾಯ ಉದ್ಯೋಗವಕಾಶಗಳು ತುಂಬಾ ಕಡಿಮೆ.

೭. ಕಾರ್ಮಿಕ ಸಂಘಟನೆಯ ನಾಯಕರು ಅನುಷ್ಠಾನದಲ್ಲಿರುವ ಕಾರ್ಮಿಕ ಕಲ್ಯಾಣ ಹಾಗೂ ಸಾಮಾಜಿಕ ಭದ್ರತಾ ಕ್ರಮಗಳ ಜೊತಗೆ ಇತ್ತೀಚಿನ ಕಾರ್ಮಿಕ ಕಾಯ್ದೆಯ ತಿದ್ದುಪಡಿಯ ಬಗ್ಗೆ ಅಸಂತೃಪ್ತಗೊಂಡಿದ್ದಾರೆ.

ಸಂಶೋಧನೆಯುದ್ದಕ್ಕೂ ಈ ಮೇಲಿನ ಪೂರ್ವ ಕಲ್ಪನೆಗಳ ಸ್ಪಷ್ಟತೆ, ಅನುಷ್ಠಾನ, ಉಲ್ಲಂಘನೆಯ ಕ್ರಮಗಳನ್ನು ಅವಲೋಕಿಸುವ, ವಿಶ್ಲೇಷಿಸುವ ಮತ್ತು ಚರ್ಚಿಸುವ ಕಾರ್ಯಚಟುವಟಿಕೆಯು ಕ್ಷೇತ್ರ ಕಾರ್ಯದುದ್ದಕ್ಕೂ ನಡೆದಿದೆ.

**ಅಂಕಿ-ಅಂಶ ಸಂಗ್ರಹ**

ಸಂಶೋಧನೆಗೆ ಅವಶ್ಯಕವಾದ ಮಾಹಿತಿಯನ್ನು ಗಣಿಕಾರ್ಮಿಕ, ಮಾಲೀಕ ವಿವಿಧ ಹಂತ ಹಾಗೂ ಇಲಾಖೆಗಳ ಅಧಿಕಾರಿಗಳು ಮತ್ತು ಸಂಘಟನೆಯ ಮುಖಂಡರಿಂದ ವಿಷಯವನ್ನು ಪ್ರಾಥಮಿಕವಾಗಿ ಸಂಗ್ರಹಿಸಲು ಪ್ರಶ್ನಾವಳಿ, ಸಂದರ್ಶನ ಹಾಗೂ ಅವಲೋಕನ ಇತ್ಯಾದಿ ಸಂಶೋಧಾನ ತಂತ್ರಗಳನ್ನು ಬಳಸಲಾಗಿದೆ. ಹಾಗೆಯೇ ಗಣಿ ಉದ್ಯಮಕ್ಕೆ ಸಂಬಂಧಿಸಿದಂತೆ ಚಾಲ್ತಿಯಲ್ಲಿರುವ ನೀತಿ-ನಿಯಮಗಳ ಬಗ್ಗೆ ಮಾಹಿತಿ ಪಡೆಯಲು ರಾಜ್ಯ, ಅಂತರಾಜ್ಯ (ಮಹಾರಾಷ್ಟ್ರ, ಗೋವಾ) ಜಿಲ್ಲಾ ಹಾಗೂ ತಾಲ್ಲೂಕುಗಳಲ್ಲಿ ಹಮ್ಮಿಕೊಳ್ಳಲಾಗಿದ್ದ ಸಭೆ, ಸಮಾರಂಭ, ಚರ್ಚಾಗೋಷ್ಠಿಗಳಲ್ಲಿ ಭಾಗವಹಿಸಿ ಅನೇಕ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಗೆ ಸಂಬಂಧಿಸಿದಂತೆ ವಿಡಿಯೋ ಚಿತ್ರೀಕರಣವನ್ನು ಕೈಗೊಂಡಿದ್ದಲ್ಲದೇ, ಉತ್ಪಾದನೆ ಹಾಗೂ ವಿತರಣೆಗೆ ಸಂಬಂಧಿಸಿದಂತೆ ಬೇರೆ ಬೇರೆ ಆಯಾಮಗಳಲ್ಲಿ ಛಾಯಾಚಿತ್ರಗಳನ್ನು ಸೆರೆಹಿಡಿಯಲಾಗಿದೆ.

ಕೊನೆಯದಾಗಿ ಅಧ್ಯಯನಕ್ಕೆ ಮೀಸಲಾದ ಬಳ್ಳಾರಿ ಜಿಲ್ಲೆಯ ಭೌಗೋಳಿಕ ಮತ್ತು ರಚನಾತ್ಮಕ ವೈವಿಧ್ಯತೆಗಳ ಬಗ್ಗೆ ಲಭ್ಯವಿದ್ದ ಅಂಕಿ-ಅಂಶಗಳನ್ನು, ಪ್ರಾಥಮಿಕ ಹಾಗೂ ಅನುಷಾಂಗಿಕ ಮೂಲಗಳಿಂದ ದೊರೆತ ಮಾಹಿತಿಯೊಂದಿಗೆ, ಮೌಖಿಕ ಹಾಗೂ ಅನುಭವಾತ್ಮಕವಾಗಿ ಕಂಡುಕೊಂಡ ಮಾಹಿತಿಗಳನ್ನು ಮುಖ್ಯ ಆಕರವಾಗಿಟ್ಟುಕೊಂಡು ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಅಧ್ಯಯನ ಅವಧಿ**

ಪ್ರಸ್ತುತ ಸಂಶೋಧನೆಯು ಕಳೆದ ಐದು ವರ್ಷಗಳ ಹಿಂದೆ ಜರುಗಿದ ೧೯೯೮-೯೯ ರಿಂದ ೨೦೦೩-೦೪ರವರೆಗೆ ಗಣಿ ಉದ್ಯಮದಲ್ಲಿ ಕೈಗೊಂಡಿರುವ, ಉತ್ಪಾದನೆ, ವಿತರಣೆ, ಕಾರ್ಮಿಕ ಸೌಲಭ್ಯಗಳು ಹಾಗೂ ಕಾರ್ಮಿಕರಿಗಾಗಿ ಕೈಗೊಂಡಿರುವ ವೆಚ್ಚ, ಸಾಮಾಜಿಕ ಭದ್ರತಾ ಕ್ರಮಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ/ ಜೊತೆಗೆ ಪ್ರಾಥಮಿಕ ಅಂಕಿ-ಅಂಶಗಳಿಗೆ ಸಂಬಂಧಿಸಿದಂತೆ ೨೦೦೨ ರಿಂದ ೨೦೦೪ರ ವರೆಗೆ ಕಂಡುಬಂದ ಮಾಹಿತಿಯಲ್ಲಿ ಬದಲಾಗುತ್ತಿರುವ ಕೆಲಸದ ಸ್ವರೂಪ, ಕೂಲಿಯ ಪ್ರಮಾಣ, ಕಾರ್ಮಿಕರ ಜೀವನ ಕ್ರಮ ಹಾಗೂ ಬೇರೆ ಬೇರೆ ಮೂಲಗಳಿಂದ ಕ್ಷೇತ್ರಕಾರ್ಯದಲ್ಲಿ ದೊರೆತ ವಿವಿಧ ಅಭಿಪ್ರಾಯಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ.

೧.೫. ಅಧ್ಯಯನದ ವಿನ್ಯಾಸ

ಮಹಾಪ್ರಬಂಧದ ಅಧ್ಯಯನದ ವಿಶ್ಲೇಷಣೆಗಾಗಿ, ಆಯಾ ಉದ್ದೇಶಗಳಿಗನುಸಾರವಾಗಿ ಬೇರೆ, ಬೇರೆ ೬ ಪ್ರತ್ಯೇಕ ಅಧ್ಯಾಯಗಳನ್ನಾಗಿ ಮಹಾ ಪ್ರಬಂಧವನ್ನು ವಿನ್ಯಾಸಗೊಳಿಸಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಮಹಾಪ್ರಬಂಧದ ಉದ್ದೇಶ, ಸ್ವರೂಪ, ವ್ಯಾಪ್ತಿಗೆ ಸಂಬಂಧಿಸಿದಂತೆ ಸ್ಪಷ್ಟತೆಯನ್ನು ನೀಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಸಂಶೋಧನಾ ಕ್ಷೇತ್ರದ ಭೌಗೋಳಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಹಿನ್ನೆಲೆಗೆ ಸಂಬಂಧಿಸಿದಂತೆ ಅಂಕಿ-ಅಂಶಗಳ ವಿಶ್ಲೇಷಣೆ, ಕಬ್ಬಿಣ ಮತ್ತು ಮ್ಯಾಂಗನೀಸ್ ಸಂಪನ್ಮೂಲಗಳ ಉತ್ಪಾದನೆ ಹಾಗೂ ವಿತರಣೆ ಮತ್ತು ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಇದುವರೆಗೆ ಕೈಗೊಳ್ಳಲಾಗಿರುವ ಸಂಶೋಧನಾ ಕಾರ್ಯ ಚಟುವಟಿಕೆಯನ್ನು ವಿಮರ್ಶೆಗೊಳಪಡಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಜಿಲ್ಲೆಯ ಗಣಿಕಾರ್ಮಿಕರಿಗೆ ಸಂಬಂಧಿಸಿದಂತೆ ಸಾಮಾಜಿಕ, ಆರ್ಥಿಕ ಸ್ಥಾನ-ಮಾನದ ವಿಶ್ಲೇಷಣೆಗಾಗಿ ಕಾರ್ಮಿಕರ ಕುಟುಂಬ ವ್ಯವಸ್ಥೆ, ಶಿಕ್ಷಣ, ದುಡಿಮೆ, ಲಿಂಗಾವಾರು ಹಂಚಿಕೆ, ಆದಾಯದ ವಿವಿಧ ಮೂಲಗಳನ್ನು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಗಣಿಕೈಗಾರಿಕೆ ಹುಟ್ಟುಹಾಕಿರುವ ಭಾಷೆ, ಕೂಲಿ, ದುಡಿಮೆ, ಆರೋಗ್ಯ, ಪರಿಸರ, ವಲಸೆ, ವಸತಿ ಹಾಗೂ ಸಂಘಟನೆಯ ಸಮಸ್ಯೆಗಳನ್ನು ಕೂಲಂಕುಶವಾಗಿ ಪರಿಶೀಲಿಸುವ ಮೂಲಕ, ಅವುಗಳ ಪರಿಣಾಮಗಳನ್ನು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಸಂವಿಧಾನ ಪ್ರಸ್ತಾಪಿತ ಹಾಗೂ ಸರ್ಕಾರ ಜಾರಿಗೊಳಿಸಿರುವ ಕಾರ್ಮಿಕ ಕಾಯ್ದೆಗಳನ್ನು ಪರಾಮರ್ಶೆಗೆ ಒಳಪಡಿಸಲಾಗಿದೆ. ಅವುಗಳಲ್ಲಿ ಕಾರ್ಮಿಕ, ಗಣಿಗಾರಿಕೆ, ಪರಿಸರ, ಸಾಮಾಜಿಕ ಭದ್ರತಾ ಕ್ರಮಗಳನ್ನು ಚರ್ಚಿಸಿ, ಅವುಗಳನ್ನು ಪ್ರಸ್ತುತ ಸಂಶೋಧನೆಯ ವಸ್ತುವಿಗೆ ತಾಳೆ ಮಾಡುವ ಪ್ರಯತ್ನಗಳು ನಡೆದಿವೆ.

ಕೊನೆಯ ಆರನೆಯ ಅಧ್ಯಾಯದಲ್ಲಿ ಸಂಶೋಧನೆಯ ಕಾಲದಲ್ಲಿ ದೊರೆತ ಗಣಿಗಾರಿಕೆಯ ವಾಸ್ತವಿಕ ಪರಿಸ್ಥಿತಿ ಮತ್ತು ಸಂಬಂಧಿತ ಅಂಕಿ-ಅಂಶಗಳೊಂದಿಗೆ ಆರಂಭದಲ್ಲಿ ಚರ್ಚಿಸಲಾಗಿದ್ದ ಪೂರ್ವ ಕಲ್ಪನೆಗಳ ಸ್ವರೂಪಕ್ಕನುಗುಣವಾಗಿ ಪರಿಣಾಮಗಳನ್ನು ಕಂಡುಕೊಳ್ಳಲಾಗಿದೆ. ಜೊತೆಗೆ ಅಂತಹ ಸಮಸ್ಯೆಗಳ ಸರಳೀಕರಣಕ್ಕಾಗಿ ಇಲ್ಲವೆ ಪರಿಹಾರ ಮಾರ್ಗವಾಗಿ ಕೆಲವು ಸಲಹೆ ಅಥವಾ ಸೂಚನೆಗಳನ್ನು ನೀಡಲಾಗಿದೆ.

# ಅಧ್ಯಾಯ ೨

## ಅಧ್ಯಯನ ಕ್ಷೇತ್ರದ ಪರಿಚಯ

೨.೧. ಜಿಲ್ಲೆಯ ಭೌಗೋಳಿಕ ವಿವರ, ಜನಸಂಖ್ಯೆ, ಶಿಕ್ಷಣ ಹಾಗೂ ಲಿಂಗವಾರು ಹಂಚಿಕೆ

೨.೨. ಗಣಿಗಾರಿಕೆಯ ಸಂಕ್ಷಿಪ್ತ ಇತಿಹಾಸ

೨.೩. ಮ್ಯಾಂಗನೀಸ್ ಅದಿರಿನ ಉತ್ಪಾದನೆ ಮತ್ತು ವಿತರಣೆ

೨.೪. ಕಬ್ಬಿಣ ಅದಿರಿನ ಉತ್ಪಾದನೆ ಮತ್ತು ವಿತರಣೆ

೨.೫. ಇದುವರೆಗೆ ಕಾರ್ಮಿಕರ ಬಗ್ಗೆ ನಡೆದ ಅಧ್ಯಯನಗಳ ಸಮೀಕ್ಷೆ

# ಅಧ್ಯಯನ ಕ್ಷೇತ್ರದ ಪರಿಚಯ

ಯಾವುದೇ ಒಂದು ವೃತ್ತಿಯಾಗಲಿ, ಆ ವೃತ್ತಿಯಲ್ಲಿರುವ ಕಾರ್ಮಿಕರಾಗಲೀ ಅಥವಾ ಕಾರ್ಮಿಕರ ಸಮುದಾಯಗಳನ್ನು ಕುರಿತ ಅಧ್ಯಯನ ಕೈಗೊಳ್ಳುವಾಗ, ಆಯಾ ವ್ಯಕ್ತಿ, ವೃತ್ತಿ ಮತ್ತು ಸಮುದಾಯಗಳ ಪ್ರಾದೇಶಿಕ ಚೌಕಟ್ಟನ್ನು ಗುರುತಿಸಿಕೊಳ್ಳುವ ಹಿನ್ನೆಲೆಯಲ್ಲಿ ಒಂದು ಉದ್ದೇಶಿತ ವೃತ್ತಿಯಲ್ಲಾಗಲೀ, ಸಮುದಾಯಗಳಲ್ಲಾಗಲೀ ಅಥವಾ ಕಾರ್ಮಿಕರಲ್ಲಾಗಲಿ ಅಡಗಿರುವ ಸೂಕ್ಷ್ಮ ವಿಷಯಗಳ ಬಗ್ಗೆ ಕೂಲಂಕುಶವಾಗಿ ತಿಳಿದುಕೊಳ್ಳುವುದು ಅತ್ಯವಶ್ಯಕ. ಈ ಹಿನ್ನೆಲೆಯಲ್ಲಿ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಭೌಗೋಳಿಕ, ಸಾಮಾಜಿಕ ಮತ್ತು ಆರ್ಥಿಕ (ಸಾಂಸ್ಕೃತಿಕ) ಅಂಶಗಳ ಸವಿವರಗಳನ್ನು ನೀಡಲಾಗಿದೆ.

ಪ್ರಸ್ತುತ ಅಧ್ಯಯನದ ಅಧ್ಯಾಯವನ್ನು ಮೂರು ಭಾಗವಾಗಿ ವಿಭಜಿಸಲಾಗಿದ್ದು. ಆರಂಭಿಕ ಹಂತದಲ್ಲಿ ಅಧ್ಯಯನಕ್ಕೆ ಮೀಸಲಾದ ಕ್ಷೇತ್ರದಲ್ಲಿರುವ ಭೌಗೋಳಿಕ, ಸಾಮಾಜಿಕ, ಆರ್ಥಿಕ ಮಾಹಿತಿಗಳನ್ನು ಕರ್ನಾಟಕ ರಾಜ್ಯದ ಒಟ್ಟು ಅಂಕಿ-ಅಂಶಗಳೊಂದಿಗೆ ಹೋಲಿಕೆ ಮಾಡಿರುವ ವಿವರಗಳನ್ನು ಕಾಣಬಹುದು. ಇಂತಹ ಕ್ರಮದಿಂದ ರಾಜ್ಯದಲ್ಲಿ ಜಿಲ್ಲೆಯ ಸ್ಥಾನಮಾನಗಳನ್ನು ಅರಿಯಲು ಸಹಾಯಕ ವಾಗುತ್ತದೆಂಬ ಆಶಯವು ಅಡಗಿದೆ. ಹಾಗೆಯೇ ಮೂರನೇ ಭಾಗವಾಗಿ ಇದುವರೆಗೂ ಬೇರೆ-ಬೇರೆ ಕೈಗಾರಿಕೆಗಳಲ್ಲಿರುವ ಕಾರ್ಮಿಕರಿಗೆ ಸಂಬಂಧಿಸಿದಂತೆ ನಡೆದ ಅಧ್ಯಯನಗಳನ್ನು ಸಂಕ್ಷಿಪ್ತವಾಗಿ ಪರಾಮರ್ಶಿಸುವುದರ ಜೊತೆಗೆ ಗಣಿಗಾರಿಕೆಯಲ್ಲಿ ನಡೆದಿರುವ ಅಧ್ಯಯನಗಳನ್ನು ತೌಲನಿಕವಾಗಿ ವಿಶ್ಲೇಷಿಸಲಾಗಿದೆ. ಎರಡನೇ ಭಾಗವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಲಭ್ಯವಿರುವ ಕಬ್ಬಿಣ ಮತ್ತು ಮ್ಯಾಂಗನೀಸ್ ಸಂಪನ್ಮೂಲಗಳ ಉತ್ಪಾದನೆ ಮತ್ತು ವಿತರಣೆಯ ಮಾಹಿತಿಯನ್ನು ಕಾಣಬಹುದು.

### ಕ್ಷೇತ್ರದ ಪರಿಚಯ

ಬಳ್ಳಾರಿ ಜಿಲ್ಲೆ ಕರ್ನಾಟಕದ ಪೂರ್ವ ಮೇರೆಯನ್ನು ಪಡೆದುಕೊಂಡು, ಮಧ್ಯ ಭಾಗದಲ್ಲಿ ನೆಲೆಗೊಂಡಿದೆ. ೧೯೫೩ರಲ್ಲಿ ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳ ಸಹಯೋಗದಲ್ಲಿ ನಿರ್ಮಾಣವಾದ ತುಂಗಾಭದ್ರಾ ನದಿ ಜಿಲ್ಲೆಯ ನೈಸರ್ಗಿಕ ಮೇರೆಯಾಗಿದ್ದು, ಅದು ಪಶ್ಚಿಮದಲ್ಲಿ ಕೊಪ್ಪಳ ಜಿಲ್ಲೆಯನ್ನು ಹಾಗೂ ಉತ್ತರದಲ್ಲಿ ರಾಯಚೂರು ಜಿಲ್ಲೆಯನ್ನು ಪ್ರತ್ಯೇಕಿಸುತ್ತದೆ. ತುಂಗಾಭದ್ರ ನದಿಯು ಜಿಲ್ಲೆಯ

ಹೃದಯ ಭಾಗದಲ್ಲಿ ಸುಮಾರು ೫೦ ಕಿ.ಮೀ. ದೂರದವರೆಗೆ ಹರಿದಿದೆ. ಬಳ್ಳಾರಿ ಜಿಲ್ಲೆ ಈ ನದಿಯ ಬಲದಂಡೆಯ ಮೇಲೆ ನೆಲೆಗೊಂಡಿದ್ದು, ಇದು ಜಿಲ್ಲೆಯ ಉತ್ತರದ ಮೇರೆಯನ್ನು ನಿಗಧಿಪಡಿಸುತ್ತದೆ. ಇಂತಹ ದಂಡೆಯ ಮೇಲೆ ವಿಜಯನಗರ ಸಾಮ್ರಾಜ್ಯದ ರಾಜ್ಯಧಾನಿ ಹಂಪಿ ಪಟ್ಟಣವು ನೆಲೆಗೊಂಡಿದೆ. ಇಂತಹ ಐತಿಹಾಸಿಕ ಹಿನ್ನೆಲೆಯಿಂದಾಗಿ, ಎಲ್ಲಾ ಋತುಮಾನಗಳಲ್ಲಿ ವಿಶ್ವದ ಪ್ರವಾಸಿಗರನ್ನು ಆಕರ್ಷಿಸಿ, ಪ್ರವಾಸೋದ್ಯಮ ತಾಣವಾಗಿ ಮಾರ್ಪಟ್ಟಿದೆ. ಜಿಲ್ಲೆಯ ಸಂಡೂರು ತಾಲ್ಲೂಕಿನ ಎತ್ತರವಾದ ಬೆಟ್ಟ ಗುಡ್ಡಗಳು ಸಮುದ್ರದ ಮಟ್ಟದಿಂದ ೩೪೦೦ ಅಡಿ ಎತ್ತರದಲ್ಲಿವೆ. ಬಳ್ಳಾರಿ ಜಿಲ್ಲೆ ಕರ್ನಾಟಕ ರಾಜ್ಯದ ಪೂರ್ವಭಾಗದ ಮಧ್ಯದಲ್ಲಿ, ದಕ್ಷಿಣೋತ್ತರವಾಗಿ ಹಬ್ಬಿಕೊಂಡಿದೆ. ಇದು ೧೪°-೧೩° ಮತ್ತು ೧೫°-೫೦° ಉತ್ತರ ಅಕ್ಷಾಂಶ ಹಾಗೂ ೭೫°-೪೦° ಮತ್ತು ೭೭°-೧೧° ಪೂರ್ವ ರೇಖಾಂಶಗಳ ಮಧ್ಯದಲ್ಲಿದೆ. ಈ ಜಿಲ್ಲೆಯ ಉತ್ತರವಾಗಿ ರಾಯಚೂರು ಜಿಲ್ಲೆ, ಪಶ್ಚಿಮದಲ್ಲಿ ಹಾವೇರಿ ಜಿಲ್ಲೆ, ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆ ಹಾಗೂ ಪೂರ್ವಭಾಗದಲ್ಲಿ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆ ಮತ್ತು ಅನಂತಪುರ ಜಿಲ್ಲೆಗಳಿಂದ ಸುತ್ತುವರೆದಿದೆ.

ಕರ್ನಾಟಕ ರಾಜ್ಯದ ಒಟ್ಟು ಭೌಗೋಳಿಕ ಪ್ರದೇಶವು ೧,೯೧,೭೯೧ ಚ.ಕಿ.ಮೀ. ವಿಸ್ತೀರ್ಣದಲ್ಲಿ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶವು ಸುಮಾರು ೮೪೨೦ಚ.ಕಿ.ಮೀ. ವಿಸ್ತೀರ್ಣವನ್ನು ಪಡೆದಿದೆ. ಅಂದರೆ ಜಿಲ್ಲೆಯ ಒಟ್ಟು ಶೇಕಡ ೬ ರಷ್ಟು ಭೌಗೋಳಿಕ ವಿಸ್ತೀರ್ಣವನ್ನು ಹೊಂದಿ ರಾಜ್ಯದಲ್ಲಿ ೧೧ನೇ ಸ್ಥಾನವನ್ನು ಪಡೆದುಕೊಂಡಿದೆ. ಇದರಲ್ಲಿ ಬಳ್ಳಾರಿ ತಾಲ್ಲೂಕಿನ ಭೌಗೋಳಿಕ ವ್ಯಾಪ್ತಿ ಅತೀ ದೊಡ್ಡದಾಗಿದ್ದು, ಅದು ೧೬೪೯ ಚ.ಕಿ.ಮೀ.(ಶೇಕಡ ೨೦)ಗಳಿದ್ದರೆ, ಅತೀ ಕಡಿಮೆ ೯೩೪ ಚ.ಕಿ.ಮೀ.(ಶೇ ೧೧)ರಷ್ಟು ವಿಸ್ತೀರ್ಣವನ್ನು ಹೊಸಪೇಟೆ ತಾಲ್ಲೂಕು ಹೊಂದಿದೆ. ಉಳಿದ ತಾಲ್ಲೂಕುಗಳಾದ ಹಗರಿಬೊಮ್ಮನಹಳ್ಳಿ ೯೪೭ ಚ.ಕಿ.ಮೀ. ಹಡಗಲಿ ೯೪೮ ಚ.ಕಿ.ಮೀ., ಸಿರುಗುಪ್ಪ ೧೦೪೨ ಚ.ಕಿ.ಮೀ. ಸಂಡೂರು ೧೨೫೮ ಚ.ಕಿ.ಮೀ. ಮತ್ತು ಕೂಡ್ಲಿಗಿ ೧೬೦೨ ಚ.ಕಿ.ಮೀ.ಗಳಷ್ಟು ಭೌಗೋಳಿಕ ವ್ಯಾಪ್ತಿಯನ್ನು ಪಡೆದುಕೊಂಡಿವೆ. ಬಳ್ಳಾರಿ ಜಿಲ್ಲೆಯು ಕೇಂದ್ರ ಸ್ಥಳವಾಗಿದ್ದು. ಅದು ರಾಜಧಾನಿ ಬೆಂಗಳೂರಿನಿಂದ ಸುಮಾರು ೩೦೪ ಕಿ.ಮೀ. ದೂರದಲ್ಲಿದೆ.

### ೧. ನದಿಗಳು ಮತ್ತು ಉಪನದಿಗಳು

ಬಳ್ಳಾರಿ ಜಿಲ್ಲೆಯ ಮುಖ್ಯನದಿಗಳೆಂದರೆ, ತುಂಗಾಭದ್ರ ನದಿ ಮತ್ತು ಅದರ ಉಪನದಿಗಳಾದ ಹಗರಿ ಹಾಗೂ ಚಿಕ್ಕಹಗರಿ ನದಿಗಳು. ಇವುಗಳು ಜಿಲ್ಲೆಯಲ್ಲಿ ಪಶ್ಚಿಮ ಮತ್ತು ಉತ್ತರ ಮೇರೆಗಳನ್ನು ಸೃಷ್ಟಿಸಿದ್ದು, ಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ ಮತ್ತು ಶಿರಗುಪ್ಪ ತಾಲ್ಲೂಕುಗಳಲ್ಲಿ ಸುಮಾರು ೨೦೦ ಮೈಲುಗಳ ವ್ಯಾಪ್ತಿಯಲ್ಲಿ ಹರಿದಿವೆ. ಹಗರಿ ನದಿಯು ಪೂರ್ವ ತಾಲ್ಲೂಕುಗಳ

ಮೂಲಕ ಹರಿಯುತ್ತಾ, ೯೩ಕಿ.ಮೀ.ಗಳ ದೂರದವರೆಗೆ ವ್ಯಾಪಿಸಿದೆ. ಚಿಕ್ಕಹಗರಿಯು ಪಶ್ಚಿಮ ತಾಲ್ಲೂಕುಗಳ ಮೂಲಕ ೭೪ ಕಿ.ಮೀ.ಗಳಷ್ಟು ಹರಿಯುತ್ತದೆ. ಹಾಗೆಯೇ ಕೂಡ್ಲಿಗಿ, ಸಂಡೂರು ಇತ್ಯಾದಿ ತಾಲ್ಲೂಕುಗಳಲ್ಲಿ ನೂರಾರು ಕೆರೆಗಳು, ತೆರೆದ ಬಾವಿ, ಕೊಳವೆಬಾವಿಗಳ ಜೊತೆಗೆ ನೂರಾರು ಹಳ್ಳಗಳು, ಝರಿಗಳು ನೀರಾವರಿ ಸೌಕರ್ಯವನ್ನು ಒದಗಿಸಿವೆ. ೧೯೫೩ರಲ್ಲಿ ನಿರ್ಮಾಣವಾದ ತುಂಗಾಭದ್ರಾ ಜಲಾಶಯದ ನೀರಿನ ಸಾಮರ್ಥ್ಯ ೧೩೩ ಟಿ.ಎಂ.ಸಿ. ಇದ್ದದ್ದು, ಪ್ರಸ್ತುತ ಸನ್ನಿವೇಶದಲ್ಲಿ ಕೇವಲ ೧೦೪ ಟಿ.ಎಂ.ಸಿ.ಯಷ್ಟು ನೀರಿನ ಸಂಗ್ರಹ ಸಾಮರ್ಥ್ಯವನ್ನು ಉಳಿಸಿಕೊಂಡಿದೆ. ಇದು ಪ್ರಮುಖವಾಗಿ ಬಳ್ಳಾರಿ, ರಾಯಚೂರು ಹಾಗೂ ಆಂಧ್ರಪ್ರದೇಶದ ಹಲವಾರು ಜಿಲ್ಲೆಗಳಿಗೆ ಕೃಷಿ ಹಾಗೂ ಕುಡಿಯುವ ನೀರನ್ನು ಒದಗಿಸುತ್ತದೆ. ಸಂಡೂರಿನಲ್ಲಿ ನಾರೀಹಳ್ಳ ಜಲಾಶಯ ಮತ್ತು ಹಗರಿಬೊಮ್ಮನಹಳ್ಳಿಯ ಮಾಲ್ವಿ ಆಣೆಕಟ್ಟುಗಳು ಆಯಾ ತಾಲ್ಲೂಕಿನ ನೀರಾವರಿ ಸಂಗ್ರಹದ ಪ್ರಮುಖ ಮೂಲಗಳಾಗಿವೆ.

### ೨. ಮಣ್ಣು ಮತ್ತು ಹವಾಮಾನ

ಜಿಲ್ಲೆಯು ಕಪ್ಪು ಮತ್ತು ಕೆಂಪುಮಣ್ಣಿನ ಭೂಪ್ರದೇಶಗಳ ನಮೂನೆಗಳಿಂದ ಕೂಡಿದೆ. ಬಳ್ಳಾರಿ ತಾಲ್ಲೂಕಿನಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಕಪ್ಪು ಮಣ್ಣಿನ ಪ್ರದೇಶಗಳಿದ್ದು, ಅದು ಹೆಚ್ಚು ಫಲವತ್ತಾಗಿಯು, ತೇವಾಂಶದಿಂದ ಕೂಡಿದೆ. ಹೊಸಪೇಟೆ, ಹಡಗಲಿ, ಹರಪನಹಳ್ಳಿ, ಕೂಡ್ಲಿಗಿ, ಸಂಡೂರು ಮತ್ತು ಹಗರಿಬೊಮ್ಮನಹಳ್ಳಿ, ತಾಲ್ಲೂಕುಗಳು ಮರಳು ಮಿಶ್ರಿತ ಕೆಂಪು ಹಾಗೂ ಕಪ್ಪು ಮಣ್ಣಿನಿಂದ ಕೂಡಿವೆ. ಈ ಭಾಗದಲ್ಲಿ ಹೆಚ್ಚಾಗಿ ಭತ್ತ, ಜೋಳ, ಸಜ್ಜೆ, ನೆಲಗಡಲೆ, ರಾಗಿ ಇತ್ಯಾದಿ ಬೆಳೆಗಳ ಜೊತೆಗೆ ಕೆಲವು ತೋಟಗಾರಿಕೆಯ ಬೆಳೆಗಳು ಪ್ರಧಾನವಾಗಿ ಕಂಡುಬರುತ್ತವೆ.

ಜಿಲ್ಲೆಯ ಹವಾಮಾನವು ಸಾಮಾನ್ಯವಾಗಿ ಒಣಹವೆಯಿಂದ ಕೂಡಿದ್ದು, ಅತಿಹೆಚ್ಚು ಉಷ್ಣಾಂಶವು ಜಿಲ್ಲೆಯಲ್ಲಿ ದಾಖಲಾಗಿದೆ. ಅದು ಗರಿಷ್ಟ ಉಷ್ಣಾಂಶವು ೧೫°ಯಿಂದ ೪೫°ಡಿಗ್ರಿಯವರೆಗೆ ಇರುತ್ತದೆ. ಹಾಗೆಯೇ ಚಳಿಗಾಲದಲ್ಲಿ ಕನಿಷ್ಟ ಉಷ್ಣಾಂಶವು ೯° ರಿಂದ ೧೦° ಸೆಂಟಿಗ್ರೇಡ್‌ನಷ್ಟಿರುತ್ತದೆ.

### ೩. ಭೂ-ವಿಜ್ಞಾನ

ಬಳ್ಳಾರಿ ಜಿಲ್ಲೆಯು ಕರ್ನಾಟಕದ ಕೇಂದ್ರ ಭೂಭಾಗವಾಗಿದ್ದು, ಭೌಗೋಳಿಕವಾಗಿ ದೊಡ್ಡ, ದೊಡ್ಡ ಬಂಡೆಕಲ್ಲುಗಳೊಂದಿಗೆ, ಬಿಂಚುಕಲ್ಲು, ಮರಳುಗಳಿಂದ ಕೂಡಿದೆ. ಪ್ರಮುಖ ಖನಿಜಗಳಾದ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರುಗಳಲ್ಲಿ, ೧೨.೨೫ ಮಿಲಿಯನ್ ಟನ್‌ಗಳಷ್ಟು ಮ್ಯಾಂಗನೀಸ್ ಅದಿರು ಹಾಗೂ ೭೮೨ ಮಿಲಿಯನ್ ಟನ್‌ಗಳಷ್ಟು ಕಬ್ಬಿಣದ ಉತ್ಕೃಷ್ಟ ಅದಿರುಗಳ ಸಂಪನ್ಮೂಲ ಹೊಂದಿದೆ. ಅದು ಸಂಡೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಶೇಕಡ ೭೫ರಷ್ಟು ದೊರೆಯುತ್ತದೆ. ಹೊಸಪೇಟೆಯ ೨ನೇ ಸ್ಥಾನದಲ್ಲಿ ಬರುತ್ತದೆ.

## ೪. ರಾಜಕೀಯ ಸ್ಥಾನಮಾನ

ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆಯ ರಾಜಕೀಯ ಸ್ಥಾನಮಾನವು ತುಂಬಾ ವೈಶಿಷ್ಟತೆಗಳಿಂದ ಕೂಡಿದ್ದು, ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟಗಳಲ್ಲಿ ಪ್ರಖ್ಯಾತಿಯನ್ನೂ ಗಳಿಸಿದೆ. ಬಳ್ಳಾರಿ ಜಿಲ್ಲೆ ಈ ಹಿಂದೆ ರಾಯಲಸೀಮಾ ಭಾಗವಾಗಿ, ಆಗಿನ ಮದ್ರಾಸ್ ಪ್ರಾಂತ್ಯದಲ್ಲಿದ್ದಾಗ ಎಚ್. ರೆಡ್ಡಿ ಮಹಾಬಳೇಶ್ವರಪ್ಪ, ಎಮ್ಮಿಗನೂರು ಗಾದಿಲಿಂಗನ ಗೌಡ ಹಾಗೂ ಹಾಲರ್ವಿ ಸೀತಾರಾಮರೆಡ್ಡಿ ಈ ಜಿಲ್ಲೆಯ ಜನಪ್ರತಿನಿಧಿಗಳಾಗಿ ಆಯ್ಕೆಗೊಂಡಿದ್ದರಲ್ಲದೆ, ಹಾಲರ್ವಿ ಸೀತಾರಾಮರೆಡ್ಡಿ ಹಣಕಾಸು ಸಚಿವರಾಗಿ ಮದ್ರಾಸ್ ಸರ್ಕಾರದಲ್ಲಿ ಬಳ್ಳಾರಿಯನ್ನು ಪ್ರತಿನಿಧಿಸಿದ್ದರು. ತದನಂತರ ೧೯೫೩ರಲ್ಲಿ ರಾಯಲ್‌ಸೀಮಾ ಭಾಗದ ಕಡಪ, ಕರ್ನೂಲು, ಅನಂತಪುರ ಜಿಲ್ಲೆಗಳು ಭಾಷಾ ಆಧಾರದ ಮೇಲೆ ಆಂಧ್ರಪ್ರದೇಶಕ್ಕೆ ಸೇರ್ಪಡೆಯಾದರೆ, ಬಳ್ಳಾರಿ ಜಿಲ್ಲೆಯು ಆದವಾನಿ, ಆಲೂರು, ರಾಯದುರ್ಗ ತಾಲ್ಲೂಕುಗಳನ್ನು ಹೊರತುಪಡಿಸಿ, ಹಳೆಯ ಮೈಸೂರಿನೊಂದಿಗೆ ವಿಲೀನಗೊಂಡಿತು. ನಂತರ ೧೯೫೬ರಲ್ಲಿ ದೇಶಾದ್ಯಂತ, ಭಾಷಾವಾರು ಪ್ರಾಂತಗಳು ರಚನೆಗೊಂಡಾಗ, ಮುಂಬೈ ಪ್ರಾಂತದ ಬೆಳಗಾವಿ, ಬಿಜಾಪುರ, ಧಾರವಾಡ, ಕಾರವಾರ ಹಾಗೂ ನಿಜಾಂ ಪ್ರಾಂತ್ಯದ ರಾಯಚೂರು, ಗುಲ್ಬರ್ಗಾ, ಬೀದರ್ ಮತ್ತು ಮದ್ರಾಸ್‌ನಿಂದ ಬಳ್ಳಾರಿ, ಮಂಗಳೂರು ಹಾಗೂ ಸ್ವತಂತ್ರ ರಾಜ್ಯವಾಗಿದ್ದ ಮಡಿಕೇರಿ ಸೇರಿ ಒಟ್ಟು ೧೯ ಜಿಲ್ಲೆಗಳ ವಿಶಾಲ ಮೈಸೂರು ರಾಜ್ಯ ಸ್ಥಾಪನೆಗೊಂಡಿತು. ೧೯೫೬ರಲ್ಲಿ ಪ್ರಪ್ರಥಮವಾಗಿ ಜಿಲ್ಲೆಯ ಡಾ.ಆರ್. ನಾಗನಗೌಡ, ಬಿ.ಡಿ. ಜತ್ತಿ ಹಾಗೂ ಎಸ್. ನಿಜಲಿಂಗಪ್ಪನವರ ಸಂಪುಟದಲ್ಲಿ ಮಂತ್ರಿಯಾದರೆ, ಡಿ. ದೇವರಾಜ ಅರಸು ಸಂಪುಟದಲ್ಲಿ ಎಂ.ವೈ. ಘೋರ್ಪಡೆ ಹಾಗೂ ಎಂ.ಎಂ.ಜೆ. ಸಧ್ಯೋಜಾತ ಕ್ಯಾಬಿನೆಟ್ ದರ್ಜೆಯ ಸಚಿವರಾಗಿ ಸೇವೆ ಸಲ್ಲಿಸಿದ್ದಾರೆ. ಶ್ರೀಮತಿ ಬಸವರಾಜೇಶ್ವರಿಯವರು ಕೇಂದ್ರ ಸಂಪುಟದಲ್ಲಿ ಮಹಿಳಾ ಮತ್ತು ಮಕ್ಕಳ ಸಚಿವೆಯಾಗಿ ಸೇವೆ, ನಂತರ ರಾಜ್ಯದಲ್ಲಿ ರಾಮಕೃಷ್ಣ ಹೆಗಡೆ, ದೇವೇಗೌಡ ಎಸ್.ಎಂ. ಕೃಷ್ಣ ಮತ್ತು ಧರ್ಮಸಿಂಗ್ ಸಂಪುಟದಲ್ಲಿ ಎಂ.ಪಿ.ಪ್ರಕಾಶ್, ಎನ್.ಎಮ್.ನಬಿ, ಎಂ. ರಾಮಪ್ಪ, ಇ.ಟಿ. ಶಂಭುನಾಥ, ಇ. ರಾಮಯ್ಯ, ದಿವಾಕರ ಬಾಬು, ಅಲ್ಲಂ ವೀರಭದ್ರಪ್ಪ ಮತ್ತು ಭಾಗೀರತಿ ಮರುಳಸಿದ್ದನಗೌಡ ಇತ್ಯಾದಿ ಪ್ರಮುಖರು, ರಾಜ್ಯದ ವಿವಿಧ ಖಾತೆಗಳನ್ನು ನಿರ್ವಹಿಸಿದ್ದಾರೆ. ಅಲ್ಲದೇ ಜಿಲ್ಲೆಯ ಮಹಾಜನತೆ ಖ್ಯಾತ ಅರ್ಥಶಾಸ್ತ್ರಜ್ಞರಾದ ಡಾ. ವಿ.ಕೆ.ಆರ್.ವಿ. ರಾವ್ ಮತ್ತು ರಾಷ್ಟ್ರೀಯ ಅಧ್ಯಕ್ಷೆ ಸೋನಿಯಾಗಾಂಧಿ ಅವರನ್ನು ಲೋಕಸಭೆಗೆ ಆಯ್ಕೆ ಮಾಡಿ ಕಳುಹಿಸಿಕೊಟ್ಟಿದೆ. ಜೊತೆಗೆ ಜಿಲ್ಲೆಯ ಹಿರಿಯ ರಾಜಕಾರಣಿ ಎಂ.ಪಿ.ಪ್ರಕಾಶ್ ಕರ್ನಾಟಕ ರಾಜ್ಯದ ಉಪ ಮುಖ್ಯಮಂತ್ರಿ ಸ್ಥಾನವನ್ನು ಅಲಂಕರಿಸಿ, ರಾಜಕೀಯ ಇತಿಹಾಸ ನಿರ್ಮಿಸಿದ ದಾಖಲೆ ಈ ಜಿಲ್ಲೆಗಿದೆ.

ಬಳ್ಳಾರಿ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶದಲ್ಲಿ ನಗರ ಪ್ರದೇಶದ ವ್ಯಾಪ್ತಿಯ ೧೫೨.೫ ಚ.ಕಿ.ಮೀ.(ಶೇ ೧.೬)ಗಳಷ್ಟಿದ್ದರೆ, ಉಳಿದ ೯೭೩೩ ಚ.ಕಿ.ಮೀ. (ಶೇ.೯೮.೪) ವ್ಯಾಪ್ತಿಯು ಗ್ರಾಮೀಣ ಭಾಗವಾಗಿದೆ. ಈ ಅಂಕಿ ಅಂಶಗಳ ಆಧಾರದ ಮೇಲೆ ಬಳ್ಳಾರಿ ಜಿಲ್ಲೆಯನ್ನು ರಾಜ್ಯದಲ್ಲಿ ಗ್ರಾಮೀಣ ಜಿಲ್ಲೆಯೆಂಬುದಾಗಿ ಗುರುತಿಸಲಾಗುತ್ತದೆ. ೧೯೯೯ರಲ್ಲಿ ಕರ್ನಾಟಕ ಘನ ಸರ್ಕಾರವು ರಾಜ್ಯದಲ್ಲಿ ಹೊಸ ಜಿಲ್ಲೆಗಳಾಗಿ ನಾಮಕರಣಗೊಳಿಸಿದ ಹಿನ್ನೆಲೆಯಲ್ಲಿ ಜಿಲ್ಲೆಯ ಹರಪನಹಳ್ಳಿ ತಾಲೂಕು ಹೊಸ ಜಿಲ್ಲೆಯಾಗಿ ಪರಿವರ್ತನೆಗೊಂಡ ದಾವಣಗೇರೆ ವ್ಯಾಪ್ತಿಗೆ ಸೇರ್ಪಡೆಯಾಯಿತು. ಇದರಿಂದ ಬಳ್ಳಾರಿ ಜಿಲ್ಲೆಯು ಪ್ರಸ್ತುತ ಸನ್ನಿವೇಶದಲ್ಲಿ ೭ ತಾಲ್ಲೂಕುಗಳನ್ನು ಹೊಂದಿದೆ. ಅವುಗಳಲ್ಲಿ ಬಳ್ಳಾರಿ ಶಿರಗುಪ್ಪ, ಸಂಡೂರು ಹಾಗೂ ಹೊಸಪೇಟೆಯನ್ನು ಪೂರ್ವಭಾಗದ ತಾಲ್ಲೂಕುಗಳೆಂದೂ ಮತ್ತು ಹೂವಿನ ಹಡಗಲಿ, ಹಗರಿಬೊಮ್ಮನ ಹಳ್ಳಿ ಹಾಗೂ ಕೂಡ್ಲಿಗಿಯನ್ನು ಪಶ್ಚಿಮದ ತಾಲೂಕುಗಳೆಂದೂ ಗುರುತಿಸಲಾಗಿದೆ. ಒಟ್ಟಾರೆಯಾಗಿ ಜಿಲ್ಲೆಯ ಜನಸಂಖ್ಯೆಯ ಪ್ರಮಾಣ, ಶಿಕ್ಷಣ, ಆದಾಯ, ಲೈಂಗಿಕ ಅನುಪಾತ ಹಾಗೂ ಸರಾಸರಿ ಮಳೆಯ ಪ್ರಮಾಣದೊಂದಿಗೆ ಇನ್ನಿತರ ಅಂಶಗಳನ್ನು ಈ ಕೆಳಗಿನ ಕೋಷ್ಟಕ ೨.೧ರಿಂದ ತಿಳಿಯಬಹುದು.

**ಕೋಷ್ಟಕ ೨.೧**

**೨೦೦೧ರ ಜನಗಣತಿ ಪ್ರಕಾರ ಬಳ್ಳಾರಿ ಜಿಲ್ಲೆಯ ಜನಸಂಖ್ಯೆ ಹಾಗೂ ಸಾಕ್ಷರತೆಯ ಪ್ರಮಾಣ**

| ಕ್ರ. | | ಕರ್ನಾಟಕ | | | ಬಳ್ಳಾರಿ | | |
|---|---|---|---|---|---|---|---|
| ಸಂ. | ವಿವರಗಳು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಎಸ್.ಸಿ. | ೪೩೩೯೭೪೫ | ೪೨೨೪೧೮೫ | ೮೫೬೩೯೩೦ | ೧೮೮೮೩೬ | ೧೮೫೬೪೨ | ೪೦೫೨೨೦ |
| ೨. | ಎಸ್.ಟಿ. | ೧೭೦೭೭೪೮ | ೧೭೦೭೭೪೮ | ೩೪೯೩೯೮೬ | ೧೮೩೬೬೨ | ೧೮೦೯೭೬ | ೩೬೪೬೩೮ |
| ೩. | ಇತರೆ | ೨೬೮೯೮೯೧೮ | ೨೫೯೫೧೬೪೪ | ೫೨೮೫೦೫೬೨ | ೧೦೨೯೭೧೪ | ೯೯೭೪೨೬ | ೨೦೨೭೧೪೦ |
| ೪. | ಸಾಕ್ಷರತೆ | ೭೬.೨೯ | ೫೭.೨೯ | ೬೭.೦೪ | ೬೯.೨೦ | ೪೫.೩೦ | ೫೭.೪೦ |

ಮಾಹಿತಿ : ಕರ್ನಾಟಕ ರಾಜ್ಯ ಅಂಕಿ-ಅಂಶಗಳ ಸಂಗ್ರಹ, ೨೦೦೩-೦೪

ಈ ಮೇಲಿನ ೨.೧ರ ಕೋಷ್ಟಕವು ಜಿಲ್ಲೆಯ ಒಟ್ಟು ಜನಸಂಖ್ಯೆಯ ಜೊತೆಗೆ ಜಿಲ್ಲೆಯಲ್ಲಿ ನೆಲೆಸಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಪನ್ಮೂಲವನ್ನು ತಿಳಿಸಿಕೊಡುತ್ತದೆ. ಇದರ ಜೊತೆಗೆ ಜಿಲ್ಲೆಯ ಮಾನವ ಸಂಪನ್ಮೂಲವು ಪಡೆದುಕೊಂಡಿರುವ ಸಾಕ್ಷರತೆಯ ಪ್ರಮಾಣವನ್ನು ತೋರಿಸುತ್ತದೆ. ಕರ್ನಾಟಕ ರಾಜ್ಯದ ಒಟ್ಟು ಪರಿಶಿಷ್ಟ ಜಾತಿಯ ಪ್ರಮಾಣ ೮೫೬೩೯೩೦ ಆಗಿದೆ.

ಅದರಲ್ಲಿ ಪುರುಷ ೪೩೯೭೪೫ ಹಾಗೂ ಮಹಿಳೆ ೪೨೨೪೧೮೫ ರಷ್ಟಿದ್ದಾರೆ. ಹಾಗೆಯೇ ಪರಿಶಿಷ್ಟ ಪಂಗಡ ಕರ್ನಾಟಕದಲ್ಲಿ ಒಟ್ಟು ೩೪೬೯೮೬ ರಲ್ಲಿ ಗಂಡು ೧೭೦೭೭೪೮ ಮತ್ತು ಹೆಣ್ಣು ೧೭೦೭೭೪೮ ಆಗಿದೆ. ಬಳ್ಳಾರಿ ಜಿಲ್ಲೆಯ ಒಟ್ಟು ಸಾಕ್ಷರತೆಯ ಪ್ರಮಾಣ ಶೇಕಡ ೫೭.೪೦ ರಷ್ಟು ಇದೆ. ಅದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇಕಡ ೬೯.೨೦ ರಷ್ಟಿದ್ದರೆ, ಮಹಿಳೆಯರ ಪ್ರಮಾಣ ಶೇ ೪೫.೩೦ ಆಗಿರುತ್ತದೆ.

ಕೋಷ್ಟಕ ೨.೨ : ಜಿಲ್ಲೆಯ ಜನಸಾಂದ್ರತೆ ಹಾಗೂ ಲಿಂಗಾನುಪಾತ

| ಕ್ರ. ಸಂ. | ವಿವರಗಳು | ಜನಸಾಂದ್ರತೆ ಕಿ.ಮಿ.ಗೆ | ಒಟ್ಟು ಲಿಂಗಾನುಪಾತ | ೦-೬ ವರ್ಷದ ಲಿಂಗಾನುಪಾತ |
|---|---|---|---|---|
| ೧. | ಕರ್ನಾಟಕ | ೨೭೫ | ೯೬೪ | ೯೪೧ |
| ೨. | ಬಳ್ಳಾರಿ | ೨೪೦ | ೯೬೯ | ೯೪೭ |

ಮಾಹಿತಿ : ಕರ್ನಾಟಕ ರಾಜ್ಯ ಅಂಕಿ-ಅಂಶಗಳ ಸಂಗ್ರಹ, ೨೦೦೩-೦೪

ಈ ಮೇಲ್ಕಾಣಿಸಿದ ೨.೨ರ ಕೋಷ್ಟಕವು ಜಿಲ್ಲೆಯ ಜನಸಾಂದ್ರತೆಯ ಪ್ರಮಾಣ ಹಾಗೂ ಲಿಂಗಾನುಪಾತದ ದರವನ್ನು ಕಾಣಬಹುದಾಗಿದೆ. ರಾಜ್ಯದಲ್ಲಿ ಪ್ರತಿ ಕಿ.ಮೀ.ಗೆ ೨೭೫ ಜನಸಾಂದ್ರತೆ ವಾಸವಾಗಿದ್ದರೆ, ಬಳ್ಳಾರಿ ಜಿಲ್ಲೆಯಲ್ಲಿ ಇದರ ಪ್ರಮಾಣ ೨೪೦ರಷ್ಟು ಜನಸಾಂದ್ರತೆಯನ್ನು ಹೊಂದಿದೆ. ಕರ್ನಾಟಕದಲ್ಲಿ ೧೦೦೦ ಪುರುಷರಿಗೆ ೯೬೪ ಇದ್ದರೆ, ಬಳ್ಳಾರಿ ಜಿಲ್ಲೆಯಲ್ಲಿ ೯೬೯ ಆಗಿದೆ. ಅದರಲ್ಲೂ ವಿಶೇಷವಾಗಿ ೦-೬ ವರ್ಷದ ಒಳಗಿನ ವಯಸ್ಸಿನಲ್ಲಿರುವ ಲಿಂಗಾನುಪಾತದ ಪ್ರಮಾಣ ಕರ್ನಾಟಕದಲ್ಲಿ ೯೪೧ ಆಗಿದ್ದರೆ ಬಳ್ಳಾರಿ ಜಿಲ್ಲೆಯಲ್ಲಿ ೯೪೭ ಆಗಿರುತ್ತದೆ. ಹೀಗೆ ಜಿಲ್ಲೆಯ ಜನಸಾಂದ್ರತೆ ಹಾಗೂ ಲಿಂಗಾನುಪಾತದ ಪ್ರಮಾಣವನ್ನು ಪರಿಶೀಲಿಸಿದ ನಂತರ ಜಿಲ್ಲೆಯ ವಿವಿಧ ವಲಯಗಳಲ್ಲಿ ದುಡಿಯುವವರ ಪ್ರಮಾಣವನ್ನು ಈ ಮುಂದಿನ ೨.೩ರ ಕೋಷ್ಟಕದಿಂದ ತಿಳಿಯಬಹುದು.

ಜಿಲ್ಲೆಯಲ್ಲಿ ವಿವಿಧ ಉದ್ಯೋಗಗಳಲ್ಲಿ ತೊಡಗಿಕೊಂಡಿರುವ ಕೆಲಸಗಾರರ ಪ್ರಮಾಣವನ್ನು ತೋರಿಸುತ್ತದೆ, ಜಿಲ್ಲೆಯಲ್ಲಿ ಕೃಷಿಯು ಪ್ರಧಾನ ಉದ್ಯೋಗವಾಗಿದ್ದು, ಅದಕ್ಕೆ ಪರ್ಯಾಯವಾಗಿ ಗಣಿಗಾರಿಕೆ, ಗೃಹಕೃತ್ಯ ಮತ್ತು ಇತರೇ ಎಲ್ಲಾ ಸೇವೆಗಳು ಸೇರಿ ಒಟ್ಟು ೯,೨೦,೮೨೧ ಕಾರ್ಮಿಕ ಶಕ್ತಿಯನ್ನು ಪಡೆದಿದೆ. ಇದು ಒಟ್ಟು ಜಿಲ್ಲೆಯ ಜನಸಂಖ್ಯೆಯ ಸರಾಸರಿ ಶೇಕಡ ೪೯ ರಷ್ಟಿದೆ. ಕಾರ್ಮಿಕರು ತಮ್ಮ ದುಡಿಮೆಯಿಂದ ಕುಟುಂಬದ ಆದಾಯ ಮತ್ತು ವೆಚ್ಚಗಳನ್ನು ನಿರ್ಧರಿಸಿಕೊಳ್ಳಬೇಕಾಗಿದೆ. ಹೀಗಾಗಿ ಕಾರ್ಮಿಕರ ದುಡಿಮೆಯ ಅವಕಾಶಗಳು ಆದಾಯ, ಜೀವನವೆಚ್ಚ ಹಾಗೂ ಜೀವನದ ಭದ್ರತೆಗಳು ಜಿಲ್ಲೆಯ ಆರ್ಥಿಕ ಪರಿಸ್ಥಿತಿಯನ್ನು ನಿರ್ಧರಿಸುವಲ್ಲಿ ಪ್ರಮುಖ ಮಾನದಂಡವಾಗಿವೆ.

**ಕೋಷ್ಟಕ ೨.೩ : ಸರಾಸರಿ ದುಡಿಮೆಗಾರರ ಪ್ರಮಾಣ**

| ಕ್ರ.ಸಂ. | ವಿವರಗಳು | ಕರ್ನಾಟಕ | ಬಳ್ಳಾರಿ |
|---|---|---|---|
| ೧ | ಮುಖ್ಯ ಕೆಲಸಗಾರರು | ೧೯೩೮೪೭೫೯ | ೮೦೧೩೬೯ |
| ೨ | ಅರೆಕಾಲಿಕ ಕೆಲಸಗಾರರು | ೪೧೭೦೦೩೨ | ೧೧೯೪೫೨ |
| ೩ | ಕೆಲಸವಿಲ್ಲದವರು | ೨೯೩೧೫೭೭೧ | ೧೧೦೬೩೧೯ |
| ೪ | ವ್ಯವಸಾಯಗಾರರು | ೬೮೮೩೮೫೬ | ೨೫೧೨೦೭ |
| ೫ | ಕೃಷಿ ಕಾರ್ಮಿಕರು | ೬೨೨೬೯೪೨ | ೧೩೨೦೦ |
| ೬ | ಗೃಹಕೃತ್ಯದಲ್ಲಿರುವವರು | ೯೫೯೬೬೫ | ೨೫೭೩೭ |
| ೭ | ಇತರೆ ಸೇವೆಗಳು | ೯೪೬೪೩೨೮ | ೨೮೨೪೪೪ |
| ೮ | ಒಟ್ಟು ಕಾರ್ಮಿಕರು | ೨೩೫೩೪೭೯೧ | ೯೨೦೮೨೧ |

ಮೂಲ : ಕರ್ನಾಟಕ ಅಂಕಿ-ಅಂಶಗಳ ನೋಟ, ೨೦೦೩-೦೪

ಈ ಹಿನ್ನೆಲೆಯಲ್ಲಿ ಜಿಲ್ಲೆಯ ಒಟ್ಟು ಆದಾಯ ಮತ್ತು ಜನರ ತಲಾವರಮಾನದ ಪ್ರಮಾಣವನ್ನು ತಿಳಿದುಕೊಳ್ಳುವುದು ಸೂಕ್ತ. ಹೀಗಾಗಿ ಈ ಕೆಳಗಿನ ಕೋಷ್ಟಕ ೨.೪ ರಿಂದ ತಿಳಿಯಬಹುದು.

**ಕೋಷ್ಟಕ ೨.೪ : ೨೦೦೩-೦೪ರ ಜಿಲ್ಲೆಯ ಸರಾಸರಿ ಮಳೆ ಹಾಗೂ ಆದಾಯದ ಪ್ರಮಾಣ**

| ಕ್ರ. ಸಂ. | ವಿವರಗಳು | ಮಳೆಯ ಪ್ರಮಾಣ ಮಿ.ಮೀ.ಗಳಲ್ಲಿ | ವಾಸ್ತವಿಕ ಮಳೆ ಮಿ.ಮೀ.ಗಳಲ್ಲಿ | ಒಟ್ಟು ಆದಾಯ ಕೋಟಿ ರೂ.ಗಳಲ್ಲಿ | ತಲಾ ಆದಾಯ ಸಾವಿರ ರೂ.ಗಳಲ್ಲಿ |
|---|---|---|---|---|---|
| ೧. | ಕರ್ನಾಟಕ | ೧೧೩೯ ಮಿ.ಮಿ. | ೮೧೯ ಮಿ.ಮಿ. | ೧೦೫೬೫೭೭೫ | ೧೭೪೮೨ |
| ೨. | ಬಳ್ಳಾರಿ | ೬೩೩ ಮಿ.ಮಿ. | ೩೨೫ ಮಿ.ಮಿ. | ೩೬೬೩೫೨ | ೧೫೮೧೯ |

ಆಧಾರ : ಕರ್ನಾಟಕ ಅಂಕಿ-ಅಂಶಗಳ ನೋಟ, ೨೦೦೩-೦೪

ಈ ಮೇಲಿನ ಕೋಷ್ಟಕವು ಜಿಲ್ಲೆಯ ಒಟ್ಟು ಸರಾಸರಿ ಆದಾಯವನ್ನು ತಿಳಿಸಿಕೊಡುತ್ತದೆ. ಜಿಲ್ಲೆಯ ಪ್ರಧಾನ ಉದ್ಯೋಗ ಕೃಷಿ ಚಟುವಟಿಕೆಯಾಗಿದೆ. ಇಲ್ಲಿಯ ಕೃಷಿ ಚಟುವಟಿಕೆಗಳೆಲ್ಲವೂ ಹೆಚ್ಚಾಗಿ ಮಳೆಯನ್ನೇ ಅವಲಂಬಿಸಿರುವುದರಿಂದ, ಜಿಲ್ಲೆಯಲ್ಲಿ ಬೀಳುವ ಸರಾಸರಿ ಮಳೆಯ ವಾರ್ಷಿಕ ಪ್ರಮಾಣವು ಈ ಭಾಗದ ಜನರ ದುಡಿಮೆ, ಆದಾಯ, ವೆಚ್ಚಗಳನ್ನು ನಿರ್ಧರಿಸುವುದರಿಂದ ಕಳೆದ ೨೦೦೩-೦೪ರ ಸಾಲಿನಲ್ಲಿ ವಾಸ್ತವಿಕ ಮಳೆಯ ಪ್ರಮಾಣ ಕೇವಲ ೩೨೫ ಮಿ.ಮಿ.ಗಳಿಗೆ ಸೀಮಿತಗೊಂಡಿದೆ. ಜಿಲ್ಲೆಯ ಎಲ್ಲಾ ಮೂಲಗಳಿಂದ ಬಂದ ಒಟ್ಟು ಆದಾಯ ರೂ. ೩ ಲಕ್ಷ ೬೬ ಸಾವಿರ ಕೋಟಿ ರೂ.ಗಳಿಗೂ ಹೆಚ್ಚಿದೆ. ಇಂತಹ ಒಟ್ಟು ಜಿಲ್ಲಾದಾಯದಲ್ಲಿ ಜಿಲ್ಲೆಯ ಒಟ್ಟು ಜನಸಂಖ್ಯೆಯಿಂದ ಭಾಗಿಸಿದಾಗ, ಪ್ರತಿಯೊಬ್ಬ ಬಳ್ಳಾರಿ ಪ್ರಜೆಯ ವ್ಯಕ್ತಿಗತ ಆದಾಯವು ರೂ. ೧೫೮೧೯ ರೂ.ಗಳೆಂದು ತಿಳಿದುಬರುತ್ತದೆ.

ಜಿಲ್ಲೆಯ ಒಂದು ನಿರ್ದಿಷ್ಟ ಆದಾಯದಲ್ಲಿ ನಾಗರಿಕರಿಗಾಗಿ ಆಡಳಿತಾತ್ಮಕ ಸೇವೆಗಳು ಹೇಗೆ ರೂಪುಗೊಂಡಿವೆ, ಮತ್ತು ಅವುಗಳ ಪ್ರಮಾಣವು ಕರ್ನಾಟಕದ ಒಟ್ಟು ಆಡಳಿತಾತ್ಮಕ ಸೇವೆಗಳಿಗಿಂತ ಹೇಗೆ ಭಿನ್ನಗೊಂಡಿದೆ ಎಂಬುದನ್ನು ೨.೫ನೇ ಕೋಷ್ಠಕದಿಂದ ತಿಳಿಯಬಹುದು.

**ಕೋಷ್ಠಕ ೨.೫ : ಜಿಲ್ಲೆಯ ನಾಗರಿಕ ಮತ್ತು ಆಡಳಿತಾತ್ಮಕ ವಿವರಗಳು**

| ಕ್ರ.ಸಂ. | ವಿವರಗಳು | ಕರ್ನಾಟಕ | ಬಳ್ಳಾರಿ |
|---|---|---|---|
| ೧ | ತಾಲ್ಲೂಕು | ೧೭೬ | ೦೭ |
| ೨ | ಹೋಬಳಿ | ೭೪೫ | ೨೭ |
| ೩ | ಗ್ರಾಮಪಂಚಾಯತಿ | ೫೬೫೩ | ೧೮೯ |
| ೪ | ನಗರ/ಪಟ್ಟಣ ಪಂಚಾಯತಿ | ೨೭೦ | ೧೦ |
| ೫ | ಎ.ಪಿ.ಎಂ.ಸಿ. | ೮೪೭ | ೨೦ |
| ೬ | ದೂರವಾಣಿ ಕೇಂದ್ರಗಳು | ೨೭೦೬ | ೧೧೬ |
| ೭ | ಅಂಚೆ ಕಚೇರಿ | ೯೯೦೯ | ೪೫೬ |
| ೮ | ಯುವಕ ಮಂಡಳಿ | ೩೫೧೩ | ೧೩೭ |
| ೯ | ಯುವತಿ ಮಂಡಳಿ | ೧೯೨೪೪ | ೩೫೫ |
| ೧೦ | ವಾಣಿಜ್ಯ ಬ್ಯಾಂಕ್ | ೩೭೧೦ | ೯೪ |
| ೧೧ | ಗ್ರಾಮೀಣ ಬ್ಯಾಂಕ್ | ೧೧೨೪ | ೬೪ |
| ೧೨ | ಪಿ.ಎಲ್.ಡಿ ಬ್ಯಾಂಕ್ | ೧೭೭ | ೦೬ |
| ೧೩ | ನಗರ ಬ್ಯಾಂಕ್ | ೩೦೧ | ೦೬ |
| ೧೪ | ಇತರೆ ಸಹಕಾರಿ ಬ್ಯಾಂಕ್ | ೫೦೨೩ | ೧೫೬ |

**ಆಧಾರ :** ಕರ್ನಾಟಕ ಅಂಕಿ-ಅಂಶಗಳ ನೋಟ, ೨೦೦೩-೦೪

ಈ ಮೇಲ್ಕಾಣಿಸಿದ ೨.೫ರ ಕೋಷ್ಠಕವು ಜಿಲ್ಲೆಯಲ್ಲಿ ಕಂಡುಬರುವ ನಾಗರಿಕ ಮತ್ತು ಆಡಳಿತಾತ್ಮಕ ಮೂಲಭೂತ ಸೌಕರ್ಯಗಳನ್ನು ತೋರಿಸುತ್ತದೆ. ಕರ್ನಾಟಕ ರಾಜ್ಯಕ್ಕೆ ಹೋಲಿಸಿಕೊಂಡಂತೆ ಆಡಳಿತಾತ್ಮಕ ಸೌಲಭ್ಯಗಳು ಜಿಲ್ಲೆಯ ಜನಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ಕಡಿಮೆಯೆಂದೇ ಹೇಳಬಹುದು. ಹೇಗೆಂದರೆ ಜಿಲ್ಲೆಯಲ್ಲಿರುವ ಕೇವಲ ಬ್ಯಾಂಕಿಂಗ್ ಸೌಕರ್ಯಗಳನ್ನು ಗಮನಿಸಿದರೆ ಮೂಲಭೂತ ಸೌಕರ್ಯಗಳ ಕೊರತೆಯ ಪ್ರಮಾಣ ತಿಳಿದುಬರುತ್ತದೆ. ಜಿಲ್ಲೆಯ ಸರಾಸರಿ ಒಟ್ಟು ಜನಸಂಖ್ಯೆಗನುಗುಣವಾಗಿ ಬ್ಯಾಂಕುಗಳ ಸೌಲಭ್ಯವು ಸರಾಸರಿ ೧೦೫೪.೮ ಜನಸಂಖ್ಯೆಗೆ ೧ ಬ್ಯಾಂಕು ಶಾಖೆ ಲಭ್ಯವಿದೆ. ಹಾಗೆಯೇ ರಸ್ತೆ ಸಾರಿಗೆ, ಸಂಪರ್ಕ ಮಾಧ್ಯಮಗಳ ಕೊರತೆಯ ಪ್ರಮಾಣವು ಅತ್ಯಧಿಕವಾಗಿದೆ. ಆಧುನಿಕ ಕಾಲದಲ್ಲಿ ಮಾನವನಿಗೆ ಅತ್ಯವಶ್ಯಕವಾಗಿ ಬೇಕಾಗಿರುವ ಶಿಕ್ಷಣದ ಸೌಲಭ್ಯವು ಸಹ ತುಂಬಾ ಕಡಿಮೆಯೆಂದೇ ಹೇಳಬಹುದು. ಅವುಗಳ ಸೌಲಭ್ಯವನ್ನು ಕೋಷ್ಟಕ ೨.೬ ರಿಂದ ತಿಳಿಯಬಹುದು.

**ಕೋಷ್ಟಕ ೨.೬ : ಜಿಲ್ಲೆಯ ಶಿಕ್ಷಣದ ಸೌಕರ್ಯಗಳು**

| ಕ್ರ.ಸಂ. | ವಿವರಗಳು | ಕರ್ನಾಟಕ | ಬಳ್ಳಾರಿ |
|---|---|---|---|
| ೧ | ಅಂಗನವಾಡಿ | ೪೦೩೦೧ | ೧೩೭೨ |
| ೨ | ಪ್ರಾಥಮಿಕ | ೫೧೨೬.೩ | ೧೮೯೮ |
| ೩ | ಪ್ರೌಢಶಾಲೆ | ೮೭೩೧ | ೨೪೮ |
| ೪ | ಪದವಿ ಪೂರ್ವ | ೨೨೮೫ | ೫೨ |
| ೫ | ಸಾಮಾನ್ಯ ಪದವಿ | -- | ೧೨ |
| ೬ | ಮೆಡಿಕಲ್ | ೨೮ | ೦೧ |
| ೭ | ಇಂಜಿನಿಯರಿಂಗ್ | ೯೨ | ೦೩ |
| ೮ | ಪಾಲಿಟೆಕ್ನಿಕ್ | ೧೪೮ | ೦೬ |
| ೯ | ಗ್ರಂಥಾಲಯ | ೩೫೨೪ | ೧೬೯ |

ಈ ೨.೬ನೇ ಕೋಷ್ಟಕವು ಬಳ್ಳಾರಿ ಜಿಲ್ಲೆಯಲ್ಲಿರುವ ಸರಾಸರಿ ಶಿಕ್ಷಣದ ಸೌಲಭ್ಯಗಳ ಬಗ್ಗೆ ಸ್ಪಷ್ಟಪಡಿಸುತ್ತದೆ. ಜಿಲ್ಲೆಯ ಭೌಗೋಳಿಕ ವ್ಯಾಪ್ತಿ, ಹಾಗೂ ಜನಸಂಖ್ಯೆಯ ಆಧಾರವಾಗಿ ಲಭ್ಯವಿರುವ ಶಿಕ್ಷಣದ ಸೌಲಭ್ಯಗಳನ್ನು ತಾಳೆ ನೋಡಿದಾಗ ಅವುಗಳ ಪ್ರಮಾಣ ತುಂಬಾ ಕಡಿಮೆ. ಏಕೆಂದರೆ ಜಿಲ್ಲೆಯ ಒಟ್ಟು ಸಾಕ್ಷರತೆಯ ಪ್ರಮಾಣ ಹಾಗೂ ಪುರುಷ ಮತ್ತು ಮಹಿಳೆಯರ ಶಿಕ್ಷಣದ ಪ್ರಮಾಣವು ಕರ್ನಾಟಕ ರಾಜ್ಯಕ್ಕೆ ಹೋಲಿಕೆ ಮಾಡಿದರೆ ಕಡಿಮೆ ಇರುವುದು ಈಗಾಗಲೇ ತಿಳಿದಿದ್ದೇವೆ. ಈ ಎಲ್ಲಾ ಅಂಶಗಳ ಆಧಾರದ ಮೇಲೆ ಕರ್ನಾಟಕ ರಾಜ್ಯದ ಪ್ರಾದೇಶಿಕ ಅಸಮತೋಲನ ಉನ್ನತಾಧಿಕಾರ ವರದಿಯ ಪ್ರಕಾರ ಕರ್ನಾಟಕದಲ್ಲಿ ವಿಭಾಗಗಳು ಮತ್ತು ಪ್ರದೇಶಗಳ ಮೂಲಕ ಸಂವಾದಿಯಾಗಿ ಅಭಿವೃದ್ಧಿ ಹೊಂದಿದ, ಹಿಂದುಳಿದ, ಅತಿ ಹಿಂದುಳಿದ ಹಾಗೂ ಅತ್ಯಂತ ಹಿಂದುಳಿದ, ತಾಲ್ಲೂಕುಗಳಾಗಿ ವರ್ಗೀಕರಿಸಿದ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಸ್ಥಾನಮಾನಗಳನ್ನು ಪರಿಶೀಲಿಸಿದಾಗ ಈ ಕೆಳಗಿನಂತೆ ಕೋಷ್ಟಕ ೨.೭ ರಲ್ಲಿ ಕಂಡುಬರುತ್ತದೆ.

**ಕೋಷ್ಟಕ ೨.೭ : ಸಾಕ್ಷರತೆಯ ಪ್ರಮಾಣ**

| ಕ್ರ. ಸಂ. | ಜಿಲ್ಲೆ | ಅಭಿವೃದ್ಧಿ ಹೊಂದಿದ ತಾಲೂಕುಗಳು | ಹಿಂದುಳಿದ ತಾಲೂಕುಗಳು | ಅತಿ ಹಿಂದುಳಿದ ತಾಲೂಕುಗಳು | ಅತ್ಯಂತ ಹಿಂದುಳಿದ ತಾಲೂಕು |
|---|---|---|---|---|---|
| ೧. | ಬಳ್ಳಾರಿ | ಇಲ್ಲ | ಹೊಸಪೇಟೆ<br>ಕೂಡ್ಲಿಗಿ,<br>ಹ.ಬೊ.ಹಳ್ಳಿ | ಬಳ್ಳಾರಿ<br>ಹಡಗಲಿ | ಶಿರಗುಪ್ಪ<br>ಸಂಡೂರು |

ಮೂಲ : HPCFRRI ವರದಿ, ಪು.೫೭೦

ಈ ಮೇಲಿನ ೨.೭ನೇ ಕೋಷ್ಟಕವು ಜಿಲ್ಲೆಯಲ್ಲಿ ಲಭ್ಯವಿರುವ ಶಿಕ್ಷಣದ ಸೌಕರ್ಯ ಹಾಗೂ ಸ್ಥಾನಮಾನಗಳ ಸ್ಪಷ್ಟತೆಗಾಗಿ ಪ್ರಾದೇಶಿಕ ಅಸಮತೋಲನಾ ಉನ್ನತಾಧಿಕಾರ ಆಯೋಗವು ಬಳ್ಳಾರಿ ಜಿಲ್ಲೆಯಲ್ಲಿನ ಶಿಕ್ಷಣದ ಸ್ಥಾನಮಾನಗಳನ್ನೂ ವರ್ಗೀಕರಿಸಿರುವುದು ಜಿಲ್ಲೆಯು ಹೊಂದಿರುವ ಶಿಕ್ಷಣದ ಗುಣಮಟ್ಟವನ್ನು ಅರಿಯಬಹುದು. ಒಟ್ಟಾರೆಯಾಗಿ ಹೇಳುವುದಾರೆ ಬಳ್ಳಾರಿ ಜಿಲ್ಲೆಯ ಭೌಗೋಳಿಕ ಹಾಗೂ ಪ್ರಾಕೃತಿಕ ಸಂಪನ್ಮೂಲಗಳು ಹೇರಳವಾಗಿದ್ದರೂ H.P.C.F.RR.I. (ಪ್ರಾದೇಶಿಕ ಅಸಮತೋಲನಾ ಉನ್ನತಾಧಿಕಾರ ವರದಿ) ವರದಿಯ ಪ್ರಕಾರ ಬಳ್ಳಾರಿ ಜಿಲ್ಲೆಯು ಸಾಮಾಜಿಕ ಹಾಗೂ ಮೂಲಭೂತ ಸೌಕರ್ಯಗಳಲ್ಲಿ ತುಂಬಾ ಹಿಂದುಳಿದಿದೆಂದು ಗುರುತಿಸಲಾಗಿದೆ.

**ಕೋಷ್ಟಕ ೨.೮ : ಸಾಮಾಜಿಕ ಮೂಲಭೂತ ಸೌಕರ್ಯಗಳ ವಿವರ**

| ಕ್ರ. ಸಂ | ಜಿಲ್ಲೆಯ ಹೆಸರು | ತುಲನಾತ್ಮಕವಾಗಿ ಅಭಿವೃದ್ಧಿ ಹೊಂದಿದ ತಾಲೂಕುಗಳು | ಹಿಂದುಳಿದ ತಾಲೂಕುಗಳು | ಹೆಚ್ಚು ಹಿಂದುಳಿದ ತಾಲೂಕುಗಳು | ಅತ್ಯಂತ ಹಿಂದುಳಿದ ತಾಲೂಕುಗಳು |
|---|---|---|---|---|---|
| ೧. | ಬಳ್ಳಾರಿ | ಬಳ್ಳಾರಿ | ಹೊಸಪೇಟೆ | ಹಡಗಲಿ<br>ಕೂಡ್ಲಿಗಿ | ಸಂಡೂರು<br>ಹೆಚ್.ಬಿ.ಹಳ್ಳಿ,<br>ಶಿರಗುಪ್ಪ |

**Source:** H.P.C.F.R.R.I. ವರದಿ, ಪು. ೪೯೯

ಈ ಮೇಲಿನ ೨.೮ರ ಕೋಷ್ಟಕವನ್ನು ಪರಿಶೀಲಿಸಿದಾಗ, ಬಳ್ಳಾರಿ ಜಿಲ್ಲೆಯು ಗಣಿಗಾರಿಕೆಯಿಂದಾಗಿ ಸಂಡೂರು ಹಾಗೂ ಹೊಸಪೇಟೆ ತಾಲೂಕುಗಳು ವಿಶ್ವ ಭೂಪಟದಲ್ಲಿ ವಿಶೇಷ ಸ್ಥಾನಗಳನ್ನು ಪಡೆದುಕೊಂಡಿದ್ದರೂ ಸಾಮಾಜಿಕ ಮತ್ತು ಮೂಲಭೂತ ಸೌಕರ್ಯಗಳಲ್ಲಿ ಅತ್ಯಂತ ಹಿಂದುಳಿದ ತಾಲೂಕುಗಳ ಪಟ್ಟಿಯಲ್ಲಿ ಸಂಡೂರು ಹಾಗೂ ಹಿಂದುಳಿದ ತಾಲೂಕುಗಳ ಪಟ್ಟಿಯಲ್ಲಿ ಹೊಸಪೇಟೆ ಇರುವುದನ್ನು ಗಮನಿಸಿದಾಗ, ಜಿಲ್ಲೆಯಲ್ಲಿರುವ ಗಣಿಗಾರಿಕೆಯ ಚಟುವಟಿಕೆಗಳು ಸಮಾಜಮುಖಿಯಾಗಿಲ್ಲ ವೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಹಾಗೆಯೇ ಜಿಲ್ಲೆಯ ಆದಾಯ, ಆರೋಗ್ಯ, ಶಿಕ್ಷಣ, ಉದ್ಯೋಗ ಇತ್ಯಾದಿಗಳ ಆಧಾರದ ಮೇಲೆ ಬಳ್ಳಾರಿ ಜಿಲ್ಲೆಯ ಅಭಿವೃದ್ಧಿಯ ಮಾನದಂಡವನ್ನು ಮುಂದಿನ ಕೋಷ್ಟಕ ೨.೯ ರಿಂದ ಅರಿಯಬಹುದು.

ಜಿಲ್ಲೆಯಲ್ಲಿ ನೆಲಗೊಂಡಿರುವ ಕಬ್ಬಿಣ ಹಾಗೂ ಮ್ಯಾಂಗನೀಸ್ ಅದಿರುಗಳ ಸಂಪನ್ಮೂಲವು ಹಲವಾರು ಕೈಗಾರಿಕೆ, ಉತ್ಪಾದನೆ, ವಿತರಣಾ ಚಟುವಟಿಕೆಗಳಿಗೆ ಪ್ರೋತ್ಸಾಹಕವಾಗಿದ್ದು, ಹತ್ತಾರು ಪಟ್ಟು ವಿದೇಶಿ ವಿನಿಮಯ ಹಾಗೂ ರಾಷ್ಟ್ರಾದಾಯಕ್ಕೆ ಕಾರಣವಾಗಿದೆ. ಆದರೆ ಜಿಲ್ಲೆಯಲ್ಲಿರುವ

ಕೋಷ್ಠಕ ೨.೯ ಬಳ್ಳಾರಿ ಜಿಲ್ಲೆಯ ಅಭಿವೃದ್ಧಿಯ ಸಾಮರ್ಥ್ಯ

| ಕ್ರ. ಸಂ. | ಜಿಲ್ಲೆಯ ಹೆಸರು | ಅತ್ಯಂತ ಹಿಂದುಳಿದ ತಾಲೂಕುಗಳು | ಹೆಚ್ಚು ಹಿಂದುಳಿದ ತಾಲೂಕುಗಳು | ಹಿಂದುಳಿದ ತಾಲೂಕುಗಳು |
|---|---|---|---|---|
| ೧. | ಬಳ್ಳಾರಿ | ಸಂಡೂರು<br>ಕೂಡ್ಲಿಗಿ | ಶಿರಗುಪ್ಪ<br>ಹೆಚ್.ಬಿ.ಹಳ್ಳಿ<br>ಹಡಗಲಿ | ಹೊಸಪೇಟೆ |

**Source:** H.P.C.F.R.R.I. ವರದಿ, ಪು. ೪೯೯

ವಾಸ್ತವಿಕ ಅಂಶಗಳ ಆಧಾರದ ಮೇಲೆ ಆರ್ಥಿಕ ತಜ್ಞ ಡಾ. ನಂಜುಂಡಪ್ಪ ನೇತೃತ್ವದ ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರಿಗಳ ಸಮಿತಿಯು ಬಳ್ಳಾರಿ ಜಿಲ್ಲೆಯ ಅಭಿವೃದ್ಧಿಯ ಸಂವಹನದಲ್ಲಿ ತುಂಬಾ ಹಿಂದುಳಿದಿದ್ದು, ನಮ್ಮನ್ನಾಳುವ ಘನ ಸರ್ಕಾರಗಳು ನೂರಾರು ಕಾರ್ಯಯೋಜನೆಗಳನ್ನು ಈ ಭಾಗದಲ್ಲಿ ಜಾರಿಗೊಳಿಸುವುದು. ಅತ್ಯವಶ್ಯಕವೆಂದೂ ಪ್ರತಿಪಾದಿಸಿರುವ ಹಿನ್ನೆಲೆಯಲ್ಲಿ ಜಿಲ್ಲೆಯ ಸ್ಥಾನಮಾನಗಳ ಸ್ಪಷ್ಟ ಚಿತ್ರಣಕ್ಕೆ ಈ ಮೇಲಿನ ವಿವರಗಳೆಲ್ಲವೂ ಕೈಗನ್ನಡಿಯಂತೆ ಕಂಡುಬರುತ್ತವೆ.

## ೨.೨. ಗಣಿಗಾರಿಕೆಯ ಸಂಕ್ಷಿಪ್ತ ಇತಿಹಾಸ

ಗಣಿ ಮತ್ತು ಮಾನವನಿಗೆ ಅವಿನಾಭಾವದ ಸಂಬಂಧವುಂಟು. ಸುಮಾರು ೫೦೦೦ ವರ್ಷಗಳ ಹಿಂದೆಯೇ ಆಹಾರದಷ್ಟೇ ಪ್ರಮುಖವಾಗಿ ಕಲ್ಲಿನ ಬಳಕೆಯ ಅಗತ್ಯತೆಯನ್ನು ನಮ್ಮ ಪೂರ್ವಿಕರ ಚರಿತ್ರೆಯಿಂದ ತಿಳಿಯಬಹುದು. ಅತ್ಯಂತ ಪುರಾತನ ಕಾಲದಲ್ಲಿ ಮಾನವ ತನ್ನ ಆತ್ಮಸಂರಕ್ಷಣೆಗಾಗಿ, ಆಹಾರಕ್ಕಾಗಿ ಮೊನಚಾದ ಮತ್ತು ಗಟ್ಟಿಮುಟ್ಟಾದ ಕಲ್ಲು-ಬಂಡೆಗಳನ್ನು ಆಯುಧಗಳಾಗಿ, ಬಳಕೆಯ ಸಾಮಾನುಗಳಾಗಿ, ಆಭರಣಗಳಾಗಿ ಮತ್ತು ಶತೃಗಳೊಂದಿಗೆ ಹೋರಾಡುವ ಪ್ರಧಾನ ಅಸ್ತ್ರಗಳಾಗಿ ಬಳಕೆ ಮಾಡಿದ್ದಾನೆ. ಇದರಿಂದ ಮಾನವನ ಇತಿಹಾಸದ ಬೆಳವಣಿಗೆಯೊಂದಿಗೆ ಗಣಿ ಸಂಪನ್ಮೂಲದ ತಿಳುವಳಿಕೆಯು ಆದಿಮಾನವನಿಂದಲೂ ಅನ್ಯೋನ್ಯವಾಗಿ ಬೆಳೆದು ಬಂದಿರುವುದು ಧೃಢಪಡುತ್ತದೆ. "ಕ್ರಿ.ಪೂ. ೬೦೦೦ ವರ್ಷಗಳ ಹಿಂದೆಯೇ ಇರಾನ್ ಮತ್ತು ಟರ್ಕಿ ದೇಶಗಳಲ್ಲಿ ಕೆಲವು ಖನಿಜ ಪದಾರ್ಥಗಳನ್ನು ಬಳಸುವ ಮೂಲಕ ಕಣ್ಣಿಗೆ ಕುಕ್ಕುವಂತಹ ಕೆಂಪುಬಣ್ಣದ ಪದಾರ್ಥವನ್ನು ತಯಾರಿಸಲಾಗುತ್ತಿತ್ತು".[೧] ಹಾಗೆಯೇ ರೋಮ್ ಚಕ್ರಾದಿಪತ್ಯವು ಸಹ ಸಧೃಡ ಹಾಗು ಸಮರ್ಥ ನಾಯಕತ್ವವನ್ನು ಹೊಂದಲು ಸುವ್ಯವಸ್ಥಿತ ರೀತಿಯಲ್ಲಿ ಅವರು ಕೈಗೊಂಡ ಖನಿಜಗಳ ಬಳಕೆಯು

ಒಂದು ಪ್ರಮುಖ ಕಾರಣವಾಗಿತ್ತು ಎಂಬುದನ್ನು ಅನೇಕ ಇತಿಹಾಸಕಾರರು ಉಲ್ಲೇಖಿಸುತ್ತಾರೆ. ಅಲ್ಲದೇ ರೋಮ್ ತನ್ನ ಸೈನಿಕಶಕ್ತಿಗೆ ಅವಶ್ಯಕ ಆಯುಧಗಳನ್ನು ಮತ್ತು ರಾಜಕೀಯ, ವಾಣಿಜ್ಯ ಹಾಗು ವ್ಯಾಪಾರಗಳಲ್ಲಿ ಕಂಡುಬರುತ್ತಿದ್ದ ಖನಿಜ ಸಂಪನ್ಮೂಲಗಳ ಅಪಾರ ಬಳಕೆಯು ಒಂದು ಪ್ರಮುಖ ಕಾರಣವಾಗಿತ್ತು ಎಂದೂ ತಿಳಿದುಬರುತ್ತದೆ.

"ಜಗತ್ತಿನ ಶ್ರೇಷ್ಠ ನಾಗರಿಕತೆಯೆಂದೂ ಗುರುತಿಲ್ಪಡುವ ಈಜಿಪ್ಟ್ ದೇಶದ "ನೈಲ್" ನದಿಯ ಕೊಳ್ಳದಲ್ಲಿ ಕ್ರಿ.ಪೂ. ೨೯೮೦ ವರ್ಷಗಳ ಹಳೆಯದಾದ, ಪಿರಾಮಿಡ್ ಪತ್ತೆಯಾಗಿದೆ. ಇದು 'ಕೈರೋ' ಪ್ರದೇಶದ ಸಮೀಪದಲ್ಲಿರುವ ವಿಶ್ವದ ಅತ್ಯಂತ ದೊಡ್ಡದಾದ ಪಿರಾಮಿಡ್ ಗುರುತಿಸಲಾಗಿದೆ. 'ಘೀಜ್ಹಾ' (Gizeh) ಈ ಪಿರಾಮಿಡ್ ಸುಮಾರು ೪೮೧ ಅಡಿ ಎತ್ತರ, ೭೫೫ ಅಡಿ ಸುತ್ತಳತೆಯನ್ನು ಹೊಂದಿದೆ. ಅಂದರೆ ಸುಮಾರು ಹದಿಮೂರು ಎಕರೆ ಭೂ ಪ್ರದೇಶದಲ್ಲಿ ವಿಸ್ತಾರಿಸಿಕೊಂಡಿರುವ 'ಘೀಜ್ಹಾ' ಪಿರಾಮಿಡ್‌ನ ರಚನೆಯಲ್ಲಿ ಬಳಸಲಾಗಿರುವ ವಿವಿಧ ನಮೂನೆಯ ಕಲ್ಲು ಬಂಡೆಗಳನ್ನು ಪರಿಶೀಲಿಸಿದಾಗ, ಪುರಾತನ ಕಾಲದಿಂದಲೂ ಮಾನವನೊಂದಿಗಿನ ಗಣಿಗಾರಿಕೆಯ ಸಂಬಂಧದ ಬಗ್ಗೆ ತಿಳಿದುಬರುತ್ತದೆ."[೨]

ಭಾರತದ ಇತಿಹಾಸದಲ್ಲಿಯೂ ೪ನೇ ಶತಮಾನದಲ್ಲಿದ್ದ, ಚಂದ್ರಗುಪ್ತ ಮೌರ್ಯನ ಕಾಲದಲ್ಲಿಯು ಗಣಿ ಸಂಪತ್ತಿನ ಮಹತ್ವವನ್ನು ಅರಿಯಬಹುದು. ಪ್ರಧಾನ ಮಂತ್ರಿಯಾಗಿದ್ದ ವಿಷ್ಣುಗುಪ್ತ ಅಥವಾ ಚಾಣುಕ್ಯ ನೆಂದೂ ಗುರುತಿಸಲ್ಪಡುವ "ಕೌಟಿಲ್ಯನ ಅರ್ಥಶಾಸ್ತ್ರ"ದಲ್ಲಿ ಬಂಗಾರ, ಬೆಳ್ಳಿ, ತಾಮ್ರ, ಸೀಸ, ತಾವರ ಹಾಗು ಪಾದರಸಗಳಂತಹ ಗಣಿ ಮೂಲಗಳನ್ನು ಅತ್ಯಮೂಲ್ಯ ಸಂಪತ್ತಾಗಿ ಪರಿಗಣಿಸಬೇಕೆಂದು ಹೇಳುತ್ತಾನೆ".[೩] ಇಂತಹ ಅತ್ಯಮೂಲ್ಯ ಗಣಿ ಸಂಪನ್ಮೂಲವನ್ನು ವ್ಯವಸ್ಥಿತ ಹಾಗು ತಾಂತ್ರಿಕತೆಯ ನೆಲೆಯಲ್ಲಿ ಖನಿಜಗಳ ಬಳಕೆ ಮಾಡಿರುವುದನ್ನು ಪ್ರಾರಂಭದಲ್ಲಿ ವಿಶ್ವದ ಇತಿಹಾಸದಿಂದ ಅರಿಯಬಹುದು. "೧೬೨೭ರಲ್ಲಿ ಝುಕೋಸ್ಲೋವೋಕೀಯಾ ದೇಶದಲ್ಲಿ ಪ್ರಪ್ರಥಮವಾಗಿ ಗಣಿ ಉತ್ಪಾದನೆಯಲ್ಲಿ ಸ್ಫೋಟಕ ಸಾಮಗ್ರಿಗಳನ್ನು ಬಳಸಲಾಯಿತು".[೪] ಹಾಗೆಯೇ "೧೬೯೮ರಲ್ಲಿ ಇಂಗ್ಲೆಂಡಿನ ಬ್ರಿಟೀಷ್ ಕಲ್ಲಿದ್ದಲಿನ ಉತ್ಪಾದನೆಯಲ್ಲಿ ನೀರನ್ನು ಗಣಿಯಿಂದ, ಹೊರಹಾಕಲು ಪ್ರಪ್ರಥಮನಾಗಿ ಸ್ಟೀಮ್ (Steam Engine) ಇಂಜೀನ್‌ನನ್ನು ಬಳಸುವ ಮೂಲಕ ಇಂಗ್ಲೆಂಡ್ ದೇಶವು ಕೈಗಾರಿಕ ಕ್ರಾಂತಿಯ ರುವಾರಿಯಾಯಿತು"[೫] ಎಂಬುದು ಇತಿಹಾಸದಿಂದ ತಿಳಿದುಬರುತ್ತದೆ.

"ಹದಿನೆಂಟನೆ ಶತಮಾನದ ನಂತರ ಗಣಿ ಸಂಪನ್ಮೂಲದ ಬಗ್ಗೆ ಸಾಕಷ್ಟು ಸಂಶೋಧನೆ ಅಥವಾ ಆವಿಷ್ಕಾರಗಳನ್ನು ಕೈಗೊಳ್ಳುವ ಮೂಲಕ ಗಣಿ ಉತ್ಪಾದನೆಯಲ್ಲಿ ಕ್ರಾಂತಿಕಾರಿಯಾದ ಹತ್ತಾರು ವೈಜ್ಞಾನಿಕ ಆಯಾಮಗಳನ್ನು ಬಳಸಿಕೊಳ್ಳಲಾಯಿತು. ಅತ್ಯಂತ ಕಡಿಮೆ ವೆಚ್ಚದಲ್ಲಿ ಕಬ್ಬಿಣವನ್ನು

ಉತ್ಪಾದಿಸಲು ಇಂಗ್ಲೆಂಡ್ ದೇಶವು ದ್ರವರೂಪದಲ್ಲಿ ಕಲ್ಲಿದ್ದಲಿನ ಬಳಕೆಯನ್ನು ಕೈಗೊಂಡಿತು. ಇಂತಹ ಕಾಲಘಟ್ಟದ "ಹತ್ತೊಂಬತ್ತನೆಯ ಶತಮಾನದಲ್ಲಿ ಕೆಲವು ಹಗುರುವಾದ ಖನಿಜ ಸಂಪನ್ಮೂಲಗಳ ಸಂಶೋಧನೆಗಳು ಜರುಗಿದವು. ಅವುಗಳಲ್ಲಿ ಮ್ಯಾಗ್ನಿಷಿಯಂ(Magnesium ೧೮೦೮), ಅಲ್ಯೂಮಿನಿಯಂ (Aluminum ೧೮೨೫), ಟೈಟಾನಿಯಂ(Titanium ೧೮೩೫) ಇತ್ಯಾದಿ ಲವಣಗಳು ಕಂಡುಹಿಡಿಯಲ್ಪಟ್ಟವು".[೬] ಇನೇ ನೆಪೋಲಿಯನ್ ದೊರೆಯ ಕಾಲದಲ್ಲಿ "೧೮೫೫ರಲ್ಲಿ ಫ್ರಾನ್ಸ್ ದೇಶವು ವಾಣಿಜ್ಯಾತ್ಮಕ ಉದ್ದೇಶಕ್ಕಾಗಿ ಅಲ್ಯುಮಿನಿಯಂ ಖನಿಜದ ಬಳಕೆಯನ್ನು ಮಾಡಲಾಯಿತು."[೭] ಇಂತಹ ಅಮೂಲ್ಯ "ಗಣಿಸಂಪನ್ಮೂಲದ ಒಡೆತನಕ್ಕಾಗಿ ಮೊದಲನೆಯ ಪ್ರಪಂಚದ ಮಹಾಯುದ್ಧಕ್ಕೆ ಕಾರಣವಾಯಿತು. ಹೇಗೆಂದರೆ ಕಬ್ಬಿಣ ಸಂಪನ್ಮೂಲದಲ್ಲಿ ಶ್ರೀಮಂತಿಕೆಯನ್ನು ಹೊಂದಿದ್ದ ಫ್ರೆಂಚ್ ಲೂರೈನ್ ಮತ್ತು ಕಬ್ಬಿಣ, ಕಲ್ಲಿದ್ದಲು ಹಾಗು ಮ್ಯಾಂಗನೀಜ್‌ಗಳಲ್ಲಿ ಶ್ರೀಮಂತಿಕೆಯನ್ನು ಹೊಂದಿದ್ದ "ಉಕ್ರೇನ್"ದೇಶಗಳಲ್ಲಿ ಅಡಗಿದ್ದ ಮಹತ್ವಾಕಾಂಕ್ಷೆಯ ನೀತಿಗಳೇ ಯುದ್ಧಕ್ಕೆ ಕಾರಣವಾಯಿತು ಎಂದೂ ಜರ್ಮನಿಯ ಇತಿಹಾಸಕಾರ ಫ್ರಿಟ್ಜ್ ಪಿಶರ್ (Fritz Fischer) ದಾಖಲಿಸುತ್ತಾರೆ."[೮] ಇಂತಹ ಅತ್ಯಮೂಲ್ಯ ಹಾಗೂ ವೈಭವೋಪೇತ ವಿವಿಧ ಗಣಿಗಾರಿಕೆಯ ಸಂಪನ್ಮೂಲವು ಭಾರತದಲ್ಲಿಯು ಅತ್ಯಧಿಕ ಪ್ರಮಾಣದಲ್ಲಿದ್ದು, ಸುಮಾರು ೧೦,೦೦೦ ಸಾವಿರ ದಶಲಕ್ಷ ಟನ್ನಗಳಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಲಭ್ಯವಿರುವುದಾಗಿ ಅಂದಾಜಿಸಲಾಗಿದೆ. ಆ ಎಲ್ಲಾ ಗಣಿ ಸಂಪನ್ಮೂಲಗಳನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳುವ ಮೂಲಕ ಭಾರತ ದೇಶವು ಸುಭದ್ರ ಆರ್ಥಿಕ ಸ್ಥಿತಿಯನ್ನು ರೂಪಿಸಿಕೊಳ್ಳಲು ಸಾಧನ ಎಂಬುದು ತಜ್ಞರ ಅಭಿಪ್ರಾಯವಾಗಿದೆ.

### ಜಿಲ್ಲೆಯ ಗಣಿಗಾರಿಕೆಯ ಇತಿಹಾಸ

ಬಳ್ಳಾರಿ ಜಿಲ್ಲೆಯು ವಿವಿಧ ಸಂಪನ್ಮೂಲಗಳ ಆಗರ. ಈ ಭಾಗದ ಗಣಿಗಾರಿಕೆಗೆ ಸುದೀರ್ಘವಾದ ಇತಿಹಾಸವುಂಟು. ಜಿಲ್ಲೆಯ ಭೂ ಪ್ರದೇಶದಲ್ಲಿ ಸುಮಾರು ೧೮ನೇ ಶತಮಾನದ ಕೊನೆಯ ಭಾಗದಿಂದಲೇ ಗಣಿಗಾರಿಕೆಯ ಪ್ರಕ್ರಿಯೆಗಳು ಆರಂಭವಾದ ಬಗ್ಗೆ ಇತಿಹಾಸದುದ್ದಕ್ಕೂ ಅನೇಕ ದಾಖಲೆಗಳು ಕಂಡುಬರುತ್ತವೆ. ಪ್ರಾರಂಭದಲ್ಲಿ ಗಣಿಗಾರಿಕೆಗೆ ಸಂಬಂಧಿತ ಚಟುವಟಿಕೆಗಳು ಸಂಶೋಧನೆ ಅಥವಾ ಆವಿಷ್ಕಾರದ ರೂಪದಲ್ಲಿ ಕಂಡುಬಂದರೂ, ಒಂದು ವ್ಯವಸ್ಥಿತ ರೀತಿಯಲ್ಲಿ ಗಣಿ ಉತ್ಪಾದನಾ ಚಟುವಟಿಕೆಗಳು ಆರಂಭಗೊಂಡಿದ್ದು ಬ್ರಿಟಿಷರ ಆಳ್ವಿಕೆಯಲ್ಲಿ ಎಂಬುದಾಗಿ ತಿಳಿದುಬರುತ್ತದೆ. ಬಳ್ಳಾರಿ ಜಿಲ್ಲೆಯ ಭೂ ವ್ಯಾಪ್ತಿಯಲ್ಲಿ ಪ್ರಪ್ರಥಮವಾಗಿ ಗಣಿ ಸಂಬಂಧಿತ ಉತ್ಪಾದನಾ ಚಟುವಟಿಕೆಗಳು ಆರಂಭಗೊಂಡಿದ್ದು ಸೊಂಡೂರು ಪ್ರಾಂತ್ಯದ ವ್ಯಾಪ್ತಿಯಲ್ಲಿ ಎಂಬುದಾಗಿ ತಿಳಿದುಬರುತ್ತದೆ. ಏಕೆಂದರೆ ಈ ಹಿಂದೆ ಈ ಭಾಗದಲ್ಲಿದ್ದ ಮರಾಠ ಸಾಮಂತ ಅರಸರ ಆಳ್ವಿಕೆಯ ನಂತರ, ಬ್ರಿಟಿಷರ ಆಕ್ರಮಣಕಾರಿ

ನೀತಿಗಳಿಂದಾಗಿ ಸ್ವತಂತ್ರ ಪ್ರಾಂತ್ಯವಾಗಿದ್ದ ಸೊಂಡೂರು ಸಂಸ್ಥಾನವು ಕಾಲಕ್ರಮೇಣ ಸೊಂಡೂರು ಎಂಬುದು ಸಂಡೂರು ಆಗಿ ಪರಿವರ್ತಿತಗೊಂಡಿದೆ.

ಈ ಪ್ರದೇಶವು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟನಂತರ ಸಂಡೂರು ಪ್ರಾಂತ್ಯದಲ್ಲಿ ವ್ಯವಸ್ಥಿತವಾದ ಗಣಿಗಾರಿಕೆಯ ಪ್ರಕ್ರಿಯೆ ನಡೆದಿರುವುದು ಕಂಡುಬರುತ್ತದೆ. ಅದು ಸುಮಾರು ೧೯೦೪-೦೫ ರಲ್ಲಿ ಇಂಗ್ಲೆಂಡಿನ ಬೆಲ್ಜಿಯಂ ದೇಶದ ಗಣಿ ಉತ್ಪಾದನಾ ಕಂಪನಿಯೊಂದು J.S.M.(General Sandur Mining Company) ಹೆಸರಿನಲ್ಲಿ ತಾಂತ್ರಿಕತೆಯುಳ್ಳ ಗಣಿಗಾರಿಕಾ ಉತ್ಪಾದನೆಯನ್ನು ಕೈಗೊಂಡ ಬಗ್ಗೆ ದೇವಗಿರಿ, ಕಮತೂರು, ಸುಬ್ರಾಯನಹಳ್ಳಿ, ತುಮಟಿತಾಂಡ, ಗುಂಡಾತಾಂಡ ಇತ್ಯಾದಿ ಗ್ರಾಮಗಳಲ್ಲಿ ಮಾಹಿತಿ ದೊರೆಯುತ್ತದೆ. ಕಚ್ಚಾ ಖನಿಜವನ್ನು ಸಾಗಿಸಲು ಹಾಕಲಾಗಿದ್ದ ದೊಡ್ಡ ದೊಡ್ಡ ಜೋಡು ಕಬ್ಬಿಣದ ಕಂಬಗಳು ಹಾಗೂ ಬಲಯುತ ತಂತಿಯ ಮೂಲಕ ಕಬ್ಬಿಣದ ಬಕೆಟ್‌ಗಳಲ್ಲಿ ಅದಿರನ್ನು ಸಾಗಿಸುತ್ತಿದ್ದ ಹಲವಾರು ಉಪಕರಣಗಳ ಮಾದರಿಗಳು ಈಗಲೂ ಮೂಕಸಾಕ್ಷಿಯಾಗಿ ನಿಂತಿವೆ. ಭಾರತದೇಶವು ಸ್ವಾತಂತ್ರ್ಯಗೊಂಡನಂತರ ೧೯೪೪ರಲ್ಲಿ ಸಂಡೂರು ಸಂಸ್ಥಾನದ ಆಡಳಿತಗಾರರಾಗಿದ್ದ ಶ್ರೀ ವೈ.ಆರ್. ಘೋರ್ಪಡೆಯವರ ಅಧೀನ SMIORE (ಸೊಂಡೂರು ಮ್ಯಾಂಗನೀಸ್ ಆ್ಯಂಡ್ ಐರನ್ ಓರ್) ಸಂಸ್ಥೆಗೆ GESM ಕಂಪನಿ ಹಸ್ತಾಂತರಿಸುವ ಮೂಲಕ ಬ್ರಿಟಿಷರು ತಮ್ಮ ತಾಯ್ನಡಿಗೆ ಹೊರಟು ಹೋದರು. ಹೀಗೆ ಜಿಲ್ಲೆಯ ಗಣಿಗಾರಿಕೆಯ ಇತಿಹಾಸವು ಅನೇಕ ದಾಖಲೆಗಳಿಂದ ತಿಳಿದುಬರುತ್ತದೆ.

ಬ್ರಿಟಿಷರಿಗಿಂತ ಮೊದಲೇ ಜಿಲ್ಲೆಯ ನಾನಾ ಭಾಗಗಳಲ್ಲಿ ಸಾರ್ವಜನಿಕರಿಂದ ಗಣಿಗಾರಿಕೆಯ ಚಟುವಟಿಕೆಗಳು ನಡೆದ ಬಗ್ಗೆ ಅನೇಕ ಜನಪದ ದೃಷ್ಟಾಂತಗಳು ಸಹ ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತವೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧. **ಹದ್ದಿನಪಡೆ ಅಥವಾ ಕೆಂಪುಪೆಂಟೆ :** ಸಂಡೂರು ಭಾಗದ ಜನಪದರು ಗುರುತಿಸುವಂತೆ ಈ ಭಾಗದಲ್ಲಿ ಹದ್ದುಗಳು ಹೆಚ್ಚಾಗಿ ವಾಸಿಸುತ್ತಿದ್ದು, ಈ ಪ್ರದೇಶದಲ್ಲಿ ಅಡಗಿದ್ದ ಖನಿಜ ಸಂಪನ್ಮೂಲವು ಸಹ ಮೇಲ್ನೋಟಕೆ ಹದ್ದಿನ ಸ್ವರೂಪದಲ್ಲಿ ಕಂಡುಬರುತ್ತಿತ್ತು. ಹೀಗಾಗಿ ಈ ಭಾಗಕ್ಕೆ ಹದ್ದಿನ ಪಡೆ ಎಂಬುದಾಗಿ ಹಾಗೂ ಕಬ್ಬಿಣ ಅದಿರಿನಿಂದಾಗಿ ಕೆಂಪಾಗಿ ಕಾಣುತ್ತಿದುದ್ದರಿಂದ ಕೆಂಪ್ ಪೆಂಟೆ ಎಂಬುದಾಗಿ ಕರೆಯುತ್ತಾರೆ. ಪ್ರಾಚೀನಾ ಕಾಲದಲ್ಲಿ ಜನರು ಗಣಿಗಾರಿಕೆಯನ್ನು ಮಾಡುತ್ತಿದ್ದ ಬಗ್ಗೆ ಅನೇಕ ಕುರುಹುಗಳನ್ನು ಕಾಣಬಹುದು. ಪ್ರಸ್ತುತ ಈ ಭಾಗದಲ್ಲಿ SMIORE ಹಾಗೂ MML ಗಣಿ ಸಂಸ್ಥೆಗಳು ಗಣಿಗಾರಿಕೆಯಲ್ಲಿ ತೊಡಗಿವೆ. ದೇವಗಿರಿ ಸುಬ್ರಾಯ್ಯನಹಳ್ಳಿ ಹಾಗೂ ಕಮತೂರು ಗ್ರಾಮಗಳ ಮಧ್ಯೆ ಈ ಭೂ ಭಾಗವು ಕಂಡುಬರುತ್ತವೆ.

**೨. ಚೆನ್ನಂಗಿ ಕೊಳ್ಳ :** ಈ ಪ್ರದೇಶವು ಹೆಚ್ಚಾಗಿ ಚೆನ್ನಂಗಿ ಜಾತಿಯ ಮರಗಳಿಂದ ಕೂಡಿದ್ದರಿಂದ ಇದನ್ನು ಚೆನ್ನಂಗಿ ಕೊಳ್ಳವೆಂದೂ ಕರೆಯುತ್ತಾರೆ. ಇಲ್ಲಿ ಹೆಚ್ಚಾಗಿ ಮ್ಯಾಂಗನೀಜ್ ಅದಿರು ಕಂಡುಬರುತ್ತದೆ. ಇದನ್ನು SMIORE ಕಂಪನಿಯು ತನ್ನ ಆಧೀನಕ್ಕೆ ತೆಗೆದುಕೊಂಡಿದೆ. ಈ ಭಾಗವು ಸಹ ದೇವಗಿರಿ ಹಾಗೂ ಸುಬ್ರಾಯನಹಳ್ಳಿ ಮಧ್ಯಭಾಗದಲ್ಲಿದೆ.

**೩. ಕತ್ತೆ ಬಯಲು ಅಥವಾ ಕತ್ತೆ ಮೈನ್ಸ್ :** ಈ ಭಾಗವು ನಂದಿಹಳ್ಳಿ ಹಾಗೂ ಮುದುಕಲ ಪೆಂಟಾ ಗ್ರಾಮಗಳ ಮಧ್ಯಭಾಗದಲ್ಲಿ ಕಂಡುಬರುತ್ತದೆ. ಇಲ್ಲಿನ ಕಚ್ಚಾ ಕಬ್ಬಿಣದ ಅದಿರನ್ನು ಹೊತ್ತೊಯಲು ಜನರು ಕತ್ತೆಗಳನ್ನು ಬಳಸುತ್ತಿದ್ದರು ಅದಕ್ಕಾಗಿ ಇದನ್ನು ಕತ್ತೆ ಬಯಲು ಅಥವಾ ಕತ್ತೆ ಮೈನ್ಸ್ ಎಂಬುದಾಗಿ ಕರೆಯುತ್ತಾರೆ.

**೪. ಹುಲಿಕೊಳ್ಳ :** ಈ ಭಾಗವು ಉತ್ಕೃಷ್ಟವಾದ ಕಬ್ಬಿಣ ಅದಿರಿನಿಂದ ಕೊಡಿದ್ದು, ದಟ್ಟವಾದ ಅರಣ್ಯ ಸಂಪತ್ತಿನಿಂದಾಗಿ ಇಲ್ಲಿ ಹೆಚ್ಚಾಗಿ ಹುಲಿಗಳು ವಾಸಿಸುತ್ತಿದ್ದವು. ಹೀಗಾಗಿ ಇದನ್ನು ಹುಲಿಕೊಳ್ಳ ಎಂದು ಗುರುತಿಸುತ್ತಾರೆ. ಈ ಭಾಗದಲ್ಲಿ MML (Mysore Mineral Limited) ಕಂಪನಿಯು ಗಣಿಗಾರಿಕೆಯನ್ನು ಮಾಡುತ್ತಿದೆ.

**೫. ಕೋತಿಗುಂಡು :** ಈ ಭಾಗದಲ್ಲಿ ಹೆಚ್ಚಾಗಿ ಕೋತಿಗಳು ವಾಸಿಸುತ್ತಿದ್ದವು. ಇಲ್ಲಿರುವ ದೊಡ್ಡ ದೊಡ್ಡ ಕಲ್ಲುಬಂಡೆಗಳು ಸಹ ಕೋತಿಗಳ ಸ್ವರೂಪದಲ್ಲಿ ಗೋಚರಿಸುತ್ತಿತ್ತು. ಇದಕ್ಕಾಗಿ ಈ ಭಾಗಕ್ಕೆ ಕೋತಿಗುಂಡು ಎಂದು ಕರೆಯುತ್ತಾರೆ. ಇಲ್ಲಿ ಉತ್ಕೃಷ್ಟವಾದ ಮ್ಯಾಂಗನೀಜ್ ಅದಿರಿನ ಸಂಪನ್ಮೂಲವು ಅಡಕವಾಗಿದ್ದು, ಈ ಪ್ರದೇಶವು SMIORE ಕಂಪನಿಯ ಅಧೀನದಲ್ಲಿದೆ.

**೬. ಬಿದುರುಪಳೆ ಅಥವಾ ಬಿದುರು ಸರವು :** ಈ ಭಾಗವು ದಟ್ಟವಾದ ಬಿದುರಿನ ಮರಗಳಿಂದ ಆವೃತ್ತಗೊಂಡಿದ್ದರಿಂದ ಇದನ್ನು ಬಿದುರುಗಳ ಸರೋವರ ಎಂಬುದಾಗಿ ಕರೆಯತ್ತಾರೆ. ಇಲ್ಲಿ ಹೆಚ್ಚಾಗಿ ಕಬ್ಬಿಣದ ಅದಿರು ದೊರೆಯುತ್ತದೆ. ಪ್ರಸ್ತುತ ಈ ಭಾಗವು NMDC (National Mineral Development Corporation) ಅಧೀನದಲ್ಲಿದೆ.

**೭. ಮಕ್ಕಳ ಹರವು :** ಈ ಭಾಗದಲ್ಲಿ ಹೆಚ್ಚು ಮಕ್ಕಳನ್ನು ಪಡೆದ ದೇವತೆ ವಾಸವಾಗಿರುವುದರ ಬಗ್ಗೆ ಒಂದು ಐತಿಹಾಸಿಕ ವೃತ್ತಾಂತದಿಂದಾಗಿ ಇದಕ್ಕೆ ಮಕ್ಕಳ ಹರವು ಎಂಬುದಾಗಿ ಹೆಸರು ಬಂದಿದೆ. ಇಲ್ಲಿ ಹೆಚ್ಚಾಗಿ ಕಬ್ಬಿಣದ ಅದಿರು ಸಿಗುತ್ತದೆ. ಈ ಪ್ರದೇಶದಲ್ಲಿ VESCO(Veerabhadrappa & Sangappa & Company) ಹಾಗೂ SMIORE ಕಂಪನಿಗಳು ಕಾರ್ಯನಿರ್ವಹಿಸುತ್ತಿವೆ.

**೮. ದೇವಗೊಳ್ಳ ಅಥವಾ ಚೌಗಲೆ ಮೈನ್ಸ್ :** ಈ ಭಾಗದಲ್ಲಿ ಭೂ ಗರ್ಭದಿಂದಲೇ ಹುಟ್ಟುಲಿಂಗ

ಉದ್ಭವಗೊಂಡಂತೆ ಗೋಚರಿಸುವುದರಿಂದ ಇದನ್ನು ದೇವಗೊಳ್ಳ ಎಂಬುದಾಗಿ ಕರೆಯುತ್ತಾರೆ. ಇಲ್ಲಿ ಹೆಚ್ಚಾಗಿ ಕಬ್ಬಿಣದ ಖನಿಜ ದೊರೆಯುತ್ತದೆ. ಹೊಸಪೇಟೆಯ ಕಾಕುಬಾಳು, ಜೋಗ, ಪಿ.ಕೆ.ಹಳ್ಳಿ ಇತ್ಯಾದಿ ಪ್ರದೇಶಗಳ ಸುತ್ತ-ಮುತ್ತ ಈ ಪ್ರದೇಶ ಕಂಡುಬರುತ್ತವೆ. ಈ ಭೂಭಾಗವು ಚೌಗಲೇ ಮೈನ್ಸ್ ವ್ಯಾಪ್ತಿಗೆ ಸೇರಿದೆ.

೯. **ಗಂಗಳ ಬೆಂಚಿ :** ಈ ಭಾಗವು ತಟ್ಟೆಯ ಆಕಾರದಲ್ಲಿ ಸುಮತಟ್ಟಾಗಿದ್ದುದರಿಂದ ಇದನ್ನು ಗಂಗಳ ಬೆಂಚಿ ಎಂಬುದಾಗಿ ಕರೆಯುತ್ತಾರೆ. ನರಸಾಪುರ, ಉಬ್ಬಲಗಂಡಿ ಹಾಗೂ ಮುದಕಲಪೆಂಟೆ ಹಾಗೂ ನವಲಟ್ಟಿ ಗ್ರಾಮಗಳ ವ್ಯಾಪ್ತಿಯಲ್ಲಿ ಕಂಡುಬರುತ್ತದೆ. ಈ ಪ್ರದೇಶವು NMDC ಯ ಆದೀನದಲ್ಲಿದ್ದು, ಹೆಚ್ಚಾಗಿ ಕಬ್ಬಿಣದ ಅದಿರು ದೊರೆಯುತ್ತದೆ.

೧೦. **ಬೀಮತೀರ್ಥ :** ಈ ಭಾಗವು ಮಹಾಭಾರತದಲ್ಲಿ ಅಜ್ಞಾತ ವಾಸದಲ್ಲಿದ್ದ ಪಾಂಡವ ಪುತ್ರರು ಮಾರು ವೇಷದಲ್ಲಿ ಅರಣ್ಯವನ್ನು ಸುತ್ತುತ್ತ ಕಾಲ ಕಳೆಯಬೇಕಾದ ಸಂದರ್ಭದಲ್ಲಿ ದ್ರೌಪದಿಗೆ ಬಾಯರಿಕೆಯಾಯಿತು. ಆಗ ಬಲಭೀಮನು ತನ್ನ ಗಧೆಯಿಂದ ಬೆಟ್ಟದ ತುದಿಯನ್ನು ಸಿಟ್ಟಿನಿಂದ ಕುಟ್ಟಿದ ಕಾರಣ ಭೂಮಿಯಿಂದ ನೀರು ಚಿಮ್ಮಿತು ಎಂಬ ಪ್ರತೀತಿ ಚಾಲ್ತಿಯಲ್ಲಿದೆ. ಈಗಲು ಇಲ್ಲಿ ಅತ್ಯಂತ ಶುದ್ದ ಹಾಗೂ ಸಿಹಿಯಾದ ನೀರಿನ ಸೆಲೆ ಎಲ್ಲಾ ಕಾಲಗಳಲ್ಲಿ ತುಂಬಿ ಹರಿಯುತ್ತಿದೆ. ಈಗ ಈ ಪ್ರದೇಶದಲ್ಲಿ ಎಂ.ಎಂ.ಎಲ್.(MML) ಹಾಗೂ ಜಿಂದಾಲ್(JINDAL) ಕಂಪನಿಗಳು ಗಣಿಗಾರಿಕೆಯನ್ನು ಕೈಗೊಂಡಿವೆ. ಇವುಗಳೊಂದಿಗೆ,

೧. ದುಗ್ಗಮ್ಮನ ಕುಳ್ಳ (ತೋಣಸಿಗೆರೆ) ಸ್ಮಯೋರ್(SMIORE) ಆಧಿನ

೨. ಕಪ್ಪಡಸ್ವಾಮಿ (ನವಿಲುಸ್ವಾಮಿ) (ಸುಬ್ರಯಹಳ್ಳಿ) ಸ್ಮಯೋರ್(SMIORE) ಆಧಿನ

೩. ಹರಿಕುರ ಕೊಳ್ಳ (ನಂದಿಹಳ್ಳ) ಎಂ.ಎಂ.ಎಲ್.(MML) ಆಧಿನ

೪. ಜೋಗಿಕೊಳ್ಳ (ಮಲ್ಲಮ್ಮನ ದೇವಸ್ಥಾನ) ಹೆಚ್.ಟಿ.ಮೈನ್ಸ್(H.T.Mines) ಆಧಿನ

೫. ಮಲ್ಲಮ್ಮನಗುಡಿ ಎನ್.ಎಂ.ಡಿ.ಸಿ.(NMDC) ಆಧಿನ

೬. ದಾದರಿಗುಡ್ಡ ವ್ಹಿ.ಎಸ್.ಎಲ್.(VSL) ಆಧಿನ

೭. ಬುತ್ತಿ ಬಗಡೆ ವ್ಹಿ.ಎಸ್.ಎಲ್.(VSL) ಆಧಿನ

೮. ಮಾವಿನಮರದ ಕೊಳ್ಳ ವ್ಹಿ.ಎಸ್.ಎಲ್.(VSL) ಆಧಿನ

೯. ಬೆಸ್ತರ ಕೊಂಟೆ ಟಿ.ಎಂ.ಎಲ್.(TML) ಆಧಿನ

೧೦. ಬಲಭದ್ರ ಕೊಳ್ಳ ಟಿ.ಎಂ.ಎಲ್.(TML) ಆಧಿನ

೧೧. ಭೈರವ ತೀರ್ಥ ಟಿ.ಎಂ.ಎಲ್.(TML) ಆಧಿನ

೧೨. ಗಣಪ್ಪನ ಬಗಡೆ ಎಂ.ಎಂ.ಎಲ್. ಮತ್ತು ಜಿಂದಾಲ್(MML & JINDAL) ಆಧಿನ

೧೩. ನೀರುಗೊಳ್ಳ ಎಂ.ಎಂ.ಎಲ್. ಮತ್ತು ಜಿಂದಾಲ್(MML & JINDAL) ಆಧಿನ

೧೪. ನೀರುಗೊಳ್ಳ ಎಂ.ಎಂ.ಎಲ್. ಮತ್ತು ಜಿಂದಾಲ್(MML & JINDAL) ಆಧಿನ

೧೫. ಉಂಟೆಮರದ ಕೊಳ್ಳ ಎಂ.ಎಂ.ಎಲ್. ಮತ್ತು ಜಿಂದಾಲ್(MML & JINDAL) ಆಧಿನ

೧೬. ರಾಮಗೊಳ್ಳ ಕೆ.ಎಂ.ಎಂ.ಐ.(KMMI, HOSPET) ಗಣಿ ಸಂಸ್ಥೆಯ ಆಧಿನದಲ್ಲಿ ಗಣಿಗಾರಿಕೆ ನಡೆಯುತ್ತದೆ.

ಹೀಗೆ ಇಂತಹ ಹಲವಾರು ಐತಿಹಾಸಿಕ ಸ್ಥಳಗಳಲ್ಲಿ ಪೂರ್ವಿಕರು ಗಣಿಗಾರಿಕೆ ಕೈಗೊಂಡಬಗ್ಗೆ ಅನೇಕ ಜನಪದ ಐತಿಹ್ಯಗಳು ಕಂಡುಬರುತ್ತವೆ.

ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ದೊರೆಯುತ್ತಿರುವ ಕಬ್ಬಿಣ ಮತ್ತು ಮ್ಯಾಂಗನೀಸ್ ಸಂಪನ್ಮೂಲವು ಗುಣಮಟ್ಟದಲ್ಲಿ ವಿಶ್ವಖ್ಯಾತಿಯನ್ನು ಪಡೆದುಕೊಂಡಿದೆ. ಜಿಲ್ಲೆಯ ಪೂರ್ವಭಾಗದ ತಾಲ್ಲೂಕುಗಳಾದ ಸಂಡೂರು, ಹೊಸಪೇಟೆ, ಬಳ್ಳಾರಿ ಹಾಗೂ ಹರಪನಹಳ್ಳಿಯಲ್ಲಿ ಅತಿ ಹೆಚ್ಚೂ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರಿನ ನಿಕ್ಷೇಪಗಳಿರುವುದು ಪತ್ತೆಯಾಗಿದೆ. ಗಣಿ ಮತ್ತು ಭೂ ವಿಜ್ಞಾನ ಇಲಾಖೆಯು ಈ ಪ್ರದೇಶಗಳ ಭೂಗರ್ಭದಲ್ಲಿ ಅಡಗಿರುವ ಖನಿಜ ಸಂಪನ್ಮೂಲಗಳ ಆಧಾರದ ಮೇಲೆ ಜಿಲ್ಲೆಯ ಭೌಗೋಳಿಕ ಪ್ರದೇಶವನ್ನು ೩ ವಲಯಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳಲ್ಲಿ ಜಿಲ್ಲೆಯ ಶೇಕಡ ೬೦ ಕ್ಕಿಂತಲೂ ಹೆಚ್ಚು ಕಬ್ಬಿಣದ ಖನಿಜವು ಸಂಡೂರು ತಾಲೂಕು ವ್ಯಾಪ್ತಿಯಲ್ಲಿ ಕೇಂದ್ರೀಕೃತಗೊಂಡಿದ್ದರೆ, ಹೊಸಪೇಟೆ ವ್ಯಾಪ್ತಿಯಲ್ಲಿ ಶೇಕಡ ೩೫ ರಷ್ಟು ಬಳ್ಳಾರಿ ವ್ಯಾಪ್ತಿಯಲ್ಲಿ ಶೇಕಡ ೧೫ ರಷ್ಟು ಹಂಚಿಕೆಯಾಗಿದೆ. ಒಟ್ಟಾರೆಯಾಗಿ ಬಳ್ಳಾರಿ ಜಿಲ್ಲೆಯ ಭೌಗೋಳಿಕ ಸರಾಸರಿ ವಿಸ್ತೀರ್ಣ ೧೦೨೬೩ $Km^2$ ಗಳಾಷ್ಟಾಗಿದೆ.

ಬಳ್ಳಾರಿ ಜಿಲ್ಲೆಯಾದ್ಯಂತ ಕಬ್ಬಿಣ ಮತ್ತು ಮ್ಯಾಂಗನೀಸ್ ಸಂಪನ್ಮೂಲದ ಜೊತೆಗೆ ಬೇರೆ, ಬೇರೆ ಖನಿಜ ಸಂಪನ್ಮೂಲಗಳು ಲಭ್ಯವಿದ್ದು, ಅವುಗಳನ್ನು ವ್ಯವಸ್ಥಿಕವಾಗಿ ಬಳಸಿಕೊಂಡರೆ ಜಿಲ್ಲೆಯ ಅಭಿವೃದ್ಧಿ ಸಾಧ್ಯ ಎಂಬುದರಲ್ಲಿ ಸಂದೇಹವಿಲ್ಲ. ಅಂತಹ ಖನಿಜ ಸಂಪನ್ಮೂಲಗಳ ವಿವರಗಳನ್ನು ಕೋಷ್ಟಕ ೨.೧೦ ರಿಂದ ತಿಳಿಯಬಹುದು.

**ಕೋಷ್ಟಕ ೨.೧೦ : ಬಳ್ಳಾರಿ ಜಿಲ್ಲೆಯಲ್ಲಿರುವ ವಿವಿಧ ಖನಿಜ ಸಂಪನ್ಮೂಲಗಳ ವಿವರ**

| ಖನಿಜಗಳ ಹೆಸರು | ತಾಲ್ಲೂಕುಗಳ ಹೆಸರು | ಕೇಂದ್ರೀಕೃತಗೊಂಡ ಪ್ರದೇಶಗಳ ಹೆಸರು |
|---|---|---|
| ೧. ಕಬ್ಬಿಣದ ಅದಿರು (Iron Ore) | ೧. ಸಂಡೂರು<br>೨. ಹೊಸಪೇಟೆ<br>೩. ಬಳ್ಳಾರಿ | ದೋಣಿಮಲೈ ಶ್ರೇಣಿ/ಕುಮಾರಸ್ವಾಮಿ ವ್ಯಾಪ್ತಿಯ ರಾಮನದುರ್ಗ ಶ್ರೇಣಿ/ತಿಮ್ಮಪ್ಪನ ಗುಡ್ಡದ ಶ್ರೇಣಿ/ಎನ್.ಇ.ಬಿ. ಶ್ರೇಣಿ/ಎತ್ತಿನಹಟ್ಟಿ ಶ್ರೇಣಿ/ರಾಮಘಡ ಶ್ರೇಣಿ/ದೇವದಾರಿ ಶ್ರೇಣಿ/ಬೆಳಗಲ್ಲು ಶ್ರೇಣಿ ಇತ್ಯಾದಿ |
| ೨. ಮ್ಯಾಂಗನೀಜ್ (Manganese) | ೧. ಸಂಡೂರು<br>೨. ಹರಪನಹಳ್ಳಿ | ದೇವಗಿರಿ/ರಾಮನಗಿರಿ/ಸುಬ್ರಾಯನಹಳ್ಳಿ, ಕಂಡಿಕೇರಿ/ಕಡತಿ. |
| ೩. ಸೀಸದ ಅದಿರು (Zink) | ೧. ಸಂಡೂರು<br>೨. ಹೊಸಪೇಟೆ | ತೋರಣಗಲ್ಲು<br>ಮೆಟ್ರಿ |
| ೪. ತಾಮ್ರ (Copper) | ೧. ಸಂಡೂರು<br>೨. ಹರಪನಹಳ್ಳಿ | ದರೋಜಿ<br>ಚಿನ್ನಾಪುರ. |
| ೫. ಚಿನ್ನ (Gold) | ೧. ಸಂಡೂರು<br>೨. ಹರಪನಹಳ್ಳಿ | ತಾರನಗರ/ಎತ್ತಿನಹಟ್ಟಿ /ಕಂಚೂರು<br>ಚಿಗಟೇರಿ/ಕೊಂಗನ್-ಹೊಸೂರು |
| ೬. ಜೇಡಿಮಣ್ಣು (Clay) | ಸಂಡೂರು<br>ಹರಪನಹಳ್ಳಿ<br>ಬಳ್ಳಾರಿ | ಕುಮಾರಸ್ವಾಮಿ ಗುಡಿ/ತಿಮ್ಮಪ್ಪನ ಗುಡಿ, ಹಾಲು-ಹಾಲರಗ/ಕೊಂಗನ ಹೊಸೂರು<br>ಬೆಳಗಲ್ |
| ೭. ಸುಣ್ಣದ ಕಲ್ಲು (Lime Stone) | ಹಡಗಲಿ | ಬೀರಬ್ಬೀ |
| ೮. ರೆಡ್‌ಆಕ್ಸೈಡ್ ಮತ್ತು ರೆಡ್‌ಓಕಾರ್ (Red Oxide/ Red Ocher) | ೧. ಸಂಡೂರು<br>೨. ಬಳ್ಳಾರಿ<br>೩. ಹೊಸಪೇಟೆ | ರಾಮಘಡ/ಜಾನಿಕುಂಟೆ/ಬೆಳಗಲ್<br>ಜಂಬುನಾಥನಹಳ್ಳಿ/ವ್ಯಾಸನಕೇರಿ/ಕರಡಿಕೊಳ್ಳ<br>ವಿಠಲಾಪುರ |
| ೯. ಸಾಬೂನು ಹರಳು (Soap Stone) | ಹರಪನಹಳ್ಳಿ | ನರಸಿಂಹ ದೇವರ ಗುಡ್ಡ, ಅರಸಪುರ, ನೀಲಾಗುಂಡ ಬೆಟ್ಟಗಳು |
| ೧೦. ಸೂಜಿಗಲ್ಲು (Magnesite) | ಸಂಡೂರು | ತೋರಣಗಲ್ಲು |
| ೧೧. ವಜ್ರ (Diamond) | ಹಡಗಲಿ | ದೇವಗೊಂಡನ ಹಳ್ಳಿ |

| | | |
|---|---|---|
| ೧೨. ಶಿಲಾಸ್ಪಟಿಕ/ಕ್ಷೀರಾ ಸ್ಪಟಿಕ/ಹರಳು (Rock Crystal/ Opeal & Agate) | ಸಂಡೂರು | ತಿಮ್ಮಪ್ಪನ ಗುಡಿ/ ಬೈರವ ತೀರ್ಥ/ಲಿಂಗದಹಳ್ಳಿ |
| ೧೩. ಕಟ್ಟಡಗಳ ಸಲಕರಣೆ ಮತ್ತು ಆಭರಣಗಳಿಗೆ ಬಳಸುವ ಕಲ್ಲುಗಳು | ೧. ಸಂಡೂರು, ೨. ಬಳ್ಳಾರಿ, ೩. ಹೊಸಪೇಟೆ. | ಬಂಡ್ರಿ, ತೋರಣಗಲ್ಲು ಮತ್ತು ದರೋಜಿ, ಹೊಸಪೇಟೆ, ಹಂಪಿ, ಕಮಲಾಪುರ. |

ಏಕೆಂದರೆ ಮಹಾಪ್ರಬಂಧವು ಕಬ್ಬಿಣ ಹಾಗೂ ಮ್ಯಾಂಗನೀಜ್ ಉತ್ಪಾದನಾ ಚಟುವಟಿಕೆಯಲ್ಲಿ ತೊಡಗಿರುವ ಕಾರ್ಮಿಕರ ಸ್ಥಿತಿಗತಿಯ ಸ್ವರೂಪವನ್ನು ಅಧ್ಯಯನಕ್ಕೆ ಯೋಗ್ಯವಾಗಿ ಪರಿಗಣಿಸಿರುವುದರಿಂದ ಜಿಲ್ಲೆಯಲ್ಲಿರುವ ಕಬ್ಬಿಣ ಹಾಗೂ ಮ್ಯಾಂಗನೀಜ್ ಸಂಪನ್ಮೂಲಗಳ ಬಗ್ಗೆ ಲಭ್ಯವಿರುವ ಮಾಹಿತಿಯು ಅತ್ಯವಶ್ಯಕವೆನಿಸುತ್ತದೆ. ಈ ಹಿನ್ನಲೆಯಲ್ಲಿ ಜಿಲ್ಲೆಯಲ್ಲಿ ಲಭ್ಯವಿರುವ ಐರಾನ್ ಮತ್ತು ಮ್ಯಾಂಗನೀಸ್ ಉತ್ಪಾದನೆ ವಿತರಣೆಯನ್ನು ರಾಜ್ಯ, ದೇಶ, ರಾಷ್ಟ್ರಗಳೊಂದಿಗೆ ಹೋಲಿಕೆ ಮಾಡಲಾಗಿದೆ.

### ೨.೩. ಮ್ಯಾಂಗನೀಸ್ ಅದಿರಿನ ಉತ್ಪಾದನೆ ಮತ್ತು ವಿತರಣೆ

ಮ್ಯಾಂಗನೀಸ್ ಅದಿರು ಅತ್ಯಂತ ಉಪಯುಕ್ತ ಹಾಗು ಬಹುಪಯೋಗಿಯುಳ್ಳ ಸಂಪನ್ಮೂಲವಾಗಿದೆ. ಆಯಾ ದೇಶಗಳಲ್ಲಿರುವ "ಖನಿಜ ಸಂಪನ್ಮೂಲಗಳು ಆಯಾ ರಾಷ್ಟ್ರಗಳ ಸಂಪತ್ತಿನ ಖಜಾನೆಗಳಿದ್ದಂತೆ". ಎಂಬುದಾಗಿ ಕ್ರಿ.ಪೂ. ೪ನೇ ಶತಮಾನದಲ್ಲಿಯೇ ಕೌಟಿಲ್ಯನ 'ಅರ್ಥಶಾಸ್ತ್ರ'ದಲ್ಲಿ ವಿಶ್ಲೇಷಿಸಲಾಗಿದೆ. "ವಿಶ್ವದ ಇತಿಹಾಸದಲ್ಲಿ ಮ್ಯಾಂಗನೀಸ್ ಖನಿಜವನ್ನು ಪ್ರಪ್ರಥಮವಾಗಿ ೧೭೭೪ರಲ್ಲಿ ಪತ್ತೆ ಹಚ್ಚಲಾಯಿತು. ನಂತರ ಮ್ಯಾಂಗನೀಸನ್ನು ೧೮೬೫ರಲ್ಲಿ ಯುರೋಪ್‌ನ ಫೇರೋ ಮ್ಯಾಂಗನೀಜ್ ಕಾರ್ಖಾನೆಯಲ್ಲಿ ಪ್ರಥಮವಾಗಿ ಬಳಕೆ ಮಾಡಲಾಯಿತು. ಕ್ಯಾಪ್ಟನ್, ಎಫ್. ಜೆನ್‌ಕಿನ್ (೧೮೨೯) ಭಾರತದಲ್ಲಿ ೧೮೨೯ರಲ್ಲಿ ಭಾರತದ ಮಹಾರಾಷ್ಟ್ರದಲ್ಲಿ ನಾಗಪುರ ಜಿಲ್ಲೆಯ ಕಂದ್ರಿ (Kandri) ಎಂಬಲ್ಲಿ ಈ ಖನಿಜವನ್ನು ಪ್ರಥಮವಾಗಿ ಪತ್ತೆಹಚ್ಚಿದರು. ಹಾಗೆಯೇ ಖನಿಜ ಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ಸಂಶೋಧನೆಗಳು ಮುಂದುವರೆದಂತೆಲ್ಲಾ ಮಧ್ಯಪ್ರದೇಶ, ಗೋವಾ, ಗುಜರಾತ್, ಕರ್ನಾಟಕ, ಹಾಗೂ ಓರಿಸ್ಸಾ ರಾಜ್ಯಗಳಲ್ಲಿ ಮ್ಯಾಂಗನೀಸ್ ಖನಿಜ ಸಂಪನ್ಮೂಲಗಳ ಬಗ್ಗೆ ಹಲವಾರು ಮಾಹಿತಿ ದೊರೆಯುತ್ತವೆ ಎಂಬುದಾಗಿ ತಿಳಿದುಬರುತ್ತದೆ.

ಈ ಮುಂದಿನ ೨.೧೧ರ ಕೋಷ್ಠಕವು ನಮ್ಮ ದೇಶದ ವಿವಿಧ ಭಾಗಗಳಲ್ಲಿ ದೊರೆಯುವ ಮ್ಯಾಂಗನೀಸ್ ಸಂಪನ್ಮೂಲದ ವಿವರಗಳನ್ನು ತಿಳಿಸುತ್ತದೆ. ಹಾಗೆಯೇ ಕರ್ನಾಟಕ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಮತ್ತು ಬಳ್ಳಾರಿ ಜಿಲ್ಲೆಯ ಬೇರೆ, ಬೇರೆ ತಾಲೂಕುಗಳಲ್ಲಿ ಮ್ಯಾಂಗನೀಜ್ ಸಂಪನ್ಮೂಲವು ಲಭ್ಯವಿರುವುದನ್ನು ಮನಗಾಣಬಹುದು.

ಕೋಷ್ಟಕ ೨.೧೧ : ಮ್ಯಾಂಗನೀಸ್ ದೊರೆಯುವ ಸ್ಥಳಗಳ ವಿವರ

| ಕ್ರ.ಸಂ. | ಭಾರತ | ಕರ್ನಾಟಕ | ಬಳ್ಳಾರಿ |
|---|---|---|---|
| ೧. | ಮಧ್ಯಪ್ರದೇಶ | ಬಳ್ಳಾರಿ | ಸಂಡೂರು |
| ೨. | ಗೋವಾ | ಉತ್ತರ ಕನ್ನಡ | ಹೊಸಪೇಟೆ |
| ೩. | ಗುಜರಾತ್ | ತುಮಕೂರು | ಬಳ್ಳಾರಿ |
| ೪. | ಕರ್ನಾಟಕ | ಚಿತ್ರದುರ್ಗ | |
| ೫. | ಮಹಾರಾಷ್ಟ್ರ | ಶಿವಮೊಗ್ಗ | |
| ೬. | ಓರಿಸ್ಸಾ | ಬೆಳಗಾಂ | |

**Source:** Minarals year book - 2001

ಭಾರತ ದೇಶಕ್ಕೆ ಸಂಬಂಧಿಸಿದಂತೆ ಸರಾಸರಿ ಮ್ಯಾಂಗನೀಸ್ ಉತ್ಪಾದನೆಯ "ಒಟ್ಟು ಮೌಲ್ಯವು ೧೭೬.೫ ಮಿಲಿಯನ್ ಟನ್ನುಗಳಷ್ಟಿದ್ದರೆ, ಕರ್ನಾಟಕ ರಾಜ್ಯದ ಮ್ಯಾಂಗನೀಸ್ ಉತ್ಪಾದನೆಯ ಒಟ್ಟು ಮೌಲ್ಯ ೬೪.೫ ಮಿಲಿಯನ್ ಟನ್‌ಗಳಷ್ಟು ಆಗಿದೆ. ಅದರಲ್ಲೂ ಬಳ್ಳಾರಿ ಜಿಲ್ಲೆಯು ೧೨.೨೫ ಮಿಲಿಯನ್ ಟನ್ನುಗಳಷ್ಟು ಉತ್ಪಾದನೆಯ ಸಾಮರ್ಥ್ಯವನ್ನು ಪಡೆದುಕೊಂಡಿದೆ" ಎಂಬುದಾಗಿ ತಿಳಿದುಬರುತ್ತದೆ.

ಭಾರತದ ಗಣಿ ಇಲಾಖಾ ಸಮೀಕ್ಷೆಯ ಪ್ರಕಾರ ಭಾರತ ದೇಶದಲ್ಲಿ 'ಎ' ದರ್ಜೆ ಮತ್ತು 'ಸಿ' ದರ್ಜೆಯ ಮ್ಯಾಂಗನೀಸ್ ಅದಿರು ದೊರಯುತ್ತಿದ್ದೂ, ಅವುಗಳು ತುಂಬಾ ಉಪಯುಕ್ತವಾದ ವಸ್ತುಗಳಾಗಿವೆ. ಕಬ್ಬಿಣ ಮತ್ತು ಉಕ್ಕಿನ ಉತ್ಪಾದನೆಯಲ್ಲಿ ಮ್ಯಾಂಗನೀಸ್ ಅದಿರನ್ನು ಕಡ್ಡಾಯವಾಗಿ ಬಳಸಬೇಕಾಗುತ್ತದೆ. ಏಕೆಂದರೆ ಉಕ್ಕು-ಕಬ್ಬಿಣದ ಕಚ್ಚಾ ಅದಿರಿನಲ್ಲಿರುವ ಆಮ್ಲಜನಕ ಮತ್ತು ಗಂಧಕದ ಅಂಶವನ್ನು ಹೋಗಲಾಡಿಸಿ, ಶುದ್ಧ ಉಕ್ಕಿನ ಉತ್ಪಾದನೆಗೆ ಅದು ಸಹಕರಿಸುತ್ತದೆ. ೧ ಟನ್ನ್ ಉಕ್ಕಿನ (Steel) ಉತ್ಪಾದನೆಗೆ ಕನಿಷ್ಟ ೫೦ ಕೆ.ಜಿ.ಯಷ್ಟು ಮ್ಯಾಂಗನೀಸ್ ಅದಿರನ್ನು ಬಳಸಲಾಗುತ್ತದೆ. ಇದನ್ನು ಬ್ಯಾಟರಿಗಳು, ಗಾಜು, ಬಣ್ಣದ ಸಾಮಗ್ರಿ, ರಸಗೊಬ್ಬರ, ಪಿಗ್‌ಮೆಂಟ್ಸ್ (Pigments), ಡೈ(dyes)ಗಳ ತಯಾರಿಕೆಯಲ್ಲಿ ಬಳಸಲಾಗುತ್ತದೆ. ಮ್ಯಾಂಗನೀಸ್‌ನಿಂದ ಪ್ಲೇಟ್ಸ್ (Plates), ಲಾರಿ-ಕಾರಿನ ಚಕ್ರಗಳು, ರೈಲ್ವೇ ಸ್ವಿಚ್‌ಗಳು, ಕ್ರಷರ್ ಯಂತ್ರಗಳು (ಮಿಶ್ರಣ ಮಾಡುವ ಯಂತ್ರ) ಗ್ರೈಂಡಿಂಗ್ ಯಂತ್ರಗಳು (ರುಬ್ಬುವ ಯಂತ್ರಗಳು) ಇತರೇ ಎಲ್ಲಾ ಯಂತ್ರೋಪಕರಣಗಳ ಬಿಡಿಭಾಗಗಳನ್ನು ತಯಾರಿಸಬಹುದಾಗಿದೆ. ಹೀಗಾಗಿ ಇಂತಹ ಮ್ಯಾಂಗನೀಸ್ ಅದಿರಿಗೆ ರಾಷ್ಟ್ರೀಯ ಹಾಗು ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ತುಂಬಾ ಬೇಡಿಕೆಯಿದ್ದು, ೧ ಟನ್ನ್ ಕಚ್ಚಾ, ಮ್ಯಾಂಗನೀಸ್

ಅದಿರಿಗೆ ಸುಮಾರು ರೂ. ೪ ರಿಂದ ೬ ಸಾವಿರ ರೂ.ಗಳ ಬೆಲೆ ಮಾರುಕಟ್ಟೆಯಲ್ಲಿ ಮಾರಾಟಗೊಳ್ಳುತ್ತದೆ. ಜಿಲ್ಲೆಯ ಸಂಡೂರು ವ್ಯಾಪ್ತಿಯಲ್ಲಿ ದೋಣಿಮಲೈ, ಸ್ವಾಮಿ ಹಳ್ಳಿ, ಯಶವಂತನಗರ, ತೋರಣಗಲ್ಲು ಹಾಗೂ ಹೊಸಪೇಟೆ ವ್ಯಾಪ್ತಿಯಲ್ಲಿ ಪಾಪಿನಾಯಕನಹಳ್ಳಿ ಕಾರಿಗನೂರು, ಗುಂಡಾ, ಬಳ್ಳಾರಿ ವ್ಯಾಪ್ತಿಯಲ್ಲಿ ಓಬಳಾಪುರಂ, ಹರಗಿನ ದೋಣಿ, ಕುಡುತಿನಿ, ಇತ್ಯಾದಿ ರೈಲ್ವೇ ಸ್ಟೇಷನ್ನಿಂದ ರೈಲ್ವೇಗಳ ಮೂಲಕ, ಮತ್ತು ಸಾವಿರಾರು ಲಾರಿಗಳ ಮೂಲಕ ಕಚ್ಚಾ ಸರಕನ್ನು ಸಾಗಿಸಲಾಗುತ್ತದೆ. ಇಂತಹ ಸಂಪನ್ಮೂಲದ ಉತ್ಪಾದನೆಯ ಪ್ರಮಾಣವನ್ನು ಈ ಕೆಳಗಿನ ೨.೧೨ರ ಕೋಷ್ಟಕದಿಂದ ನೋಡಬಹುದು.

**ಕೋಷ್ಟಕ ೨.೧೨ : ಮ್ಯಾಂಗನೀಸ್ ಅದಿರಿನ ಒಟ್ಟು ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ)**

| ವರ್ಷಗಳು | ಕರ್ನಾಟಕದ ಭೌಗೋಳಿಕ ವ್ಯಾಪ್ತಿ ಪ್ರದೇಶ | ಬಳ್ಳಾರಿ ಭೌಗೋಳಿಕ ವ್ಯಾಪ್ತಿ ಪ್ರದೇಶ |
|---|---|---|
| ೧೯೯೮ | ೩೬೬೮೯೬ | ೧೭೪೯.೪೯ |
| ೧೯೯೯ | ೩೭೭೦೧೩ | ೧೯೬೬.೬೦ |
| ೨೦೦೦ | ೪೦೧೨೯೩ | ೧೯೪೩.೫೦ |
| ೨೦೦೧ | ೪೦೧೭೭೫ | ೧೯೫೦.೯೮ |
| ೨೦೦೨ | ೪೦೨೬೨೪ | ೧೯೪೩.೫೬ |
| ೨೦೦೩ | ೪೦೨೭೩೪ | ೧೯೪೩.೧೪ |

**Source :** Administrative Report of the Department of Mining and Geology by (Mine & Geology Production and despatch Report).2002-04

ಜಾಗತೀಕರಣದಿಂದಾಗಿ ರಾಜ್ಯದಲ್ಲಿ ವಿದೇಶಿ ಬಂಡವಾಳ ಮತ್ತು ತಂತ್ರಜ್ಞಾನದ ಒಳಹರಿವು ಹೆಚ್ಚುತ್ತಾ ಸಾಗಿರುವುದರಿಂದ ವಿದೇಶಿ ಮಾರುಕಟ್ಟೆಯಲ್ಲಿ ಮ್ಯಾಂಗನೀಸ್ ಅದಿರಿಗೆ ಬೇಡಿಕೆ ಹೆಚ್ಚಾಗಿದೆ. ಇಂತಹ ಹೆಚ್ಚುವರಿ ಬೇಡಿಕೆಯನ್ನು ಪೂರೈಸಲು ರಾಜ್ಯದಲ್ಲಿ ಮ್ಯಾಂಗನೀಸ್ ಉತ್ಪಾದಿಸುವ ಗಣಿಪ್ರದೇಶದ ವ್ಯಾಪ್ತಿಯು ೧೯೯೮ರಲ್ಲಿ ೩೬೬೮೯೬ ಹೆಕ್ಟೇರ್‌ಗಳಿದದ್ದು, ೨೦೦೩ ಸಾಲಿಗೆ ೪೦೨೭೩೪ ಹೆಕ್ಟೇರ್‌ಗಳಿಗೆ ವಿಸ್ತಾರಗೊಂಡಿದೆ. ಹಾಗೆಯೇ ಬಳ್ಳಾರಿ ಜಿಲ್ಲೆಯ ವ್ಯಾಪ್ತಿ ಪ್ರದೇಶದಲ್ಲಿ ೧೯೯೮ರಲ್ಲಿ ೧೭೪೯.೪೯ ಹೆಕ್ಟೇರ್‌ಗಳಿದ್ದದ್ದೂ ೨೦೦೩ರ ವೇಳೆಗೆ ೧೯೪೩-೧೪ಕ್ಕೆ ಹೆಚ್ಚಳಗೊಂಡಿರುವುದನ್ನು ೨.೧೧ರ ಕೋಷ್ಟಕದಿಂದ ತಿಳಿಯಬಹುದು. ಮುಖ್ಯವಾಗಿ ಮೇಲಿನ ಕೋಷ್ಟಕದಿಂದ ಕಂಡುಬರುವ ಪ್ರಮುಖ ಅಂಶವೆಂದರೆ ೧೯೯೮ರ ಸಾಲಿನಿಂದ ೨೦೦೩ರವರೆಗೆ ಕರ್ನಾಟಕದ ವ್ಯಾಪ್ತಿಯಲ್ಲಿ ಮ್ಯಾಂಗನೀಸ್ ಉತ್ಪಾದನೆಯ ಭೌಗೋಳಿಕ ಕ್ಷೇತ್ರವು ಹೆಚ್ಚುಗುತ್ತಾ ನಡೆದಿದ್ದರೆ, ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ೨೦೦೧ ವರ್ಷದಲ್ಲಿ ೧೯೫೦.೯೮ರಷ್ಟು ವಿಸ್ತೀರ್ಣವನ್ನು ಪಡೆದಿದ್ದ ಭೌಗೋಳಿಕ ವಿಸ್ತೀರ್ಣವು ೨೦೦೩ರ

ವೇಳೆಗೆ ೧೯೪೩.೧೪ಕ್ಕೆ ಇಳಿಮುಖವಾಗುತ್ತ ಸಾಗಿದೆ. ಇದಕ್ಕೆ ಕೆಲವು ಅಭಿವೃದ್ಧಿಪರ ರಾಷ್ಟ್ರಗಳು ತಮ್ಮಲ್ಲಿರುವ ಉನ್ನತ ತಂತ್ರಜ್ಞಾನವನ್ನು ಬಳಸಿಕೊಂಡು, ಅತ್ಯಂತ ಕಡಿಮೆ ಬೆಲೆಯಲ್ಲಿ ಮ್ಯಾಂಗನೀಸ್ ಅದಿರನ್ನು ಪೂರೈಸುತ್ತಿರುವುದರಿಂದ ಜಿಲ್ಲೆಯ ಮ್ಯಾಂಗನೀಸ್ ಅದಿರು ಉತ್ಪಾದನೆಯ ಭೌಗೋಳಿಕ ವಿಸ್ತೀರ್ಣವು ಕುಂಠಿತಗೊಳ್ಳಲು ಕಾರಣವಾಗಿದೆ. ಆದರೆ ಭೌಗೋಳಿಕ ವಿಸ್ತೀರ್ಣ ಕಡಿಮೆಯಾಗಿದ್ದರೂ, ಉತ್ಪಾದನೆಯ ಪ್ರಮಾಣವು ಪ್ರತಿವರ್ಷವು ಹೆಚ್ಚುತ್ತಾ ಸಾಗಿದೆ. ಇಂತಹ ಬಹುಪಯೋಗಿ ಅದಿರಿನ ಉತ್ಪಾದನೆಯು ಜಾಗತಿಕ ಮಟ್ಟದಲ್ಲಿ ಯಾವ ಪ್ರಮಾಣದಲ್ಲಿದೆ ಎಂಬುದನ್ನು ೨.೧೩ರ ಕೋಷ್ಟಕದಿಂದ ಅರಿಯಬಹುದು.

**ಕೋಷ್ಟಕ ೨.೧೩**

**ಮ್ಯಾಂಗನೀಸ್ ಅದಿರಿನ ಒಟ್ಟು ಉತ್ಪಾದನೆಯ ಪ್ರಮಾಣಗಳಲ್ಲಿ (ಮಿಲಿಯನ್/ಬಿಲಿಯನ್)**

| ವರ್ಷಗಳು | ವಿಶ್ವ (ಬಿಲಿಯನ್‌ಸ್‌ಗಳಲ್ಲಿ) | ಭಾರತ (ಮಿಲಿಯನ್‌ಸ್‌ಗಳಲ್ಲಿ) | ಕರ್ನಾಟಕ (ಲಕ್ಷ ಟನ್ನಗಳಲ್ಲಿ) | ಬಳ್ಳಾರಿ (ಲಕ್ಷ ಟನ್‌ಗಳಲ್ಲಿ) |
|---|---|---|---|---|
| ೧೯೯೬-೯೭ | ೨೩೮೦೦ | ೧೮೭೦೭೮೩ | ೪೧೫೦೭೦ | ೨೭೩೭೮೩ |
| ೧೯೯೭-೯೮ | ೨೨೦೦೦ | ೧೬೪೧೯೬೩ | ೪೦೮೩೭೮ | ೨೯೭೦೮೬ |
| ೧೯೯೮-೯೯ | ೨೦೦೦೦ | ೧೫೨೫೮೦೫ | ೩೫೭೦೪೩ | ೨೬೨೦೫೬ |
| ೧೯೯೯-೦೦ | ೧೭೯೦೦ | ೧೫೮೫೭೨೬ | ೨೬೪೦೭೪ | ೨೭೨೮೫೫ |
| ೨೦೦೦-೦೧ | ೧೯೫೦೦ | ೧೫೫೬೪೩೦ | ೧೮೩೬೦೪ | ೧೮೧೫೯೩ |
| ೨೦೦೧-೦೨ | ೨೧೦೦೦ | ೧೫೬೭೫೫೬ | ೨೦೯೪೪೭ | ೨೭೩೬೫೧ |
| ೨೦೦೨-೦೩ | ೨೦೯೮೫೦ | ೧೫೭೮೮೪೭ | ೨೩೫೬೫೪ | ೩೨೬೪೯೨ |

**Source :** Administrative Report of the Department of Mining and Geology by (Mine & Geology Production and despatch Report.

ಕೋಷ್ಟಕ ೨.೧೩ರ ಪಟ್ಟಿಯನ್ನು ಪರಿಶೀಲಿಸಿದಾಗ ಜಾಗತೀಕರಣದ ಪ್ರಭಾವದಿಂದಾಗಿ ಮ್ಯಾಂಗನೀಸ್ ಉತ್ಪಾದನೆಯನ್ನು ಹೆಚ್ಚಿಸುವ ಮೂಲಕ ಲಾಭವನ್ನು ಪಡೆಯಲು ಜಾಗತಿಕ ಮಟ್ಟದಿಂದ ಹಿಡಿದು ಜಿಲ್ಲಾ ಮಟ್ಟದವರೆಗೂ ನಿರಂತರವಾಗಿ ಅದಿರು ಉತ್ಪಾದನೆಯಲ್ಲಿ ಪೈಪೋಟಿ ಕಂಡುಬಂದರೂ ಸರಾಸರಿ ಒಟ್ಟು ಉತ್ಪನ್ನವು ೧೯೯೬-೯೭ರ ನಂತರ ಜಾಗತಿಕ ಮಟ್ಟದಲ್ಲಿ ಕಡಿಮೆಗೊಳ್ಳುತ್ತಾ ಸಾಗಿರುವುದನ್ನು ಕಾಣಬಹುದು. ಆದರೆ ೨೦೦೧-೦೨ರ ನಂತರ ವಿಶ್ವ ವಾಣಿಜ್ಯ ಮಾರುಕಟ್ಟೆಯ ಸಮ್ಮೇಳನಗಳಲ್ಲಾದ ಕೆಲವು ಬದಲಾವಣೆಗಳಿಂದಾಗಿ ಜಾಗತಿಕ ನೀತಿ ನಿಯಮಗಳು ನಿರ್ಬಂಧಕ್ಕೆ ಒಳಗಾಗಿದ್ದರಿಂದ ನಮ್ಮ ದೇಶ ರಾಜ್ಯ ಹಾಗೂ ಜಿಲ್ಲೆಯ ಆಂತರಿಕ ಮ್ಯಾಂಗನೀಸ್ ಸಂಪನ್ಮೂಲದ ಉತ್ಪಾದನೆಯು ಅಧಿಕಗೊಳ್ಳುತ್ತಿರುವುದನ್ನು ಕೋಷ್ಟಕದ ಅಂಕಿ-ಅಂಶಗಳಿಂದ ತಿಳಿಯಬಹುದು. ಇಂತಹ ಉತ್ಪಾದನೆಯ ಪ್ರಮಾಣವನ್ನು ಈ ಕೆಳಗಿನ ಲಂಬ ರೇಖಾಚಿತ್ರದ ಮೂಲಕ ಸುಲಭವಾಗಿ ಅರಿಯಬಹುದು.

ನಕ್ಷೆ ೨.೧೪




ಬಳ್ಳಾರಿ ಜಿಲ್ಲೆಯ ಮ್ಯಾಂಗನೀಸ್ ಅದಿರಿನ ಉತ್ಪಾದನೆಯಲ್ಲಿ ಅತ್ಯದಿಕ ಪ್ರಮಾಣದ ಕೊಡುಗೆಯನ್ನು Sandur Manganese Iron ore Limited (SMIORE) ಎಂಬ ಖಾಸಗಿ ಗಣಿ ಉದ್ಯಮ ಸಂಸ್ಥೆಯು ನೀಡಿದೆ. ಈ ಸಂಸ್ಥೆಯ ವಾರ್ಷಿಕ ಉತ್ಪಾದನೆಯು ಸುಮಾರು ೨.೭೩ ಲಕ್ಷ ಟನ್‌ಗಳಿಗಿಂತ ಅಧಿಕವಾಗಿದೆ. ಇಂತಹ ಮೌಲ್ಯಯುತ ಮ್ಯಾಂಗನೀಸ್ ಉತ್ಪಾದನೆಗೆ ಭಾರತದ ಮೈನ್ಸ್ ಅಂಡ್ ಮಿನಿರಲ್ಸ್ ಪ್ರಾಧಿಕಾರವು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ನೀಡೀರುವ ಪರವಾನಿಗೆಗಳ ಮಾಹಿತಿಯ ವಿವರಗಳು ಕೋಷ್ಟಕ ೨.೧೫ ರಂತೆ ಈ ಕೆಳಗಿನಂತಿವೆ.

**ಕೋಷ್ಟಕ ೨.೧೫ : ಬಳ್ಳಾರಿ ಜಿಲ್ಲೆಯಲ್ಲಿರುವ ಮ್ಯಾಂಗನೀಸ್ ಮೈನ್ಸ್‌ಗಳ ಪ್ರಮಾಣ**

| ವರ್ಷಗಳು | ಪರವಾನಿಗೆ ಪಡೆದ ಗಣಿಗಳ ಸಂಸ್ಥೆಗಳು | ಚಟುವಟಿಕೆಯಲ್ಲಿರುವ ಗಣಿ ಸಂಸ್ಥೆಗಳು |
|---|---|---|
| ೧೯೯೭ | ೧೧ | ೦೪ |
| ೧೯೯೮ | ೦೯ | ೦೫ |
| ೧೯೯೯ | ೧೧ | ೦೫ |
| ೨೦೦೦ | ೧೩ | ೦೫ |
| ೨೦೦೧ | ೧೨ | ೦೫ |
| ೨೦೦೨ | ೧೩ | ೦೫ |
| ೨೦೦೩ | ೧೩ | ೦೫ |

**Source : Field Survey**

ಈ ಮೇಲಿನ ೨.೧೫ರ ಕೋಷ್ಟಕವು ಬಳ್ಳಾರಿ ಜಿಲ್ಲೆಯಲ್ಲಿ ಮ್ಯಾಂಗನೀಸ್ ಉತ್ಪಾದನೆಗೆ ಪರವಾನಿಗೆಯನ್ನು ಪಡೆದ ಸಂಸ್ಥೆಗಳ ಸಂಖ್ಯೆ ಹಾಗೂ ಕಾರ್ಯ ಚಟುವಟಿಕೆಯಲ್ಲಿರುವ ಸಂಸ್ಥೆಗಳನ್ನು ತೋರಿಸುತ್ತದೆ ೧೯೯೭ರಲ್ಲಿ ೧೧ ಸಂಸ್ಥೆಗಳು ಪರವಾನಗಿಯನ್ನು ಪಡೆದಿದ್ದರೆ ಅವುಗಳಲ್ಲಿ ಕೇವಲ

೦೪ ಸಂಸ್ಥೆಗಳು ಮಾತ್ರ ಕಾರ್ಯಾರಂಭಗೊಂಡಿವೆ. ಹಾಗೆಯೇ ೨೦೦೩ರ ಹೊತ್ತಿಗೆ ೧೩ ಸಂಸ್ಥೆಗಳ ಸರ್ಕಾರದಿಂದ ಪರವಾನಗಿ ಪಡೆದಿದ್ದರೂ ಕೇವಲ ೦೫ ಸಂಸ್ಥೆಗಳು ಮಾತ್ರ ಮ್ಯಾಂಗನೀಸ್ ಉತ್ಪಾದನೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಜೊತೆಗೆ ಜಿಲ್ಲೆಯಲ್ಲಿರುವ ಮ್ಯಾಂಗನೀಸ್ ಉತ್ಪಾದಕ ಸಂಸ್ಥೆಯ ವಿವರಗಳನ್ನು ೨.೧೬ರ ಕೋಷ್ಟಕದಿಂದ ತಿಳಿಯಬಹುದು.

ಕೋಷ್ಟಕ ೨.೧೬ : ಬಳ್ಳಾರಿ ಜಿಲ್ಲೆಯಲ್ಲಿರುವ ಮ್ಯಾಂಗನೀಸ್ ಉತ್ಪಾದಕರ ವಿವರ

| ಕ್ರ.ಸಂ | ಉತ್ಪಾದಕರ ಹೆಸರು | ಸ್ಥಳ |
|---|---|---|
| ೧. | ಸ್ಮಯೋರ್ (SMIORE) | ಸಂಡೂರು ತಾಲೂಕು |
| ೨. | ಗಡಗಿ ಮಿನಿರಲ್ಸ್ ಮತ್ತು ಮೈನಿಂಗ್ ಕಂಪನಿ | ಸಂಡೂರು ತಾಲೂಕು |
| ೩. | ಕುಮಾರಸ್ವಾಮಿ ಮೈನಿಂಗ್ ಕಂಪನಿ | ಸಂಡೂರು ತಾಲೂಕು |
| ೪. | ವಿ.ಎನ್.ಕೆ. ಮೆನನ್ ಮತ್ತು ಕಂಪನಿ | ಸಂಡೂರು ತಾಲೂಕು |
| ೫. | ಬಸಮ್ಮ ವ್ಹಿ. | ಸಂಡೂರು ತಾಲೂಕು |
| ೬. | ಜಯಂತ ಕೆ. | ಸಂಡೂರು ತಾಲೂಕು |
| ೭. | ಭಾರತ್ ಮೈನ್ಸ್ ಮತ್ತು ಮಿನಿರಲ್ಸ್ | ಸಂಡೂರು ತಾಲೂಕು |
| ೮. | ಶಾಂತಿಪ್ರಿಯ ಮಿನಿರಲ್, ಪ್ರೈ ಲಿಮಿಟೆಡ್ | ಹೊಸಪೇಟೆ ತಾಲೂಕು |
| ೯. | ನಾರಾಯಣ ಮಿನಿರಲ್ಸ್ ಪ್ರೈ. ಲಿಮಿಟೆಡ್ | ಹೊಸಪೇಟೆ ತಾಲೂಕು |
| ೧೦. | ಜೆ.ಎಂ. ವೃಷಬೇಂದ್ರಯ್ಯ | ಸಂಡೂರು ತಾಲೂಕು |
| ೧೧. | ಓಂಕಾರಮ್ಮ | ಸಂಡೂರು ತಾಲೂಕು |
| ೧೨. | ಎಚ್.ಟಿ. ಮಿನಿರಲ್ಸ್ | ಸಂಡೂರು ತಾಲೂಕು |

**Source : Field Survey**

ಈ ಮೇಲಿನ ಪಟ್ಟಿಯು ಜಿಲ್ಲೆಯಲ್ಲಿ ಮ್ಯಾಂಗನೀಸ್ ಅದಿರನ್ನು ಉತ್ಪಾದಿಸುವ ಉತ್ಪಾದಕರ ವಿಳಾಸ ಹಾಗೂ ಉತ್ಪಾದನಾ ಪ್ರದೇಶದ ವಿವರಗಳನ್ನು ತಿಳಿಸುತ್ತದೆ. ಈ ಪಟ್ಟಿಯ ಪ್ರಕಾರ ಒಟ್ಟು ೧೨ ಮ್ಯಾಂಗನೀಸ್ ಉತ್ಪಾದಕರಲ್ಲಿ ೧೦ ಗಣಿ ಉತ್ಪಾದಕ ಸಂಸ್ಥೆಗಳು ಸಂಡೂರು ತಾಲೂಕಿನಲ್ಲಿ ನೆಲೆಗೊಂಡಿದ್ದರೆ, ಹೊಸಪೇಟೆಯ ವ್ಯಾಪ್ತಿಯಲ್ಲಿ ಕೇವಲ ೦೨ ಗಣಿ ಉತ್ಪಾದಕ ಸಂಸ್ಥೆಗಳು ಮಾತ್ರ ಅಸ್ತಿತ್ವದಲ್ಲಿರುವುದನ್ನು ಮನಗಂಡಾಗ ಜಿಲ್ಲೆಯ ಮ್ಯಾಂಗನೀಸ್ ಸಂಪನ್ಮೂಲದ ಖಜಾನೆಯು ಸಂಡೂರು ತಾಲೂಕಿನ ವ್ಯಾಪ್ತಿಯಲ್ಲಿ ಕೇಂದ್ರೀಕೃತಗೊಂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

## ೨.೪. ಕಬ್ಬಿಣ ಅದಿರಿನ ಉತ್ಪಾದನೆ ಮತ್ತು ವಿತರಣೆ

ಕ್ರಿ.ಪೂ. ೪೦೦೦ ವರ್ಷಗಳ ಹಿಂದಿಯೇ ಕಬ್ಬಿಣದ ಉಪಯೋಗವನ್ನು ಆದಿಮಾನವ ಅರಿತು ಕೊಂಡಿದ್ದನು ಎಂಬುದಕ್ಕೆ ವಿಶ್ವದ ಪುರಾತನ ನಾಗರಿಕತೆಗಳ ಉತ್ಖನನದ ಸನ್ನಿವೇಶಗಳಲ್ಲಿ ದೊರೆತ ಕೆಲವು ಕಬ್ಬಿಣದ ಆಭರಣಗಳು, ಗುರಾಣಿ, ಗುದ್ದಲಿ, ನೇಗಿಲು ಇತ್ಯಾದಿಗಳು ಸ್ಪಷ್ಟಪಡಿಸುತ್ತವೆ. ಆದಿಮಾನವನಿಗೆ ವಿವಿಧ ಲೋಹಗಳ ಬಳಕೆಯ ಬಗ್ಗೆ ಪರಿಜ್ಞಾನವಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅದಕ್ಕಾಗಿಯೇ ಮಾನವನ ನಾಗರಿಕತೆಯ ಒಂದು ಕಾಲಘಟ್ಟವನ್ನು ಲೋಹಯುಗವೆಂದೂ ಗುರುತಿಸಲಾಗಿದೆ ಎಂಬುದು ಇತಿಹಾಸಕಾರರ ಅಭಿಮತ. ಇಂದಿನ ಆಧುನಿಕ ನಾಗರಿಕತೆಯಂತು ಕಬ್ಬಿಣ ಮತ್ತು ಉಕ್ಕಿನ ನಾಗರಿಕತೆಯೆಂದೇ ಕರೆಯಬಹುದು. ಏಕೆಂದರೆ ಆಧುನೀಕರಣ ಹಾಗೂ ಕೈಗಾರೀಕರಣದ ಪ್ರಕ್ರಿಯೆಗಳು ಮೂಲತಃ ಕಬ್ಬಿಣ ಮತ್ತು ಉಕ್ಕನ್ನು ಆಧಾರಿಸಿರುವುದರಿಂದ ಮಾನವನ ವಾಸಸ್ಥಳದಿಂದ ಹಿಡಿದುಕೊಂಡು ಕೈಗಾರಿಕೆ, ಯಂತ್ರೋಪಕರಣ, ಸಾರಿಗೆ-ಸಂಪರ್ಕ ಸೌಲಭ್ಯ ಇತ್ಯಾದಿ ಮೂಲಭೂತ ಅವಶ್ಯಕತೆಗಳ ವಿಸ್ತರಣೆಗೆ ಮತ್ತು ಅವುಗಳ ಬಲವರ್ಧನೆಗೆ ಕಬ್ಬಿಣ ಮತ್ತು ಉಕ್ಕಿನ ಬಳಕೆಯು ಆಸರೆಯಾಗಿ ನಿಲ್ಲುತ್ತದೆ ಜೊತೆಗೆ ಅಭಿವೃದ್ಧಿಯ ಚಲನೆಯನ್ನು ಪ್ರೋತ್ಸಾಹಿಸುತ್ತದೆ.

ಇಂತಹ ಬಹುಮುಖಿ ಕಬ್ಬಿಣ ಅದಿರಿನ ನಿಕ್ಷೇಪಗಳು ಜಾಗತಿಕ ಮಟ್ಟದಿಂದ ಹಿಡಿದು ದೇಶ, ರಾಜ್ಯ ಹಾಗೂ ಜಿಲ್ಲೆಗಳ ವ್ಯಾಪ್ತಿಯಲ್ಲಿ ವಿಸ್ತರಿಸಿಕೊಂಡಿದೆ. ಕಚ್ಚಾ ಕಬ್ಬಿಣದ ಅದಿರನ್ನು ಬೇರೆ, ಬೇರೆ, ದೇಶಗಳಿಗೆ ರಫ್ತು ಮಾಡುವ ಮೂಲಕ ಆಯಾ ದೇಶಗಳ ವಿದೇಶಿ ವಿನಿಮಯವನ್ನು ಗಳಿಸಬಹುದು. ವಿಶ್ವದಲ್ಲಿ ಅಭಿವೃದ್ಧಿ ಅಥವಾ ಶ್ರೀಮಂತ ರಾಷ್ಟ್ರಗಳೆಂದು ಖ್ಯಾತಿವೆತ್ತ ಎಲ್ಲಾ ರಾಷ್ಟ್ರಗಳಲ್ಲಿ ಕಬ್ಬಿಣ ಅದಿರಿನ ಸಂಪನ್ಮೂಲಗಳು ಅತ್ಯಧಿಕವಾಗಿರುವುದನ್ನು ಮನಗಾಣಬಹುದು. ೨.೧೭ರ ಕೋಷ್ಟಕದಿಂದ ಸಂಕ್ಷಿಪ್ತವಾಗಿ ಕಬ್ಬಿಣ ಅದಿರಿನ ಸಂಪನ್ಮೂಲದ ಹಂಚಿಕೆಯ ಪ್ರಮಾಣವನ್ನು ತಿಳಿಯಬಹುದು.

**ಕೋಷ್ಟಕ ೨.೧೭ : ಕಬ್ಬಿಣ ಅದಿರಿನ ಸಂಪನ್ಮೂಲದ ಹಂಚಿಕೆ**

| ಕ್ರ.ಸಂ. | ಸ್ಥಳಗಳ ಹೆಸರು | ಕಬ್ಬಿಣ ಅದಿರಿನ ನಿಕ್ಷೇಪ |
|---|---|---|
| ೧. | ವಿಶ್ವ | ೧೬೦೦೦೦ ಬಿಲಿಯನ್ ಟನ್ನುಗಳು |
| ೨. | ಭಾರತ | ೩೯೦೦ ಮಿಲಿಯನ್ ಟನ್ನುಗಳು |
| ೩. | ಕರ್ನಾಟಕ | ೧೦೭೨ ಮಿಲಿಯನ್ ಟನ್ನುಗಳು |
| ೪. | ಬಳ್ಳಾರಿ | ೭೮೨ ಮಿಲಿಯನ್ ಟನ್ನುಗಳು |

**Source :** Mineral Commedity Summaries - 1999

ಜಾಗತಿಕ ಮಟ್ಟದಲ್ಲಿರುವ ಕಬ್ಬಿಣದ ಅದಿರಿನ ಸಂಪನ್ಮೂಲವು ಹೆಚ್ಚಾಗಿ ಉಕ್ರೇನ್, ರಷ್ಯಾ, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕ, ಅಮೇರಿಕ, ಚೀನಾ, ಬ್ರೆಜಿಲ್ ದೇಶಗಳಲ್ಲಿ ಅತ್ಯಧಿಕ ಪ್ರಮಾಣದ ಕಬ್ಬಿಣದ ನಿಕ್ಷೇಪಗಳು ಕೇಂದ್ರೀಕೃತಗೊಂಡಿವೆ.

ಭಾರತದಲ್ಲಿ ಸುಮಾರು ೩೯೦೦ ಮಿಲಿಯನ್ ಟನ್ನುಗಳಿಗಿಂತಲೂ ಹೆಚ್ಚೂ ಕಬ್ಬಿಣ ಅದಿರಿನ ನಿಕ್ಷೇಪಗಳು ಭೂಗರ್ಭದಲ್ಲಿ ಅಡಕವಾಗಿದ್ದು, ಅದು ಹೆಚ್ಚಾಗಿ ಆಂಧ್ರಪ್ರದೇಶ ಬಿಹಾರ, ಗೋವಾ, ಓರಿಸ್ಸಾ, ಮಧ್ಯಪ್ರದೇಶ, ಕರ್ನಾಟಕ, ರಾಜಸ್ಥಾನ, ಮಹಾರಾಷ್ಟ್ರ, ಹರಿಯಾಣ ಇತ್ಯಾದಿ ರಾಜ್ಯಗಳಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಕಬ್ಬಿಣದ ನಿಕ್ಷೇಪಗಳಿರುವುದು ಪತ್ತೆಯಾಗಿದೆ. ಇಂತಹ ಕಬ್ಬಿಣದ ಕಚ್ಚಾ ಅದಿರನ್ನು ಭಾರತ ದೇಶವು ಪ್ರತಿವರ್ಷ ವಿದೇಶಗಳಿಗೆ ರಫ್ತು ಮಾಡಿ ತನ್ನ ರಾಷ್ಟ್ರೀಯ ಆದಾಯದ ಶೇಕಡ ೩೪ ರಷ್ಟು ಆದಾಯವನ್ನು ಗಳಿಸುತ್ತಿದೆ. ಭಾರತದ ಬಹುಭಾಗ ಕಬ್ಬಿಣದ ಅದಿರನ್ನು ಜಪಾನ್, ಚೀನಾ, ಆಸ್ಟ್ರೇಲಿಯಾ, ನೆದರ್‌ಲ್ಯಾಂಡ್, ಕೋರಿಯಾ ರಿಪಬ್ಲಿಕ್, ಆಸ್ಟ್ರೇಲಿಯಾ ಹಾಗೂ ಫ್ರಾನ್ಸ್ ದೇಶಗಳಿಗೆ ರಫ್ತು ಮಾಡಲಾಗುತ್ತಿದೆ. ಭಾರತದಲ್ಲಿ ದೊರೆಯುವ ಕಬ್ಬಿಣದ ಅದಿರನ್ನು ಲಂಪಿ, ಪೌಡರ್, ರೆಡ್ ಆಕ್ಸೈಡ್, ರೆಡ್ ಓಕಾರ್, ಬ್ಲೂ ಡಸ್ಟ್ ಹೀಗೆ ವಿವಿಧ ದರ್ಜೆಗಳಲ್ಲಿ ವಿಂಗಡಿಸಿ, ಕಬ್ಬಿಣದ ಅದಿರಿನ ಉತ್ಪಾದನಾ ಚಟುವಟಿಕೆಗಳನ್ನು ಕೈಗೊಳ್ಳಲಾಗುತ್ತದೆ. ಹಾಗೆಯೇ ಕರ್ನಾಟಕವೂ ಸಹ ಶ್ರೀಮಂತಿಕೆಯುಳ್ಳ ಕಬ್ಬಿಣ ಅದಿರಿನ ನಿಕ್ಷೇಪಗಳನ್ನು ಹೊಂದಿದೆ. ಭಾರತದ ಕಬ್ಬಿಣದ ರಫ್ತು ವ್ಯಾಪಾರದಲ್ಲಿ ಶೇಕಡ ೨೫ಕ್ಕಿಂತಲೂ ಹೆಚ್ಚಿನ ಪ್ರಮಾಣದ ಪಾಲುದಾರಿಕೆಯನ್ನು ರಾಜ್ಯವು ಪಡೆದುಕೊಂಡಿದೆ. ರಾಜ್ಯದಲ್ಲಿ ಬಳ್ಳಾರಿ, ಚಿತ್ರದುರ್ಗ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಧಾರವಾಡ, ಬಿಜಾಪುರ ಮುಂತಾದ ಜಿಲ್ಲೆಗಳಲ್ಲಿ ಕಬ್ಬಿಣದ ಅದಿರು ಹೇರಳವಾಗಿ ಸಿಗುತ್ತದೆ.

ಬಳ್ಳಾರಿ ಜಿಲ್ಲೆಯು ಕರ್ನಾಟಕದ ಒಟ್ಟು ಉತ್ಪಾದನೆಯ ಅರ್ಧದಷ್ಟು ಕಬ್ಬಿಣ ಅದಿರಿನ ನಿಕ್ಷೇಪಗಳಿದ್ದು ಬಳ್ಳಾರಿ ಜಿಲ್ಲೆಯಲ್ಲಿ ಸರಾಸರಿ ೭೮೩ ಮಿಲಿಯನ್ ಟನ್ನುಗಳಷ್ಟು ಕಬ್ಬಿಣದ ನಿಕ್ಷೇಪಗಳಿವೆ ಎಂದು ನಂಬಲಾಗಿದೆ. ಒಂದು ಅಂದಾಜಿನ ಪ್ರಕಾರ ಜಿಲ್ಲೆಯ ಸಂಡೂರು, ಹೊಸಪೇಟೆ, ಬಳ್ಳಾರಿಯನ್ನೊಳಗೊಂಡಂತೆ ಅತ್ಯುತ್ತಮ ಗುಣಮಟ್ಟದ ಖನಿಜ ಸಂಪನ್ಮೂಲವನ್ನು ಪಡೆದಿವೆ. ಇಂತಹ ಸಂಪದ್ಭರಿತ ಖನಿಜ ನಿಕ್ಷೇಪಗಳು ರಾಜ್ಯ ಹಾಗೂ ಜಿಲ್ಲಾಮಟ್ಟದಲ್ಲಿ ಯಾವ ಪ್ರಮಾಣದಲ್ಲಿದೆ ಎಂಬುದನ್ನು ೨.೧೮ರ ಪಟ್ಟಿಯಿಂದ ತಿಳಿಯಬಹುದು.

೨.೧೮ರ ಮುಂದಿನ ಕೋಷ್ಟಕವನ್ನು ಪರಿಶೀಲಿಸಿದಾಗ ರಾಜ್ಯದ ಕಬ್ಬಿಣ ಅದಿರಿನ ಒಟ್ಟು ಭೌಗೋಳಿಕ ವಿಸ್ತೀರ್ಣತೆಯ ಪ್ರಮಾಣ ಕಂಡುಬರುತ್ತದೆ. ಜಾಗತೀಕರಣದ ಪರಿಣಾಮದಿಂದಾಗಿ ೧೯೯೮ ರಿಂದ ಸತತವಾಗಿ ಕರ್ನಾಟಕದ ವ್ಯಾಪ್ತಿಯಲ್ಲಿ ಕಬ್ಬಿಣ ಅದಿರಿನ ಭೌಗೋಳಿಕ ವಿಸ್ತೀರ್ಣ

**ಕೋಷ್ಟಕ ೨.೧೮ : ಒಟ್ಟು ಕಬ್ಬಿಣ ಅದಿರಿನ ಭೌಗೋಳಿಕ ವಿಸ್ತೀರ್ಣದ ವಿವರ**

| ವರ್ಷಗಳು | ಕರ್ನಾಟಕ (ಹೆಕ್ಟೇರ್‌ಗಳಲ್ಲಿ) | ಬಳ್ಳಾರಿ ಜಿಲ್ಲೆ (ಹೆಕ್ಟೇರ್‌ಗಳಲ್ಲಿ) |
|---|---|---|
| ೧೯೯೮ | ೨೨೧೪೯೭೩ | ೮೪೪೦.೭೬ |
| ೧೯೯೯ | ೨೨೩೫೭೫೧ | ೭೨೧೫.೮೬ |
| ೨೦೦೦ | ೨೨೩೫೭೫೧ | ೭೯೧೯.೮೨ |
| ೨೦೦೧ | ೨೨೫೦೦೬೬ | ೭೩೬೫.೨೪ |
| ೨೦೦೨ | ೨೩೧೦೩೫೪ | ೭೧೮೯.೦೫ |
| ೨೦೦೩ | ೨೪೫೦೬೪೩ | ೭೨೭೪.೪೬ |

**Source :** Mines and Geology Production and Despatch Report, Bangalore

ಹೆಚ್ಚುತ್ತಾ ಸಾಗಿದೆ. ೧೯೯೮ರಲ್ಲಿ ೨೨,೧೪,೯೭೩ ಹೆಕ್ಟೇರ್‌ಗಳಿದ್ದ ಭೂಪ್ರದೇಶ ೨೦೦೩ರ ಹೊತ್ತಿಗೆ ೨೪೫೦೬೪೭ ಹೆಕ್ಟೇರ್‌ಗಳಷ್ಟು ಹೆಚ್ಚಾಗಿರುವುದು ಕೋಷ್ಟಕದಿಂದ ವ್ಯಕ್ತವಾಗುತ್ತದೆ. ಆದರೆ ಬಳ್ಳಾರಿ ಜಿಲ್ಲೆಗೆ ಅನ್ವಯಿಸಿಕೊಂಡಾಗ ಕಬ್ಬಿಣ ಗಣಿಗಾರಿಕೆಯ ಭೌಗೋಳಿಕ ಪ್ರಮಾಣ ಕುಂಠಿತಗೊಳ್ಳುತ್ತಾ ಸಾಗಿದೆ. ೧೯೯೮ರಲ್ಲಿ ೮೪೪೦.೭೬ ಹೆಕ್ಟೇರ್‌ಗಳಷ್ಟು ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದ್ದ ಬಳ್ಳಾರಿ ಜಿಲ್ಲೆಯು ೨೦೦೩ರ ವೇಳೆಗೆ ೭೨೭೪.೪೬ ಹೆಕ್ಟೇರ್‌ನಷ್ಟು ಕಬ್ಬಿಣ ಅದಿರಿನ ಭೂ ವಿಸ್ತೀರ್ಣತೆ ಕುಂಠಿತವಾಗಿದೆ. ಆದರೆ ಈ ಭಾಗದಲ್ಲಿ ಗಣಿ ಸರಬರಾಜು ಮತ್ತು ಉತ್ಪಾದನೆಯ ಚಟುವಟಿಕೆಗಳು ಈ ಹಿಂದಿಗಿಂತಲೂ ಅತ್ಯಧಿಕ ಪ್ರಮಾಣದಲ್ಲಿ ನಡೆದಿವೆ. ಅದನ್ನು ೨.೧೯ರ ಕೋಷ್ಟಕ ನೋಡಬಹುದು.

**ಕೋಷ್ಟಕ ೨.೧೯ : ಕಬ್ಬಿಣ ಅದಿರಿನ ಉತ್ಪಾದನಾ ಸಂಸ್ಥೆಗಳ ಸಂಖ್ಯೆ**

| ವರ್ಷ | ಕರ್ನಾಟಕ | ಬಳ್ಳಾರಿ | ಚಾಲ್ತಿಯಲ್ಲಿರುವ ಗಣಿ ಸಂಸ್ಥೆಗಳು (ಬಳ್ಳಾರಿ) |
|---|---|---|---|
| ೧೯೯೮ | ೧೯೬ | ೭೫ | ೫೩ |
| ೧೯೯೯ | ೧೯೭ | ೭೫ | ೫೨ |
| ೨೦೦೦ | ೧೯೮ | ೭೬ | ೫೪ |
| ೨೦೦೧ | ೧೯೬ | ೭೪ | ೫೦ |
| ೨೦೦೨ | ೧೯೬ | ೭೯ | ೫೭ |
| ೨೦೦೩ | ೨೦೦ | ೮೩ | ೬೨ |

**Source :** Mines and Geology Production and Despatch Report, Bangalore

ಕೋಷ್ಟಕ ೨.೧೯ ರಲ್ಲಿ ಕರ್ನಾಟಕದಲ್ಲಿ ಕಬ್ಬಿಣದ ಅದಿರನ್ನು ಉತ್ಪಾದಿಸುವ ಸಂಸ್ಥೆಗಳು ೧೯೯೮ ರಲ್ಲಿ ೧೯೬ ಇದ್ದರೆ, ೨೦೦೩ರ ವೇಳೆಗೆ ೨೦೦ಕ್ಕೂ ಹೆಚ್ಚಾಗಿದೆ. ಹಾಗೆಯೇ ಬಳ್ಳಾರಿ ಜಿಲ್ಲೆಯಲ್ಲಿ ೧೯೯೮ರಲ್ಲಿ ೫೩ ಸಂಸ್ಥೆಗಳಿದ್ದುದು ೨೦೦೩ರ ವೇಳೆಗೆ ೬೨ಕ್ಕೆ ಅಧಿಕಗೊಂಡಿವೆ. ಇಲ್ಲಿನ ಗಣಿ ಅದಿರಿನಲ್ಲಿ ಹೆಮಿಟೈಟಿಕ್ ಅದಿರಿನ ಮಿಶ್ರಣದಿಂದಾಗಿ ಕಬ್ಬಿಣದ ಅದಿರಿನ ಗುಣಮಟ್ಟವು ವಿಶ್ವಖ್ಯಾತಿಯನ್ನು ಪಡೆದಿದೆ. ಜಿಲ್ಲೆಯ ನೈರುತ್ಯ ವಲಯ ಮತ್ತು ವಾಯುವ್ಯದ ಸರಾಸರಿ ವಿಸ್ತೀರ್ಣದ ೩೦ ಮೈಲುಗಳ ಸುತ್ತಳತೆಯಲ್ಲಿ ಕಬ್ಬಿಣ ಅದಿರಿನ ಸಂಪನ್ಮೂಲಗಳ ನಿಕ್ಷೇಪಗಳಿರುವುದು ಪತ್ತೆಯಾಗಿದೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಸಮೀಕ್ಷೆಯಂತೆ ಬಳ್ಳಾರಿ ಜಿಲ್ಲೆಯ ಭೂಪ್ರದೇಶದಲ್ಲಿ ಅಡಕವಾಗಿರುವ ಕಬ್ಬಿಣ ಅದಿರಿನ ಸಂಪನ್ಮೂಲವು ದೊರೆಯುವ ಸ್ಥಳಗಳನ್ನು ೭ ಶ್ರೇಣಿಗಳ ಸ್ವರೂಪದಲ್ಲಿ ವಿಂಗಡಿಸಲಾಗಿದೆ. ಅವುಗಳ ವಿವರಗಳನ್ನು ೨.೨೦ರ ಪಟ್ಟಿಯಿಂದ ತಿಳಿಯಬಹುದು.

**ಕೋಷ್ಟಕ ೨.೨೦ : ಕಬ್ಬಿಣ ಅದಿರಿನ ಸಂಪನ್ಮೂಲವು ದೊರೆಯುವ ಸ್ಥಳಗಳು**

| ಕ್ರ. ಸಂ. | ಶ್ರೇಣಿಯ ಹೆಸರು | ವ್ಯಾಪ್ತಿ ಪ್ರದೇಶದ ಹೆಸರು |
|---|---|---|
| I. | ತಾಮ್ರ ಪರ್ವತದ ಶ್ರೇಣಿ | ಬಳ್ಳಾರಿ |
| | ೧. ಹಲಕುಂದಿ | |
| | ೨. ಬೆಳಗಲ್ಲು | |
| | ೩. ವಿಭೂತಿಗುಡ್ಡ | |
| | ೪. ಹರಗಿನಡೋಣಿ | |
| II. | ಎತ್ತಿನಹಳ್ಳಿ ಶ್ರೇಣಿ | ಸಂಡೂರು |
| | ೧. ತಾರಾನಗರ | |
| | ೨. ಉಬ್ಬಲಗಂಡಿ | |
| | ೩. ರಾಜಪುರಂ | |
| | ೪. ಕೊನೆನ್ ಹರವು | |
| III. | ತಿಮ್ಮಪ್ಪನ ಗುಡಿ ಶ್ರೇಣಿ | ಹೊಸಪೇಟೆ |
| | ೧. N.E.B. ವ್ಯಾಪ್ತಿ | |
| | ೨. ಭಾರತರಾಯನ ಹರವು(ದಾಲ್ಮೀಯ ಆಸ್ತಿ) | |
| | ೩. ಗೊಗ್ಗ ಒಡೆತನ ಪ್ರದೇಶ | |
| | ೪. ಇಂಗಳಗಿ | |
| | ೫. ಜಂಬುನಾಥ ಹಳ್ಳಿ | |
| | ೬. ಸಂಕಲಾಪುರಂ | |

| | | |
|---|---|---|
| IV. | ರಾಮದುರ್ಗ ಶ್ರೇಣಿ | ಹೊಸಪೇಟೆ |
| | ೧. ವ್ಯಾಸನಕೇರಿ | |
| | ೨. ರಾಮನದುರ್ಗಾ | |
| V. | ರಾಮದುರ್ಗ ಶ್ರೇಣಿ | ಸೊಂಡೂರು |
| VI. | ದೇವದಾರಿ ಶ್ರೇಣಿ | ಸೊಂಡೂರು |
| VII. | ಕುಮಾರಸ್ವಾಮಿ ಶ್ರೇಣಿ | ಸೊಂಡೂರು |

ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ ದೊರೆಯುವ ಸಂಪನ್ಮೂಲಕ್ಕಿಂತಲೂ ಸಂಡೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಂಡುಬರುವ ಕಬ್ಬಿಣ ಸಂಪನ್ಮೂಲವು ಸುಮಾರು ೧೧೯ ಮಿಲಿಯನ್ ಟನ್ನುಗಳಿಗಿಂತ ಹೆಚ್ಚಿದೆ ಎಂಬುದಾಗಿ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯು ಧೃಡಪಡಿಸಿದೆ. ಅವುಗಳಲ್ಲಿ,

**ಕೋಷ್ಟಕ ೨.೨೧**

**ಸಂಡೂರು ಪ್ರದೇಶದ ಸಂಪನ್ಮೂಲದ ಕಬ್ಬಿಣ ವಿವರ**

| ಕ್ರ.ಸಂ. | ಸಂಪನ್ಮೂಲದ ಸ್ಥಳಗಳು | ಸಂಪನ್ಮೂಲದ ಪ್ರಮಾಣ |
|---|---|---|
| ೧. | ತಿಮ್ಮಪ್ಪನ ಗುಡಿ | ೩೨.೦ ಮೆಟ್ರಿಕ್ ಟನ್ನುಗಳು |
| ೨. | ರಾಮದುರ್ಗಾ | ೩೦.೩ ಮೆಟ್ರಿಕ್ ಟನ್ನುಗಳು |
| ೩. | ದೋಣಿಮಲೈ | ೨೫.೬ ಮೆಟ್ರಿಕ್ ಟನ್ಸ್‌ಗಳು |
| ೪. | ದೇವದಾರಿ | ೧೫.೨ ಮೆಟ್ರಿಕ್ ಟನ್ನುಗಳು |
| ೫. | ಕುಮಾರಸ್ವಾಮಿ | ೫.೪ ಮೆಟ್ರಿಕ್ ಟನ್ನುಗಳು |
| ೬. | ಯಶವಂತ ನಗರ | ೦.೭ ಮೆಟ್ರಿಕ್ ಟನ್ನುಗಳು |
| ೭. | ಕಣಿವಿಹಳ್ಳಿ ಯಶವಂತನಗರ | ೦.೭ ಮೆಟ್ರಿಕ್ ಟನ್ನುಗಳು |
| | ಒಟ್ಟು | ೧೧೯ ಮೆಟ್ರಿಕ್ ಟನ್ನುಗಳು |

**Source :** Indian mines and goelogy dept. Bangalore.

ಇಡೀ ಭಾರತ ದೇಶದಲ್ಲಿಯೇ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಗೆ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಸ್ವರೂಪದ ಅತ್ಯಾಧಿಕ ಬಂಡವಾಳ ಮತ್ತು ವಿವಿಧ ಉತ್ಪಾದನಾ ಸಂಸ್ಥೆಗಳು ಹರಿದು ಬರುತ್ತಿವೆ. ಅವುಗಳು ತಮ್ಮ ತಮ್ಮ ವ್ಯಾಪಾರ, ವ್ಯವಹಾರಗಳನ್ನು ವಿಸ್ತರಿಸಿಕೊಳ್ಳಲು ಪರಸ್ಪರ ಪೈಪೋಟಿಗಿಳಿದಿರುವುದರಿಂದ, ಜಿಲ್ಲೆಯ ಕಬ್ಬಿಣದ ಅದಿರಿನ ಉತ್ಪಾದನೆಯ ಚಟುವಟಿಕೆಯು ಸಾಗರೋಪಾದಿಯಲ್ಲಿ ನಡೆದಿದೆ. ಇಂತಹ ಬೆಳವಣಿಗೆಯು ಗಣಿ ಆಧಾರಿತ ಪೂರಕ ಉತ್ಪಾದನಾ ವಲಯಗಳಲ್ಲಿ ಸಂಚಲನವನ್ನು ಹುಟ್ಟುಹಾಕಿದೆ. ಈ ನಿಟ್ಟಿನಲ್ಲಿ ಜಿಲ್ಲೆಯ ಕಬ್ಬಿಣದ ಅದಿರಿನ

ಉತ್ಪಾದನೆಯ ಪ್ರಮಾಣವು ಬೇರೆ, ಬೇರೆ ತಾಲೂಕುಗಳಲ್ಲಿ ಪ್ರತಿವರ್ಷವು ಹೆಚ್ಚಾಗುತ್ತಾ ಸಾಗಿರುವುದನ್ನು ೨.೨೨ರ ಕೋಷ್ಟಕದಿಂದ ನೋಡಬಹುದು.

**ಕೋಷ್ಟಕ ೨.೨೨**

**ಬಳ್ಳಾರಿ ಜಿಲ್ಲೆಯ ಕಬ್ಬಿಣದ ಉತ್ಪಾದನೆಯ ಪ್ರಮಾಣ [ಟನ್ನುಗಳಲ್ಲಿ]**

| ಕ್ರ.ಸಂ. | ವರ್ಷಗಳು | ಸಂಡೂರು | ಹೊಸಪೇಟೆ | ಬಳ್ಳಾರಿ |
|---|---|---|---|---|
| ೧. | ೧೯೯೮ | ೭೯೦೦೬೩೭ | ೨೨೮೭೮೯೦ | ೧೩೧೨೩೨ |
| ೨. | ೧೯೯೯ | ೮೪೫೮೩೭೪ | ೩೪೫೬೬೨೮ | ೧೩೬೫೫೮ |
| ೩. | ೨೦೦೦ | ೯೯೮೬೨೮ | ೩೩೧೬೬೫೨ | ೦೯೬೮೫೫ |
| ೪. | ೨೦೦೧ | ೧೧೧೦೭೨೫೮ | ೫೮೭೩೮೨೫ | ೧೦೦೦೦೦ |
| ೫. | ೨೦೦೨ | ೧೬೫೬೯೭೮೫ | ೬೫೮೪೩೧೪ | ೧೦೦೨೬೬ |
| ೬. | ೨೦೦೩ | ೨೦೩೨೪೫೬೪ | ೮೬೭೫೯೨೫ | ೧೧೫೭೯೮ |
| | ಒಟ್ಟು | ೯೫೩೫೯೨೪೬ | ೩೦೧೯೫೨೩೪ | ೬೮೦೭೦೯ |

ಆಧಾರ : ಕ್ಷೇತ್ರಕಾರ್ಯದ ಮಾಹಿತಿ

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಕಬ್ಬಿಣದ ಅದಿರಿನ ಉತ್ಪಾದನೆಯು ಪ್ರತಿ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಾ ಸಾಗಿರುವುದನ್ನು ಮನಗಾಣಬಹುದು. ಜಾಗತೀಕರಣದ ಹಿನ್ನಲೆಯಲ್ಲಿ ಖಾಸಗೀಕರಣ ಮತ್ತು ಉದಾರೀಕರಣಗಳ ಪ್ರಭಾವದಿಂದಾಗಿ ಖನಿಜ ಸಂಪನ್ಮೂಲಗಳ ಆಮದು ಹಾಗೂ ರಫ್ತು ಚಟುವಟಿಕೆಗಳಿಗೆ ಯಾವುದೇ ನಿರ್ಬಂಧನೆಗಳಿಲ್ಲ. ಕಾರಣ ಸ್ಥಳೀಯವಾಗಿ ಲಭ್ಯವಿದ್ದ ಕಚ್ಚಾ ಖನಿಜ ಸಾಮಗ್ರಿಯನ್ನು ಚೀನಾ, ಜಪಾನ್, ಆಸ್ಟ್ರೇಲಿಯಾ, ಆಫ್ರಿಕಾ ಮತ್ತು ಅಮೇರಿಕಾ ದೇಶಗಳಿಗೆ ಅತ್ಯಧಿಕ ಪ್ರಮಾಣದಲ್ಲಿ ರಫ್ತು ಮಾಡಲಾಗುತ್ತಿದೆ. ಇದರ ಪರಿಣಾಮವಾಗಿ ಜಿಲ್ಲೆಯ ಸಂಡೂರು ತಾಲೂಕು ವ್ಯಾಪ್ತಿಯಲ್ಲಿ ೧೯೯೮ರಲ್ಲಿ ೭೯.೦೦೬೩೭ ಟನ್ನುಗಳಷ್ಟು ಉತ್ಪಾದನೆಯಾಗಿದ್ದ, ಕಚ್ಚಾ ಕಬ್ಬಿಣ ಅದಿರಿನ ಪ್ರಮಾಣವು ೨೦೦೩ರ ವೇಳೆಗೆ ೨೦,೩೨೪೫೬೪ ಟನ್ನುಗಳಿಗೇರಿದೆ. ಹಾಗೆಯೇ ಹೊಸಪೇಟೆಯಲ್ಲಿ ೧೯೯೮ರಲ್ಲಿ ೨೨೮೭೮೯೦ ಟನ್ನುಗಳಿದ್ದದ್ದೂ ೨೦೦೩ರ ಹೊತ್ತಿಗೆ ೮೬೭೫೯೨೫ ಟನ್ನುಗಳಿಗೆ ಏರಿದೆ. ಬಳ್ಳಾರಿ ವ್ಯಾಪ್ತಿಯಲ್ಲಿ ೧೯೯೮ರಲ್ಲಿ ೧೩೧೨೩೨ ಟನ್ನುಗಳಿದ್ದದು ೨೦೦೩ರ ಸಾಲಿಗೆ ೧೧೫೭೯೮ ಟನ್ನುಗಳಿಗೆ ಹೆಚ್ಚಾಗಿ ಇಡೀ ಜಿಲ್ಲೆಯ ವ್ಯಾಪಾರ ಮತ್ತು ವ್ಯವಹಾರಗಳ ದಿಕ್ಕನ್ನೇ ಬದಲಾಯಿಸಿದೆ. ಇಂತಹ ಉತ್ಪಾದನೆಯ ಪ್ರಮಾಣವನ್ನು ಜಾಗತಿಕ ಮಟ್ಟದಲ್ಲಿ ತಾಳೆ ನೋಡುವುದಾದರೆ ೨.೨೩ರ ಕೋಷ್ಟಕವನ್ನು ಗಮನಿಸಬೇಕಾಗಿದೆ.

### ಕೋಷ್ಟಕ ೨.೨೩

### ಜಾಗತಿಕ ಮಟ್ಟದ ಕಬ್ಬಿಣ ಅದಿರಿನ ಉತ್ಪಾದನೆಯ ಪ್ರಮಾಣ

(ಮಿಲಿಯನ್ ಮತ್ತು ಬಿಲಿಯನ್ಸ್‌ಗಳಲ್ಲಿ)

| ವರ್ಷಗಳು | ವಿಶ್ವ (ಬಿಲಿಯನ್ಸ್) | ಭಾರತ | ಕರ್ನಾಟಕ | ಬಳ್ಳಾರಿ |
|---|---|---|---|---|
| ೧೯೯೬ | ೧೦೫೦ | ೬೮೧೬೧ | ೧೧೦೯೯೦೧೯ | ೯೫೯೬೩೧೯ |
| ೧೯೯೭ | ೧೦೬೩ | ೭೫೭೨೩ | ೧೧೮೭೮೬೬೨ | ೧೦೦೧೨೦೪೩ |
| ೧೯೯೮ | ೧೦೪೫ | ೭೨೨೩೦ | ೧೧೮೭೮೬೬೨ | ೧೦೩೧೯೭೫೯ |
| ೧೯೯೯ | ೧೦೧೦ | ೭೪೯೪೬ | ೧೧೪೭೫೪೦೪ | ೧೨೦೫೧೫೬೦ |
| ೨೦೦೦ | ೧೦೩೦ | ೭೯೨೧೦ | ೧೧೮೩೬೦೪೧ | ೧೩೩೫೭೧೩೫ |
| ೨೦೦೧ | ೧೦೨೩ | ೮೧೩೪೦ | ೧೨೦೯೪೪೬ | ೧೭೦೮೧೦೮೪ |
| ೨೦೦೨ | ೧೦೧೨ | ೮೨೬೨೪ | ೧೨೮೦೨೧೨ | ೨೩೨೧೮೩೨೫ |

**Source :** Administrative report of the dept. of mines and geology, Bangalore.

ಈ ಮೇಲಿನ ಕೋಷ್ಟಕವನ್ನು ನೋಡಿದಾಗ ಕಬ್ಬಿಣದ ಅದಿರಿನ ಉತ್ಪಾದನೆ ಜಾಗತಿಕ ಮಟ್ಟದಲ್ಲಿ ಪ್ರತಿವರ್ಷ ಕಡಿಮೆಯಾಗುತ್ತಾ ನಡೆದಿದೆ. ೧೯೯೬ರಲ್ಲಿ ೧೦೫೦ ಬಿಲಿಯನ್ ಟನ್ನುಗಳಿದ್ದರೂ ೨೦೦೨ರ ವೇಳೆಗೆ ೧೦೧೨ ಬಿಲಿಯನ್‌ನಷ್ಟು ಕಡಿಮೆಯಾಗಿದೆ. ಆದರೆ ಅಭಿವೃದ್ಧಿಶೀಲ ಭಾರತ ಸೇರಿದಂತೆ ಕರ್ನಾಟಕ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚುತ್ತಾ ಸಾಗಿರುವುದು ಕಂಡುಬರುತ್ತದೆ. ಭಾರತದಲ್ಲಿ ೧೯೯೬ರಲ್ಲಿ ೬೮,೧೬೧ ಇದ್ದದ್ದು ೨೦೦೨ರಲ್ಲಿ ೮೨,೬೨೪ ಹಾಗೂ ಕರ್ನಾಟಕದಲ್ಲಿ ೧೧ ಕೋಟಿಯಿಂದ ೧೨ ಕೋಟಿಗಳಿಗೆ ಹೆಚ್ಚಾಗಿದೆ. ಹಾಗೆಯೇ ಬಳ್ಳಾರಿ ಜಿಲ್ಲೆಯಲ್ಲಿ ೧೯೯೬ರಲ್ಲಿ ೯೫ ಲಕ್ಷದಿಂದ ೨೩ ಕೋಟಿಗಿಂತಲೂ ಅಧಿಕವಾಗಿದೆ. ಇಂತಹ ಮಹತ್ವಪೂರ್ಣ ಕಬ್ಬಿಣದ ಅದಿರನ್ನು ಜಿಲ್ಲೆಯಲ್ಲಿ ಉತ್ಪಾದಿಸುವವರ ವಿವರಗಳನ್ನು ೨.೨೪ರ ಪಟ್ಟಿಯಿಂದ ತಿಳಿಯಬಹುದು.

### ಕೋಷ್ಟಕ ೨.೨೪ ಕಬ್ಬಿಣ ಅದಿರಿನ ಉತ್ಪಾದಕರ ವಿವರಗಳು

| ಕ್ರ.ಸಂ. | ಗಣಿ ಸಂಸ್ಥೆಗಳ ಹೆಸರು | ಗಣಿ ಸಂಸ್ಥೆಗಳು ನೆಲೆಸಿರುವ ಪ್ರದೇಶ |
|---|---|---|
| ೧. | ಎನ್.ಎಂ.ಡಿ.ಸಿ. | ದೋಣಿಮಲೈ (ಸಂಡೂರು) |
| ೨. | ಎಂ.ಎಸ್.ಪಿ.ಎಲ್. | ಹೊಸಪೇಟೆ |
| ೩. | ಟಿ.ಎಂ.ಎಲ್ | ತಾರಾನಗರ (ಸಂಡೂರು) |
| ೪. | ಮಿ. ವಿ.ಎಸ್. ಲಾಡ್ ಅಂಡ್ ಸನ್ಸ್ | ಕೃಷ್ಣನಗರ (ಸಂಡೂರು) |

| | | |
|---|---|---|
| ೫. | ಮಿ. ಕೆ.ಎಂ.ಎ.ಐ. (ಕಾರಿಗನೂರು ಮುನಿರಾಬಾದ್‌ಮೈನಿಂಗ್ ಇಂಡಸ್ಟ್ರೀಸ್) | ಕಾರಿಗನೂರು (ಹೊಸಪೇಟೆ) |
| ೬. | ಹೆಚ್.ಆರ್.ಜಿ. | ಹೊಸಪೇಟೆ (ಸಂಡೂರು) |
| ೭. | ಜೀನತ್ ಟ್ರಾನ್ಸ್‌ಪೋರ್ಟ್ ಕಂಪನಿ | ಸುಶೀಲಾನಗರ (ಸಂಡೂರು) |
| ೮. | ಮಿ. ಲಕ್ಷ್ಮಿ ನಾರಾಯಣ ಮೈನಿಂಗ್ ಕಂಪನಿ | ಸಿದ್ದಾಪುರ (ಸಂಡೂರು) |
| ೯. | ಹುತ್ತೂರು ಪ್ರೈವೇಟ್ ಲಿಮಿಟೆಡ್ | ಧರ್ಮಾಪುರ (ಸಂಡೂರು) |
| ೧೦. | ಆರ್.ಪಿ. ಮೈನ್ಸ್ | ಹೊಸಪೇಟೆ |
| ೧೧. | ಕುಮಾರಸ್ವಾಮಿ ಮೈನಿಂಗ್ ಮಿನಿರಲ್ಸ್ ಇಂಡಸ್ಟ್ರೀಸ್(KMMI) | ಸಂಡೂರು |
| ೧೨. | ಭರತ್ ಮೈನ್ಸ್ ಮತ್ತು ಮಿನಿರಲ್ಸ್(BMM) | ನವಲಟ್ಟಿ (ಸಂಡೂರು) |

ಆಧಾರ : ಇಂಡಿಯನ್ ಮೈನ್ಸ್ ಆ್ಯಂಡ್ ಜಿಯಲಾಜಿ ಡಿಪಾರ್ಟ್‌ಮೆಂಟ್, ಬೆಂಗಳೂರು

೨.೨೪ರ ಕೋಷ್ಟಕವು ಎಲ್ಲಾ ಉತ್ಪಾದಕರು ಸೇರಿ, ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡಿದ ಸರಾಸರಿ ಕಬ್ಬಿಣದ ಅದಿರಿನ ಪ್ರಮಾಣವನ್ನು ೨.೨೫ರ ಕೋಷ್ಟಕದಿಂದ ತಿಳಿಯಬಹುದು.

ಕೋಷ್ಟಕ ೨.೨೫

ಬಳ್ಳಾರಿ ಜಿಲ್ಲೆಯ ಕಬ್ಬಿಣ ಅದಿರಿನ ಮಾರಾಟ

| ವರ್ಷ | ಸಂಡೂರು | ಹೊಸಪೇಟೆ | ಬಳ್ಳಾರಿ |
|---|---|---|---|
| ೧೯೯೮ | ೮೧೯೩೦೩೩ | ೨೯೮೪೯೯೯ | ೧೨೬೬೦೬ |
| ೧೯೯೯ | ೫೭೪೮೬೯೮ | ೨೭೫೭೯೨೭ | ೧೩೪೬೮೯ |
| ೨೦೦೦ | ೭೧೬೦೬೭೩ | ೨೫೪೯೫೭೭ | ೧೦೧೭೯೮ |
| ೨೦೦೧ | ೮೧೫೩೫೯೫ | ೨೯೯೧೩೬೫ | ೯೯೭೮೯೦ |
| ೨೦೦೨ | ೧೧೨೮೨೫೦೭ | ೪೬೬೬೧೬೪ | ೧೦೩೧೯೮ |
| ೨೦೦೩ | ೧೩೪೬೫೪೨೬ | ೭೪೩೬೨೫೪ | ೧೨೮೭೬೪ |
| ಒಟ್ಟು | ೪೦೫೩೮೫೦೬ | ೧೫೯೫೦೦೩೨ | ೫೬೬೦೮೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ

ಜಿಲ್ಲೆಯ ಮಾರಾಟದ ಪ್ರಮಾಣವು ಸಂಡೂರು ತಾಲೂಕಿನಲ್ಲಿ ೧೯೯೮ರಲ್ಲಿ ೮೧ ಲಕ್ಷ ಟನ್‌ಗಳಿದದ್ದು, ೨೦೦೩ರ ವೇಳೆಗೆ ೧೩ ಕೋಟಿ ಟನ್‌ಗಳಿಗೆ ಏರಿಕೆಯಾಗಿದೆ. ಹೊಸಪೇಟೆಯಲ್ಲಿ ೨೬ ಲಕ್ಷ ಟನ್‌ನಿಂದ ೭ ದಶಲಕ್ಷಕ್ಕೆ ಮತ್ತು ಬಳ್ಳಾರಿಯಲ್ಲಿ ೧ ಲಕ್ಷ ೨೬ ರಿಂದ ೧ ಲಕ್ಷ ೨೮ ಸಾವಿರ ಟನ್‌ಗಳಿಗೆ ಏರಿಕೆಯಾಗಿದೆ.

೨.೨೫ರ ಕೋಷ್ಟಕವನ್ನು ಅವಲೋಕಿಸಿದಾಗ ಸಂಡೂರು ಹಾಗೂ ಹೊಸಪೇಟೆ ವಲಯದಲ್ಲಿ ಕಬ್ಬಿಣ ಅದಿರಿನ ಮಾರಾಟದ ಪ್ರಮಾಣವು ಅತ್ಯಧಿಕವಾಗಿದ್ದು ೨೦೦೨ರ ಸಾಲಿಗೆ ಶೇಕಡ ೩೮ರಷ್ಟು ವಿಲೇವಾರಿಯಾಗಿರುವುದು ತಿಳಿದುಬರುತ್ತದೆ. ಇದನ್ನು ಪೈ ನಕ್ಷೆಯಿಂದ ನೋಡಬಹುದು.




ಜಿಲ್ಲೆಯಲ್ಲಿ ದೊರೆಯುವ ಅಮೂಲ್ಯ ಕಬ್ಬಿಣದ ಅದಿರನ್ನು ಖರೀದಿಸುವವರ ಹೆಸರು ಮತ್ತು ಸ್ಥಳಗಳನ್ನು ೨.೨೬ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೨.೨೬ : ಬಳ್ಳಾರಿ ಜಿಲ್ಲಾ ಕಬ್ಬಿಣ ಅದಿರು ಖರೀದಿಗಾರರ ವಿವರ**

| ಕ್ರ.ಸಂ. | ಖರೀದಿಗಾರರ ಹೆಸರು | ಸ್ಥಳ |
|---|---|---|
| ೧. | ಸೇಸಾ ಇಂಡಸ್ಟ್ರೀಸ್, ಸೇಸಾ ಗೋವಾ | ಗೋವಾ |
| ೨. | ಎಸ್ಸಾರ್ ಸ್ಟೀಲ್ | ಗುಜರಾತ್ |
| ೩. | ಕುಮಾರ್ ಮೆರ್ಟಜಿಕಲ್ ಕಾರ್ಪೋರೇಷನ್. ಲಿ. | ಸಿಕಿಂದರಾಬಾದ್ |
| ೪. | ಸುಂದರ್ ಸ್ಟೀಲ್ಸ್. ಲಿ. | ಹೈದರಾಬಾದ್ |
| ೫. | ಇಂಡೋ ಡಚ್ ಮೆಟಲ್ಲೋ ಚೆಂಕೋ. ಲಿ. | ಮುಂಬಾಯಿ |
| ೬. | ಎಂ.ಎಸ್.ಪಿ.ಎಲ್. | ಮುಂಬಾಯಿ |

| | | |
|---|---|---|
| ೭. | ಚಿರಾನಿಯಾ ಎಂಟರ್‌ಪ್ರೈಸಸ್ | ಬಳ್ಳಾರಿ |
| ೮. | ಮಿನಿರಲ್ ಎಂಟರ್‌ಪ್ರೈಸಸ್ | ಸನ್‌ವ್ಡಾಡಂ(Sanvandam) |
| ೯. | ಎಸ್ಸಾರ್ ಸ್ಟೀಲ್ | ಹೈದರಾಬಾದ್ |
| ೧೦. | ಎ.ವಿ.ಪಿ. ಸಿಮೆಂಟ್ಸ್ | ಗೋವಾ |
| ೧೧. | ಜುವಾರಿ ಸಿಮೆಂಟ್ಸ್ | ಕಡಪ |
| ೧೨. | ನಿತಿನ್ ಎಂಟರ್‌ಪ್ರೈಸಸ್ | ವಾಡಿ |
| ೧೩. | ಮದ್ರಾಸ್ ಸಿಮೆಂಟ್ಸ್.ಲಿ. | ಜಗ್ಗಯ್ಯಪೇಟೆ |
| ೧೪. | ಮುನಾವರ್ ಪಾಷ | ಗುಲ್ಬರ್ಗಾ |
| ೧೫. | ವಸಂತ್ರಾಂ ಇಂಡಸ್ಟ್ರೀಸ್. ಲಿ. | ಗೋವಾ |
| ೧೬. | ಫೆಮೆಂಟೋ ಇಂಡಸ್ಟ್ರೀಯಲ್. ಲಿ. | ಗೋವಾ |
| ೧೭. | ಫೆರ್ರೋ ಮೆಟ್ ಕಾನ್ಸ್‌ಟ್ರೆಟ್ಸ್. | ಗೋವಾ |
| | Ferro-meate concentrates | |
| ೧೮. | ಕಲೀಂ ಮಿನರಲ್ ಇಂಡಸ್ಟ್ರೀಸ್ | ಬಳ್ಳಾರಿ |
| ೧೯. | ಓರಿಯಾಂಟ್ ಗೋವಾ. ಲಿ. | ಗೋವಾ |
| ೨೦. | ಸಂಗಮೇಶ್ವರ ಮಿನರಲ್ ಡಿವಿಜನ್ | ವಾಡಿ |
| ೨೧. | ಗೌತಮಿ ಇಂಜನಿಯರಿಂಗ್ ಮತ್ತು ಕನ್ಸ್‌ಟ್ರಕ್ಷನ್. | |
| | ಕಂಪನಿ ಪ್ರೈವೇಟ್ ಲಿ. | ಹೈದ್ರಾಬಾದ್ |
| ೨೨. | ಮಿಟ್ಸುಬಿಸಿ ಕಾರ್ಪೋರೇಷನ್ | ನವದೆಹಲಿ |
| ೨೩. | ಆಯಿಲ್ ಆಂಡ್ ನ್ಯಾಚುರಲ್ ಗ್ಯಾಸ್ | |
| | ಕಾರ್ಪೋರೇಷನ್ ಲಿ. | ಚೆನ್ನೈ |
| ೨೪. | ಹನುಮಾನ್ ಮಿನರಲ್ಸ್ | ಬಳ್ಳಾರಿ |
| ೨೫. | ಅಸೋಸಿಯೆಟೆಡ್ ಸಿಮೆಂಟ್ಸ್. ಕಂ. | ವಾಡಿ |
| ೨೬. | ಕಲ್ಯಾಣಿ ಸ್ಟೀಲ್ಸ್ | ಗಿಣಿಗೇರಿ |
| ೨೭. | ಕಲ್ಯಾಣಿ ಫೆರ್ರೋ ಆಲಾಯ್ಸ್ | ಗಿಣಿಗೇರಿ |

| | | |
|---|---|---|
| ೨೮. | ಮುಕುಂದ್ ಸ್ಟೀಲ್ಸ್ | ಗಿಣಿಗೇರಿ |
| ೨೯. | ಕಿರ್ಲೋಸ್ಕರ್ ಫೆರೋ ಇಂಡಸ್ಟ್ರೀಸ್. ಲಿ. | ಬೇವಿನ ಹಳ್ಳಿ |
| ೩೦. | ಬಿ.ಎಸ್.ಎ.ಎಲ್. | ಬಳ್ಳಾರಿ |
| ೩೧. | ರಾಜಶ್ರೀ ಸಿಮೆಂಟ್ಸ್ | ಮಳಖೇಡ್ (ಗುಲ್ಬರ್ಗಾ) |
| ೩೨. | ಉಷಾ ಇಸ್ಪಾತ್. ಲಿ. | ರೇಡಿ[Redi] |
| ೩೩. | ಶಾತವಾಹನ ಇಸ್ಪಾತ್ | ಬೊಮ್ಮನ ಹಳ್ಳಿ |
| ೩೪. | ಜಿಂದಾಲ್ ಸ್ಟೀಲ್ ಲಿಮಿಟೆಡ್ | ತೋರಣಗಲ್ಲು |

**ಆಧಾರ :** ಮೈನ್ಸ್ ಆ್ಯಂಡ್ ಜಿಯಲಾಜಿ, ಹೊಸಪೇಟೆ, ೨೦೦೨-೦೩

ಈ ಮೇಲಿನ ಎಲ್ಲಾ ಗಣಿ ಚಟುವಟಿಕೆಗಳಿಂದ ಜಿಲ್ಲೆಯ ಕಂದಾಯ ಇಲಾಖೆಗೆ ಸಂದಾಯವಾಗುವ ರಾಜಸ್ವದ ಪ್ರಮಾಣವು ಪ್ರತಿವರ್ಷವು ಹೆಚ್ಚಾಗುತ್ತಾ ಸಾಗಿದೆ. ಜಿಲ್ಲೆಯಲ್ಲಿ ನಡೆದಿರುವ ಗಣಿಗಾರಿಕೆಯ ಬೃಹತ್‌ಪ್ರಮಾಣದ ಉತ್ಪಾದನೆ ಹಾಗೂ ವಿತರಣಾ ಚಟುವಟಿಕೆಗಳಿಂದ ಕರ್ನಾಟಕ ರಾಜ್ಯದ ರಾಜಸ್ವಕ್ಕೆ ಸಂದಾಯವಾದ ಆದಾಯದ ವಿವರಗಳನ್ನು ಕೋಷ್ಟಕ ೨.೨೭ ಹಾಗೂ ೨.೨೮ ರಿಂದ ತಿಳಿಯಬಹುದು.

**ಕೋಷ್ಟಕ ೨.೨೭**

**ಕರ್ನಾಟಕ ರಾಜ್ಯಕ್ಕೆ ಸಂದಾಯವಾದ ರಾಜಸ್ವದ ವಿವರ (ಮುಖ್ಯ ಖನಿಜಗಳಿಂದ)**

| ಕ್ರ.ಸಂ. | ವರ್ಷಗಳು | ರಾಜಸ್ವದ ಮೊತ್ತ ಕೋಟಿ ರೂ.ಗಳಲ್ಲಿ |
|---|---|---|
| ೧. | ೧೯೯೮ | ೧೩,೭೨,೬೯,೧೧೯ |
| ೨. | ೧೯೯೯ | ೧೬,೫೭,೫೩,೦೯೮ |
| ೩. | ೨೦೦೦ | ೧೭,೭೨,೦೫,೩೨೪ |
| ೪. | ೨೦೦೧ | ೨೨,೦೨,೫೦,೫೯೫ |
| ೫. | ೨೦೦೨ | ೨೬,೬೫,೨೯,೧೮೯ |
| ೬. | ೨೦೦೩ | ೩೦,೪೨,೧೬,೨೫೬ |

**Source :** Mines and Geology Hospet, 2003-04

ಈ ಮೇಲಿನ ಕೋಷ್ಟಕದಿಂದ ತಿಳಿದುಬರುವುದೇನೆಂದರೆ ಕಳೆದ ಆರು ವರ್ಷಗಳಿಂದ ಜಿಲ್ಲೆಯಲ್ಲಿ ನಡೆದ ವಿವಿಧ ರೀತಿಯ ಗಣಿಗಾರಿಕೆಯಿಂದ, ಕರ್ನಾಟಕ ಸರ್ಕಾರಕ್ಕೆ ಬರುವ ಆದಾಯದ ಪ್ರಮಾಣವು ಪ್ರತಿವರ್ಷ ಹೆಚ್ಚುತ್ತಾ ಸಾಗಿದೆ. ಅದರಲ್ಲಿ ಜಿಲ್ಲೆಯಲ್ಲಿರುವ ಮುಖ್ಯ ಖನಿಜಗಳಿಂದ ೧೯೯೮ರಲ್ಲಿ

ಕೋಷ್ಟಕ ೨.೨೮ : ಉಪ ಖನಿಜಗಳಿಂದ

| ಕ್ರ.ಸಂ. | ವರ್ಷಗಳು | ರಾಜಸ್ವದ ಮೊತ್ತ (ಕೋಟಿ.ರೂ.) |
|---|---|---|
| ೧. | ೧೯೯೮ | ೫೩,೮೬,೩೦೬ |
| ೨. | ೧೯೯೯ | ೨೯,೬೫,೬೦೨ |
| ೩. | ೨೦೦೦ | ೩೩,೬೦,೩೧೧ |
| ೪. | ೨೦೦೧ | ೫೪,೦೬,೩೧೧ |
| ೫. | ೨೦೦೨ | ೭೦,೬೯,೩೯೯ |
| ೬. | ೨೦೦೩ | ೮೨,೭೪,೬೩೨ |

Source : Mines and Geology Hospet - 2002

೧೩.೭೨ ಕೋಟಿ. ರೂಗಳಿಗಿಂತ ಹೆಚ್ಚು ಆದಾಯ ಇದ್ದದ್ದು, ೨೦೦೩ರ ಹೊತ್ತಿಗೆ ೩೦.೪೨ ಕೋಟಿ ರೂ.ಗಳಿಗೆ ಅಧಿಕಗೊಂಡಿದೆ. ಹಾಗೆಯೇ ಉಪಖನಿಜಗಳಿಂದ ಬಂದ ಆದಾಯವು ೧೯೯೮ರಲ್ಲಿ ೫೩೮೬ ಲಕ್ಷ ರೂ.ಗಳಿದ್ದದ್ದೂ ೨೦೦೩ಕ್ಕೆ ೮೨.೯೪ ಲಕ್ಷಗಳಿಗೆ ಹೆಚ್ಚಾಗಿರುವುದನ್ನು ಗಮನಿಸಿದರೆ ರಾಜ್ಯದ ವಾರ್ಷಿಕ ವರಮಾನಕ್ಕೆ ಜಿಲ್ಲೆಯ ಗಣಿಗಾರಿಕೆಯಿಂದ ಬರುವ ಆದಾಯದ ಪ್ರಮಾಣವು ಇಷ್ಟು ಹೆಚ್ಚಾಗಿರುವುದು ಕಂಡುಬರುತ್ತದೆ. ಇಂತಹ ಅಪಾರವಾದ ಆದಾಯದ ಕೊಡುಗೆಯಲ್ಲಿ ನಮ್ಮ ಘನ ಸರ್ಕಾರವು ಕೆಲವೇ ಪ್ರಮಾಣದ ಆದಾಯವನ್ನು ಜಿಲ್ಲೆಯ ಅಭಿವೃದ್ಧಿಗೆ ಶಿಸ್ತು ಬದ್ಧವಾಗಿ ವೆಚ್ಚ ಮಾಡಿದರೆ ಇಡೀ ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿ ಪರಿಪೂರ್ಣಗೊಂಡು ಮಾದರಿ ಜಿಲ್ಲೆಯಾಗುವುದರಲ್ಲಿ ಸಾಧ್ಯವೆಂಬುದು ಮನೋಜ್ಞವಾಗುತ್ತದೆ.

## ೨.೫. ಇದುವರೆಗೆ ಕಾರ್ಮಿಕರ ಬಗ್ಗೆ ನಡೆದ ಅಧ್ಯಯನಗಳ ಸಮೀಕ್ಷೆ

ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ಇದುವರೆಗೂ ನಡೆದಿರುವ ಸಂಶೋಧನೆ, ಆವಿಷ್ಕಾರ ಮತ್ತು ವಿಶ್ಲೇಷಣೆಗಳನ್ನು ಒಂದು ಅರ್ಥದಲ್ಲಿ ಆಯಾ ಕ್ಷೇತ್ರಗಳಲ್ಲಿರುವ ಪ್ರಚಲಿತ ಸನ್ನಿವೇಶಗಳು ತಮ್ಮ ಸುತ್ತಮುತ್ತಲಿನ ವ್ಯವಸ್ಥೆಯ ಹಾಗೂ ಸಮಾಜದ ಪುನರ್‌ಮೌಲೀಕರಣವೆಂದೇ ಹೇಳಬೇಕು. ಹೇಗೆಂದರೆ ಯಾವುದೇ ಆಕಾರಗಳನ್ನು ಆಧರಿಸಿದ ಸಂಶೋಧನೆಯು ನಿರಂತರವಾಗಿ ಚಲಿಸುವ ಹಾಗೂ ಬದಲಾವಣೆಗೊಳ್ಳುವ ಕಾಲಮಾನದ ಜೊತೆಗೆ, ಜನಸಮುದಾಯಗಳ ಬದುಕನ್ನೂ ಮತ್ತು ಅವರ ಜೀವನದ ವಿವಿಧ ಕ್ರಮಗಳನ್ನು ಅನಾವರಣಗೊಳಿಸುವ ಒಂದು ಪ್ರಕ್ರಿಯೆ ಹಾಗೂ ಸಂದರ್ಭವೂ ತುಂಬಾ ವಿಶಿಷ್ಟ ಮತ್ತು ವಿಭಿನ್ನವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸಂಶೋಧನೆಗಳು ನಮ್ಮ ಸುತ್ತಮುತ್ತಲಿನ

ವ್ಯವಸ್ಥೆ ಹಾಗೂ ಜನಸಮುದಾಯಗಳ ಬದುಕಿನ ಸಮಸ್ತ ಚಟುವಟಿಕೆಗಳ ಒಟ್ಟು ಮೊತ್ತವಾಗಿದೆ. ಅಂದರೆ ಅದು ಸಮಾಜದ ಆಗುಹೋಗುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವುದರ ಜೊತೆಗೆ ಮುಂದಿನ ಭವಿಷ್ಯದ ಸಿದ್ಧತೆಗೆ ಸ್ಪಂದಿಸುವಂತಿರಬೇಕು, ಇದಕ್ಕಾಗಿ ಯಾವುದೇ ಸಂಶೋಧನೆಯ ವಿಷಯವಸ್ತು ವಾಸ್ತವಿಕತೆಗೆ ಹತ್ತಿರವಾದಾಗ ಇಲ್ಲವೆ ಜನಮುಖಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಪೂರಕವಾಗಿರುವಂತೆ ವರ್ತಿಸುವುದು ಅತ್ಯಅವಶ್ಯಕವಾಗಿದೆ.

ಒಬ್ಬ ಸಂಶೋಧಕ ತಾನು ಅಧ್ಯಯನಗೈಯುವ ಕ್ಷೇತ್ರದಲ್ಲಿನ ಸಾಂದರ್ಭಿಕ ಮೌಲ್ಯಗಳಿಂದ ದೂರವಾಗಿರದೇ, ಪ್ರಜ್ಞಾಪೂರ್ವಕವೋ ಅಥವಾ ಅಪ್ರಜ್ಞಾಪೂರ್ವಕವಾಗಿಯೋ ಅಲ್ಲಿನ ಚಾರಿತ್ರಿಕ ಘಟನೆಗಳಿಗೆ ಆತನು ಪ್ರತಿಸ್ಪಂದಿಸುವನಾಗಿರುತ್ತಾನೆ. ಅಂದಾಗ ಮಾತ್ರ ಆಯಾ ಕಾಲಘಟ್ಟದಲ್ಲಿ ಸಂಭವಿಸಿದ ಸಾಂಸ್ಕೃತಿಕ ಸ್ಥಿತ್ಯಂತರಗಳು, ಜನರ ಜೀವನದ ಮೌಲ್ಯಗಳು ಮತ್ತು ವೈವಿಧ್ಯತೆಯುಳ್ಳ ಸಿದ್ಧಾಂತ ಅಥವಾ ವಿಚಾರಗಳು ಆಯಾ ಸಂಶೋಧನೆಗಳ ಚೌಕಟ್ಟನ್ನು ನಿರ್ಧರಿಸಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಸಂಶೋಧನಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಈಗಾಗಲೇ ಕೈಗೊಂಡಿರುವ ವಿವಿಧ ಅಧ್ಯಯನಗಳನ್ನು ಕೂಲಂಕುಶವಾಗಿ ಪರಿಶೀಲಿಸಿದಾಗ, ಗಣಿ ಕೈಗಾರಿಕೆಗೆ ಸಂಬಂಧಿಸಿದಂತೆ ಲಭ್ಯವಿರುವ ಸಂಶೋಧನೆಗಳು, ಸಮಗ್ರ ದೃಷ್ಟಿಕೋನವನ್ನಾಧರಿಸಿ ರಚನೆಯಾಗಿರುವುದು ತುಂಬಾ ಕಡಿಮೆಯೆಂದೇ ಹೇಳಬಹುದು. ಅವುಗಳಲ್ಲಿ ಕೆಲವು ಸಂಶೋಧನೆಗಳು ರಾಜಸತ್ತೆಯ ಹಿತಾಸಕ್ತಿಗಳನ್ನು ಕಾಪಾಡುವ ಉದ್ದೇಶವನ್ನು ಹೊಂದಿದ್ದರೆ. ಮತ್ತೇ ಕೆಲವು ವ್ಯಾಪಾರ ಅಥವಾ ವಾಣಿಜ್ಯಾತ್ಮಕ ದೃಷ್ಟಿಕೋನಗಳನ್ನೊಳಗೊಂಡಿವೆ. ಅಷ್ಟೇ ಅಲ್ಲದೆ ಅವುಗಳೆಲ್ಲವೂ ಹತ್ತಾರು ಭೂಗರ್ಭ ಶಾಸ್ತ್ರಜ್ಞರಿಂದ, ವಿದೇಶಿಯರಿಂದ ಮತ್ತು ಪ್ರಜಾಸತ್ತೆಯ ಆಧೀನದಲ್ಲಿದ್ದ ವಿವಿಧ ನೌಕರಶಾಹಿಗಳಿಂದ ಸಂಶೋಧಿಸಲ್ಪಟ್ಟವುಗಳಾಗಿವೆ. ಹಾಗೆಯೇ ನಮ್ಮ ದೇಶದಲ್ಲಿ ವಿವಿಧ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ಅವುಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಮಿಕರನ್ನು ಆಧಾರಿಸಿದ ಅನೇಕ ಸಂಶೋಧನೆಗಳು ಲಭ್ಯವಿದ್ದರೂ ಸಹ ಅವುಗಳಲ್ಲಿ ಬುಡಕಟ್ಟು ಸಮುದಾಯಗಳ ಕಾರ್ಮಿಕರ ನ್ನೊಳಗೊಂಡಂತೆ ಇರುವ ಅಧ್ಯಯನಗಳು ಅತ್ಯಲ್ಪವೆಂದೇ ಹೇಳಬಹುದು.

ಕಾರ್ಮಿಕರ ಆಯ್ಕೆಗೆ ಸಂಬಂಧಿಸಿದಂತೆ ಚರ್ಚಿಸುವಾಗ ವಿವಿಧ ಕೈಗಾರಿಕೆಗಳಲ್ಲಿ ದುಡಿಯುವ ಎಲ್ಲಾ ಕಾರ್ಮಿಕರನ್ನು ಒಂದೇ ಎಂದೂ ಪರಿಭಾವಿಸದೇ, ಬುಡಕಟ್ಟು ಸಮುದಾಯಗಳ ಕಾರ್ಮಿಕರು ಮತ್ತು ಇತರ ಸಮುದಾಯಗಳ ಕಾರ್ಮಿಕರೆಂದೂ ವರ್ಗೀಕರಿಸುವುದು ಅತೀ ಅವಶ್ಯಕ. ಏಕೆಂದರೆ ಇನ್ನಿತರ ಕಾರ್ಮಿಕರಿಗಿಂತಲೂ, ಬುಡಕಟ್ಟು ಕಾರ್ಮಿಕರು ಆಧುನಿಕತೆಯ ಭರದಲ್ಲಿ ತಮ್ಮ ಮೂಲನೆಲೆ ಹಾಗೂ ಮೂಲವೃತ್ತಿಯಿಂದ ವಂಚಿತರಾಗಿದ್ದು, ತಮ್ಮದೇ ಆದ ಯಾವುದೇ ಸ್ಥಿರವಾದ ಮತ್ತು ಚರವಾದ ಸಂಪತ್ತನ್ನು ಹೊಂದಿಲ್ಲ. ಜೊತೆಗೆ ಆಧುನಿಕ ಪ್ರಪಂಚದಲ್ಲಿ ಕಂಡುಬರುತ್ತಿರುವ ಏರಿಳಿತಗಳಿಗೆ

ಹೊಂದಿಕೊಳ್ಳುವಂಥ ಮನೋಭಾವನೆಗಳಿಂದ ತುಂಬಾ ದೂರವಿದ್ದಾರೆ. ಅಂದರೆ ಒಂದು ರೀತಿಯಲ್ಲಿ ಬುಡಕಟ್ಟು ಕಾರ್ಮಿಕರು ಸಾಂಪ್ರದಾಯಿಕತೆ ಮತ್ತು ಆಧುನಿಕತೆಯನ್ನು ಸಮೀಕರಿಸುವಂಥ ಸಂಕ್ರಮಣ ಕಾಲಘಟ್ಟದಲ್ಲಿದ್ದಾರೆಂದು ಹೇಳಬಹುದು. ಆದರೆ ಇನ್ನಿತರ ಕೈಗಾರಿಕೆಗಳಲ್ಲಿ ದುಡಿಯುವ ಬೇರೆ, ಬೇರೆ ಮೂಲದ ಕಾರ್ಮಿಕರು ಈಗಾಗಲೇ ಆಧುನಿಕತೆಯನ್ನು ಮೈಗೂಡಿಸಿಕೊಂಡು, ತಮ್ಮದೇ ಆದ ಚೌಕಟ್ಟಿನ ಒಳಗಡೆ ವ್ಯವಹರಿಸುವಂತಹ ಜಾಣ್ಮೆಯನ್ನು ಮೈಗೂಡಿಸಿಕೊಂಡಿದ್ದಾರೆ. ಹೀಗಾಗಿ ತಮ್ಮ ಮೂಲ ಉದ್ಯೋಗದ ಜೊತೆಗೆ ಬೇರೆ ಬೇರೆ ಪರ್ಯಾಯ ಉದ್ಯೋಗಗಳಲ್ಲಿನ ಕಾರ್ಮಿಕರನ್ನು ಆಧರಿಸಿ ಕೈಗೊಳ್ಳಲಾದ ಕೆಲವು ಅಧ್ಯಯನಗಳನ್ನು ಮಹಾಪ್ರಬಂಧದ ಆಶಯಕ್ಕನುಗುಣವಾಗಿ ಬಳಸಿಕೊಂಡು, ಅವುಗಳ ಧ್ಯೇಯೋಧೋರಣೆಗಳನ್ನು ವಿಶ್ಲೇಷಿಸಲಾಗಿದೆ. ಜೊತೆಗೆ ಬಳ್ಳಾರಿ ಜಿಲ್ಲೆಯಲ್ಲಿ ಕೈಗೊಂಡಿರುವ ಸಂಶೋಧನಾ ಪ್ರಬಂಧಗಳನ್ನು ಪರಾಮರ್ಶಿಸುವುದರ ಮೂಲಕ ಬುಡಕಟ್ಟು ಗಣಿಕಾರ್ಮಿಕರ ಶ್ರೇಯೋಭಿವೃದ್ಧಿ ಕಾಳಜಿಯನ್ನು ವ್ಯಕ್ತಪಡಿಸಲಾಗಿದೆ. ಹೀಗಾಗಿ ಕೆಲವು ಸಂಶೋಧನಾ ಅಧ್ಯಯನಗಳ ಸಂಕ್ಷಿಪ್ತ ವರದಿಯು ಈ ಕೆಳಗಿನಂತೆ ಮೂಡಿಬರುತ್ತವೆ.

ಭಾರತೀಯ ಕಾರ್ಮಿಕ ವಿಚಾರಣಾ ಸಮಿತಿಯು ೧೯೪೬ರಲ್ಲಿ ದೇಶದಲ್ಲಿ ಕಾರ್ಯನಿರ್ವಹಿಸುತ್ತಿರುವ ಗಣಿ ಕಾರ್ಮಿಕರ ಜೀವನಮಟ್ಟ, ವಿವಿಧ ಸೌಲಭ್ಯಗಳು, ಕೂಲಿಯ ಪ್ರಮಾಣ, ದುಡಿಮೆ ಮತ್ತು ಪರಿಸರದ ಬಗ್ಗೆ ಅಧ್ಯಯನ ಮಾಡಲು ಸುಮಾರು ೨೮ ವಿವಿಧ ಕೈಗಾರಿಕೆಗಳಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರು ಮತ್ತು ಅವರ ಕೆಲಸದ ಸ್ಥಿತಿಗತಿಗಳ ಬಗ್ಗೆ ವಿಚಾರಣೆ ಕೈಗೊಂಡಾಗ, "ಗಣಿಕಾರ್ಮಿಕರ ಜೀವನದ ಸ್ವರೂಪ, ಅವರ ಉದ್ಯೋಗ ಮತ್ತು ಅವರ ಆರೋಗ್ಯದ ರಕ್ಷಣೆಯ ಸ್ಥಿತಿಗತಿಗಳು ತುಂಬಾ ಕೆಳಮಟ್ಟದಲ್ಲಿದ್ದು ಭಯಾನಕವಾಗಿವೆ. ಯಾವುದೇ ಕೈಗಾರಿಕೆಯು ಗಣಿಕಾರ್ಮಿಕರ ಜೀವನದ ಭದ್ರತೆಯ ಬಗ್ಗೆ ಸೂಕ್ತವಾದ ಕ್ರಮಗಳನ್ನು ಕೈಗೊಂಡಿಲ್ಲವೆಂದೂ ಕಳವಳ ವ್ಯಕ್ತಪಡಿಸಿತು. ಸಮಿತಿಯು ಸರ್ಕಾರದ ಕಾರ್ಯವೈಖರಿಯನ್ನು ತರಾಟೆಗೆ ತೆಗೆದುಕೊಂಡು, ಕಾರ್ಮಿಕರ ಜೀವನ ಭದ್ರತೆಗೆ ಅವಶ್ಯಕ ಕ್ರಮಗಳನ್ನು ಕೈಗೊಳ್ಳುವಂತೆ ಸಲಹೆ ಮಾಡಿದೆ".

ಭಾರತ ಸರ್ಕಾರ ೧೯೬೯ರಲ್ಲಿ ದೇಶದಲ್ಲಿನ ಕಾರ್ಮಿಕರ ಯೋಗಕ್ಷೇಮಕ್ಕೆ ಸಂಬಂಧಿಸಿದಂತೆ ಅಧ್ಯಯನ ಸಮಿತಿಯೊಂದನ್ನು ನೇಮಕಗೊಳಿಸಿತು. ಕಾರ್ಯಾರಂಭಕ್ಕೆ ಬಂದ ವಿಚಾರಣಾ ಸಮಿತಿಯು ದೇಶದಲ್ಲಿನ ಎಲ್ಲಾ ಉತ್ಪಾದನಾ ವಲಯಗಳಲ್ಲಿನ ಸ್ಥಿತಿಗತಿಗಳನ್ನು ಕೂಲಂಕುಶವಾಗಿ ಅರಿಯಲು "ಸರ್ಕಾರಿ ಮತ್ತು ಖಾಸಗಿ ಒಡೆತನದ ಕೈಗಾರಿಕೆಗಳನ್ನು ಆಯ್ಕೆ ಮಾಡಿಕೊಂಡಿತು. ಅವುಗಳಲ್ಲಿ ಕಬ್ಬಿಣ ಮತ್ತು ಉಕ್ಕು ಕೈಗಾರಿಕೆ, ಸಕ್ಕರೆ, ಸಿಮೆಂಟ್, ಹತ್ತಿ, ಸೆಣಬು, ರೈಲ್ವೆ ಹಾಗೂ ಅಂಚೆತಂತಿ ಇತ್ಯಾದಿ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕಾರ್ಮಿಕರಿಗೆ ದೊರೆಯುತ್ತಿರುವ ಶಾಸನೀಯ ಮತ್ತು

ಶಾಸನೀಯವಲ್ಲದ ಸೌಲಭ್ಯಗಳು ಕಡಿಮೆಯಾಗಿವೆ. ಇದಕ್ಕಾಗಿ ವಿವಿಧ ಕಲ್ಯಾಣ ಯೋಜನೆಗಳನ್ನು ಜಾರಿಗೊಳಿಸಬೇಕೆಂದು ಶಿಫಾರಸ್ಸು ಮಾಡಿದೆ".[೧೦]

ಆರ್.ಆರ್. ವರ್ಮಾ ನೇತೃತ್ವದಲ್ಲಿ (೧೯೭೧)ರಲ್ಲಿ ಒರಿಸ್ಸಾ ರಾಜ್ಯದ ಜೆಮ್‌ಷೆಡ್‌ಪುರದಲ್ಲಿನ ಕೆಲವು ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಗಳಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರ ಬಗ್ಗೆ ಅಧ್ಯಯನ ಕೈಗೊಂಡಾಗ ಕಂಡುಬಂದ ಸಂಗತಿಗಳೆಂದರೆ, "ಪ್ರತಿಯೊಂದು ಕೈಗಾರಿಕೆಯು ತನ್ನ ಅಭಿವೃದ್ಧಿ ಹಾಗೂ ಲಾಭವನ್ನು ನಿರಂತರವಾಗಿ ಕಾಯ್ದುಕೊಳ್ಳಲು ಕಾರ್ಯತಂತ್ರಗಳಲ್ಲಿ ತೊಡಗಿವೆ. ಆದರೆ ತಮ್ಮ ಆಯಾ ಕೈಗಾರಿಕಾ ಸಂಸ್ಥೆಗಳು, ತಮ್ಮ ಕಾರ್ಮಿಕರಿಗೆ ವಿಶೇಷ ತರಬೇತಿ, ವಿಶ್ರಾಂತಿಗೃಹ, ಉಪಹಾರ ಗೃಹ, ವೇತನದ ಜೊತೆಗೆ ಪ್ರೋತ್ಸಾಹ ಧನ ಮತ್ತು ಶಿಕ್ಷಣದ ಸೌಲಭ್ಯಗಳನ್ನು ಹಮ್ಮಿಕೊಳ್ಳಬೇಕು. ಇದರಿಂದ ಕಾರ್ಖಾನೆಗಳಲ್ಲಿ ಉತ್ತಮ ವಾತಾವರಣ ಮೂಡಿ, ಅವುಗಳ ಅಭಿವೃದ್ಧಿ ಸಾಧ್ಯವೆಂದೂ ಅಭಿಪ್ರಾಯಪಟ್ಟಿದ್ದಾರೆ."[೧೧]

ವಿ.ವಿ. ಗಿರಿ (೧೯೭೨) ನೇತೃತ್ವದಲ್ಲಿ ಅವರು ಭಾರತದಲ್ಲಿರುವ ವಿವಿಧ ಕೈಗಾರಿಕಾ ಕಾರ್ಮಿಕರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಅಧ್ಯಯನವನ್ನು ಕೈಗೊಂಡಾಗ "ಪ್ರತಿಯೊಂದು ಕೈಗಾರಿಕೆಗಳ ಮಾಲೀಕರಿಗೆ ಕೇವಲ ಲಾಭವೊಂದೇ ಮುಖ್ಯ ಗುರಿಯಾಗಿದೆ. ಆದರೆ ಆಯಾ ಕೈಗಾರಿಕೆಗಳ ಲಾಭಕ್ಕೆ ಕಾರಣವಾದ, ದುಡಿಯುವ ಕಾರ್ಮಿಕರನ್ನು ಮಾನವೀಯ ಅಂಶಗಳಿಂದ ಕಾಣುವ, ಅವರ ಕುಟುಂಬಕ್ಕೆ ಸಾಮಾಜಿಕ ಭದ್ರತೆ ನೀಡುವ ಹತ್ತಾರು ಯೋಜನೆಗಳನ್ನು ಹಮ್ಮಿಕೊಳ್ಳುವುದು ಅವಶ್ಯಕ, ಕಾರ್ಮಿಕ ವರ್ಗವನ್ನು ಸಂತುಷ್ಟಗೊಳಿಸಿದಾಗ ಮಾತ್ರ ಕೈಗಾರಿಕೆಗಳಲ್ಲಿ ಶಾಂತಿನೆಲೆಸಿ, ಸಮೃದ್ಧಿ ನಿರಂತರವಾಗಿರಲು ಸಾಧ್ಯವೆಂಬುದನ್ನು ಎತ್ತಿ ಹಿಡಿದಿದ್ದಾರೆ."[೧೨]

ಫ್ರಾನ್ಸಿಸ್ ವಿಲ್ಸನ್ (೧೯೭೮)ಅವರು ೧೯೧೧ ರಿಂದ ೧೯೬೯ರ ಸನ್ನಿವೇಶದಲ್ಲಾದ ದಕ್ಷಿಣ ಆಫ್ರಿಕದ ಚಿನ್ನದ ಗಣಿಯಲ್ಲಿ ಕೆಲಸ ಮಾಡುವ ಕಾರ್ಮಿಕರನ್ನು ಆಧರಿಸಿ ಕೈಗೊಂಡ ಅಧ್ಯಯನವು "ಚಿನ್ನದ ಗಣಿಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಮಿಕರು ಸಾವಿರಾರು ಅಡಿಗಳ ಸುರಂಗದೊಳಗೆ, ಅತ್ಯಂತ ಅಪಾಯಕಾರಿ ಕೆಲಸಗಳಲ್ಲಿ ತೊಡಗಿದ್ದಾರೆ. ಅವರು ಮಾಲೀಕರ ಸಂಪತ್ತಿನ ಹೆಚ್ಚಳಕ್ಕೆ ಹಗಲಿರುಳು ತಮ್ಮ ಶ್ರಮವನ್ನು ಧಾರೆಯೆರೆಯುತ್ತಾ ತಮ್ಮ ಬದುಕನ್ನು ಕೊನೆಗಾಣಿಸಿಕೊಳ್ಳುತ್ತಿದ್ದರೆ. ಮತ್ತೊಂದು ಕಡೆ ಮಾಲೀಕವರ್ಗವು ಸುಖದ ಸುಪ್ಪತ್ತಿಗೆಯಲ್ಲಿ ತೇಲಾಡುತ್ತ ಕಾರ್ಮಿಕರ ಜೀವನದೊಂದಿಗೆ ಆಟವಾಡುವುದನ್ನು ಹವ್ಯಾಸವಾಗಿ ಮಾಡಿಕೊಂಡಿರುವ ಚಿನ್ನದ ಗಣಿಮಾಲೀಕ ಹಾಗೂ ಕಾರ್ಮಿಕರ ನಡುವೆ, ಬಹುದೊಡ್ಡ ಕಂದಕ ಏರ್ಪಟ್ಟಿದೆ. ಇಂತಹ ಏಕಮುಖ ಬೆಳವಣಿಗೆಯು ಅತ್ಯಂತ ಅಪಾಯಕಾರಿ ಇದಕ್ಕಾಗಿ ಸಮಾತೋಲನ ಬೆಳವಣಿಗೆ ಅವಶ್ಯಕವೆಂದು"[೧೩] ತಮ್ಮ ಅಧ್ಯಯನದುದ್ದಕ್ಕೂ ಕಳವಳ ವ್ಯಕ್ತಪಡಿಸುತ್ತಾರೆ.

ಶಾಹು ಮತ್ತು ಸ್ವರೂಪ (೧೯೭೨) ಇವರನ್ನೊಳಗೊಂಡ ಅಧ್ಯಯನವು ಸ್ವಾತಂತ್ರ್ಯನಂತರ ಒರಿಸ್ಸಾ ರಾಜ್ಯದಲ್ಲಿ ೧೯೬೧-೭೦ರ ದಶಕದಲ್ಲಾದ ಬೇರೆ, ಬೇರೆ, ಕಬ್ಬಿಣ ಮತ್ತು ಮ್ಯಾಂಗನೀಜ್ ಕೈಗಾರಿಕೆಗಳಲ್ಲಿ ದುಡಿಯುತ್ತಿರುವ, ಕಾರ್ಮಿಕರ ಸಮಸ್ಯೆಗಳನ್ನು ಪರಿಶೀಲಿಸುತ್ತಾ, ''ಪ್ರತಿಯೊಂದು ಉತ್ಪಾದನಾ ಕ್ಷೇತ್ರಗಳಲ್ಲಿರುವ ಕಾರ್ಮಿಕರ ಸಮಸ್ಯೆಗಳು ಸಹಜ ಹಾಗೂ ಸಾರ್ವತ್ರಿಕವಾಗಿದ್ದು, ಅವುಗಳ ನಿರ್ಮೂಲನೆ ಮತ್ತು ಪರಿಹಾರ ಕಾರ್ಯಗಳಿಗೆ ಸರ್ಕಾರದ ಮಧ್ಯಸ್ತಿಕೆಯು ಅತ್ಯವಶ್ಯಕವೆಂದೂ ಒತ್ತಾಯಿಸುತ್ತಾರೆ''.[೧೪] ಜೊತೆಗೆ ಗಣಿಗಾರಿಕೆಯಲ್ಲಿರುವ ಕಾರ್ಮಿಕರಿಗಾಗಿ ಬೇರೆ, ಬೇರೆ ಕಲ್ಯಾಣ ಕ್ರಮಗಳನ್ನು ಕಟ್ಟುನಿಟ್ಟಾಗಿ ಗಣಿಮಾಲೀಕರು ಪಾಲಿಸುವಂತೆ ಸರ್ಕಾರವು ಒತ್ತಡ ಹೇರುವ ಹಾಗೂ ಮಾಲೀಕರನ್ನು ಶಿಕ್ಷಿಸುವ ಅನೇಕ ನೀತಿನಿಯಮಗಳು ಜಾರಿಗೊಳ್ಳುವುದು ನ್ಯಾಯೋಚಿತವೆಂದು ಆಗ್ರಹಿಸುತ್ತಾರೆ.

ಹೃಷಿಕೇಷಿಯವರು (೧೯೭೪) ಸ್ವಾತಂತ್ರ್ಯ ನಂತರ ಭಾರತದಲ್ಲಿ ಕಾರ್ಮಿಕರ ಸಾಮಾಜಿಕ ಭದ್ರತೆಗೆ ಸಂಬಂಧಿಸಿದಂತೆ, ಉತ್ತರ ಪ್ರದೇಶದ ಕೆಲವು ಗಣಿಕೈಗಾರಿಕೆಗಳನ್ನು ಸಂಶೋಧನೆಗೆ ಆಯ್ದುಕೊಂಡು, ಆಯಾ ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರ ಸಮಸ್ಯೆಗಳನ್ನು ಅಧ್ಯಯನ ಮಾಡುತ್ತಾ ಹೋದಂತೆ, ''ಗಣಿಕಾರ್ಮಿಕರು ಅನೇಕ ಸಮಸ್ಯೆಗಳಲ್ಲಿ ಸಿಲುಕಿಕೊಂಡಿದ್ದಾರೆ. ಅವುಗಳಿಂದ ಪಾರಾಗಲೂ ಕಾರ್ಮಿಕರು ತಾವು ದುಡಿಯುವ ಕೈಗಾರಿಕೆಗಳಲ್ಲಿ ಉತ್ಪಾದನೆಯಿಂದ ಹೊರಗುಳಿಯಲು, ಗೈರುಹಾಜರಿ, ಬೀಗಮುದ್ರೆ, ಘೇರಾವ್, ಬಂದ್, ಅಶಾಂತಿ ಹಾಗೂ ಅನೇಕ ಘರ್ಷಣೆಗಳಿಗೆ ಕಾರಣವಾಗುವುದರಿಂದ ಸರ್ಕಾರ ಮತ್ತು ಗಣಿ ಮಾಲೀಕರು ಕಾರ್ಮಿಕರಿಗಾಗಿ ಸಾಮಾಜಿಕ ಕಲ್ಯಾಣಯೋಜನೆಗಳನ್ನು ವಿಸ್ತರಿಸುವುದು''[೧೫] ಸೂಕ್ತವೆನ್ನುತ್ತಾರೆ.

ವ್ಹಿ.ಆರ್.ಭಟ್ಟಾಚಾರ್ಯ (೧೯೭೮)ರಲ್ಲಿ "ಭಾರತದ ಸಾಮಾಜಿಕ ಭದ್ರತಾ ಕಾರ್ಯಕ್ರಮಗಳ ತೌಲನಿಕ ಅಧ್ಯಯನದಲ್ಲಿ ಭಾರತ ಹಾಗೂ ವಿಶ್ವದ ವಿವಿಧ ಅಭಿವೃದ್ಧಿಪರ ದೇಶಗಳೊಂದಿಗೆ ಉತ್ಪಾದನೆ, ವಿತರಣೆ ಮತ್ತು ಉತ್ಪಾದನಾ ಸಂಬಂಧಗಳನ್ನು ಪರಸ್ಪರ ಹೋಲಿಕೆ ಮಾಡಿದಾಗ ಕಂಡುಬಂದ ಅಂಶವೇನೆಂದರೆ, ''ಅಭಿವೃದ್ಧಿ ರಾಷ್ಟ್ರಗಳಲ್ಲಿರುವ ಕಾರ್ಮಿಕರ ಸಾಮಾಜಿಕ ಭದ್ರತಾಕ್ರಮಗಳು ಸುಸ್ಥಿರವಾಗಿದ್ದೂ, ಹಿಂದುಳಿದ ಮತ್ತು ಅಭಿವೃದ್ಧಿಶೀಲ ಭಾರತದಲ್ಲಿ ಮಾತ್ರ ಸಾಮಾಜಿಕ ಭದ್ರತಾ ಕ್ರಮಗಳು ಅಸ್ತವ್ಯಸ್ತಗೊಂಡಿವೆ''.[೧೬] ಇದಕ್ಕೆ ನಮ್ಮ ದೇಶದಲ್ಲಿರುವ ಸರ್ಕಾರದ ನಿಷ್ಕಾಳಜಿ ಮತ್ತು ಮಾಲೀಕ ವರ್ಗಗಳ ನಿರಾಸಕ್ತಿಯಿಂದಾಗಿ ಉತ್ಪಾದನೆ ಹಾಗೂ ವಿತರಣಾ ಚಟುವಟಿಕೆಗಳು ನಿರೀಕ್ಷಿತ ಮಟ್ಟದಲ್ಲಿ ಕಂಡುಬರುತ್ತಿಲ್ಲ. ಇದನ್ನು ಹೋಗಲಾಡಿಸಲು ನಮ್ಮನ್ನಾಳುವ ಸರ್ಕಾರವು ಜಾರಿಯಲ್ಲಿರುವ ಅನೇಕ ಕಾರ್ಮಿಕ ಕಾಯ್ದೆಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿದಾಗ ಮಾತ್ರ ದುಡಿಯುವ ಜನರ

ಜೀವನಮಟ್ಟ ಉತ್ತಮಗೊಂಡು, ಉತ್ಪಾದನೆ, ವಿತರಣೆಗಳು ಸುಧಾರಿಸಲು ಸಾಧ್ಯವೆಂದೂ ಅಭಿಪ್ರಾಯ ಪಟ್ಟಿದ್ದಾರೆ.

ಸಾಯಿಬಾಬಾ(೧೯೭೮)ರವರು ಆಂಧ್ರಪ್ರದೇಶದ ಗಣಿ ಕೈಗಾರಿಕೆಯಲ್ಲಿನ ಕಾರ್ಮಿಕರ ಪರಿಸ್ಥಿತಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡುತ್ತಾ ಕಂಡುಕೊಂಡ ಅಂಶವೇನೆಂದರೆ, "ಪ್ರತಿಯೊಂದು ಕೈಗಾರಿಕೆಗಳು ದುಡಿಯುವ ವರ್ಗವನ್ನು ಉಪೇಕ್ಷಿಸಿ, ಕೇವಲ ಲಾಭವನ್ನು ನಿರೀಕ್ಷಿಸುವತ್ತಾ ಗಮನಹರಿಸಿವೆ ಹೀಗಾಗಿ ಆಯಾ ಕೈಗಾರಿಕೆಯಲ್ಲಿರುವ ಕಾರ್ಮಿಕರ ಕೂಲಿ, ದುಡಿಮೆ, ಕಲ್ಯಾಣಕ್ರಮಗಳನ್ನು ನಿರ್ಲಕ್ಷ್ಯಿಗೆ ಒಳಗಾಗಿವೆ".[೧೭] ಇಂತಹ ಚಟುವಟಿಕೆಗಳಿಂದ ದುಡಿಯುವ ಕಾರ್ಮಿಕರು ಅನಾರೋಗ್ಯ, ಬಡತನ, ಹಸಿವು ಹಾಗೂ ಮೂಢನಂಬಿಕೆಗಳಲ್ಲಿ ತೊಳಲಾಡುತ್ತ, ಅವರ ದಕ್ಷತೆ ಇಳಿಮುಖವಾಗುತ್ತಿರುವುದನ್ನು ಪ್ರಾಯೋಗಿಕವಾಗಿ ಸಾದರಪಡಿಸಿದ್ದಾರೆ.

ಎಂ.ಎ. ಶ್ರೀನಿವಾಸ (೧೯೮೦) ಕೋಲಾರ ಚಿನ್ನದ ಗಣಿಯಲ್ಲಿನ ಕಾರ್ಮಿಕರ ಸಾಮಾಜೋ ಆರ್ಥಿಕ ಸ್ಥಿತಿಗತಿ ಎಂಬ ಅಧ್ಯಯನ ಗ್ರಂಥದಲ್ಲಿ ರಾಷ್ಟ್ರದ ಅಭಿವೃದ್ಧಿಗೆ ಅವಶ್ಯಕವಾದ "ಚಿನ್ನದ ತಯಾರಿಕೆಯಲ್ಲಿ ಕಾರ್ಮಿಕರು ತಮ್ಮ ಬಹುಮುಖ್ಯವಾದ ಜೀವನವನ್ನೇ ತ್ಯಾಗಮಾಡುತ್ತಿದ್ದಾರೆ. ಆದರೆ ಸರ್ಕಾರ ಕಾರ್ಮಿಕರ ಭದ್ರತೆಗಾಗಲೀ, ಅವರ ಕುಟುಂಬದ ರಕ್ಷಣೆಗಾಗಲೀ ಯಾವುದೇ ರೀತಿಯ ಕಾರ್ಯ ಯೋಜನೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿಲ್ಲ ಎಂಬುದನ್ನು ಪ್ರಯೋಗಿಕವಾಗಿ ಪತ್ತೆ ಹಚ್ಚಿದ್ದಾರೆ".[೧೮] ಹೀಗಾಗಿ ಗಣಿಯಲ್ಲಿರುವವರ ಬದುಕು ಭಯಂಕರ ಹಾಗೂ ಭೀಕರತೆಗೆ ಸರ್ಕಾರ ಮತ್ತು ನೌಕರಶಾಹಿಗಳ ನಿರ್ಲಕ್ಷತೆಯ ಧೋರಣೆಯೇ ಕಾರಣವಾಗಿದೆ ಎಂದೂ ಪ್ರಾಯೋಗಿಕವಾಗಿ ವಿಶ್ಲೇಷಿಸಿದ್ದಾರೆ.



ಗುಪ್ತ ಎಸ್.ದಾಸ್ (೧೯೭೦) ಅವರು "ಶ್ರೀಮಂತ ಗಣಿಗಳಲ್ಲಿನ ಕಾರ್ಮಿಕರಿಗೆ ಕಡಿಮೆ ವೇತನ ಹಾಗೂ ಕನಿಷ್ಠ ಸೌಲಭ್ಯಗಳು" ಎಂಬ ಲೇಖನದಲ್ಲಿ ಗಣಿ ಮಾಲೀಕರಿಗೆ ತಮ್ಮ ಆದಾಯದ ಹೆಚ್ಚಳದಲ್ಲಿ ಆಸಕ್ತಿಯಿದ್ದಂತೆ ದುಡಿಯುವ ಕಾರ್ಮಿಕರ ಯೋಗಕ್ಷೇಮದ ಬಗ್ಗೆ ಕಾಳಜಿ ಇಲ್ಲ. ಹೀಗಾಗಿ ಕಾರ್ಮಿಕ ಅತ್ಯಂತ ಕನಿಷ್ಠ ಅವಶ್ಯಕತೆಗಳೊಂದಿಗೆ ತನ್ನ ಕುಟುಂಬದೊಂದಿಗೆ ಜೀವಿಸಲು ಹೆಣಗುತ್ತಿದ್ದಾನೆ. ಆದರೆ ಗಣಿಮಾಲೀಕರು ಮಾತ್ರ ಐಶಾರಾಮದ ಸುಪ್ಪತ್ತಿಗೆಯಲ್ಲಿ ಓಲಾಡುತ್ತಿದ್ದಾರೆ ಎಂಬುದನ್ನು ಪ್ರಾಯೋಗಿಕವಾಗಿ ಅಂಕಿಅಂಶಗಳ ಆಧಾರದ ಮೇಲೆ ಸಾದರಪಡಿಸಿದ್ದಾರೆ.

ಜಿ.ಸುಬ್ರಮಣ್ಯಂ(೧೯೮೨) ಸಾಂಪ್ರದಾಯಿಕ ವೃತ್ತಿನಿರತ ಕಾರ್ಮಿಕರ ಆರ್ಥಿಕ ಸ್ಥಿತಿಗತಿ ನೆಲ್ಲೂರು ಜಿಲ್ಲೆಯ ಅಧ್ಯಯನದಲ್ಲಿ ದುಡಿಯುವ ಕಾರ್ಮಿಕರ ಪರಿಸ್ಥಿತಿ ಹತ್ತಾರು ವರ್ಷಗಳಿಂದ ಒಂದೇ ರೀತಿಯಾಗಿದ್ದು, ಭವಿಷ್ಯದಲ್ಲಿ ಅನೇಕ ಗಂಡಾಂತರಗಳನ್ನು ಎದುರಿಸಬೇಕಾಗಿದೆ. ಇಂತಹ ಪರಿಸ್ಥಿತಿಯನ್ನು

ಆಧುನಿಕ ಉತ್ಪಾದನಾ ಕ್ಷೇತ್ರಗಳ ಬೆಳವಣಿಗೆಯಿಂದ ಮತ್ತಷ್ಟು ಹೆಚ್ಚಾಗಲಿದ್ದು, ಇಂತಹ ಬೆಳವಣಿಗೆಯ ಅಭಿವೃದ್ಧಿಗೆ ತೊಡಕಾಗುತ್ತದೆ ಎಂಬುದನ್ನು ಎತ್ತಿ ಹಿಡಿಯುತ್ತಾರೆ.

ಸಿ.ಬಿ. ಮೆಮೋರಿಯಾ ಮತ್ತು ಮೆಮೋರಿಯಾ (೧೯೮೭) ಅವರು ಭಾರತದ ಗಣಿಕೈಗಾರಿಕೆಯಲ್ಲಿನ ಶಾಂತಿ ಮತ್ತು ಸಾಮಾಜಿಕ ಭದ್ರತೆ ಕುರಿತು ಕೈಗೊಂಡ ಅಧ್ಯಯನವು ಗಣಿಕಾರ್ಮಿಕರು ಅನುಭವಿಸುತ್ತಿರುವ ಸಮಸ್ಯೆಗಳ ಪರಿಹಾರಕ್ಕೆ ಗಣಿ ಮಾಲೀಕ ಮತ್ತು ಸರ್ಕಾರ ಕೈಗೊಳ್ಳಬೇಕಾದ ಕಾರ್ಯಯೋಜನೆಗಳನ್ನು ಚರ್ಚಿಸುವ ಮೂಲಕ ಕಾರ್ಮಿಕರ ಕುಟುಂಬದ ಭದ್ರತೆಗೆ ಅವಶ್ಯಕ ಕ್ರಮಕೈಗೊಳ್ಳುವಂತೆ ಒತ್ತಾಯಿಸುವ ಸಾಮಾಜಿಕ ಬದ್ಧತೆಯನ್ನು ಹೊಂದಿದ್ದಾರೆ.

ರವೀಂದ್ರಕುಮಾರ (೧೯೮೭) ಕರ್ನೂಲ್ ಜಿಲ್ಲೆಯ ಸುಣ್ಣದ ಕಲ್ಲು ಕಾರ್ಮಿಕರ ಸಾಮಾಜೋ ಆರ್ಥಿಕ ಸ್ಥಿತಿಗತಿ ಎಂಬ ಅಧ್ಯಯನಗಳು ಕಾರ್ಮಿಕರು ಅನುಭವಿಸುತ್ತಿರುವ ಸಮಸ್ಯೆಗಳನ್ನು ಕೇಂದ್ರವಾಗಿರಿಸಿ ಕೊಂಡಿವೆ. ಅಲ್ಲದೆ ಅವುಗಳ ನಿರ್ಮೂಲನೆಗೆ ಸಂಘಟಿತ ಹೋರಾಟ ಅವಶ್ಯಕವೆಂದು ಅಭಿಪ್ರಾಯ ಪಟ್ಟಿದ್ದಾರೆ.

ಈ ಮೇಲಿನ ಅಧ್ಯಯನಗಳೆಲ್ಲವೂ ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟಗಳಲ್ಲಿ ದುಡಿಯುವ ಬೇರೆ ಬೇರೆ ಗಣಿ ಕಾರ್ಮಿಕರನ್ನು ಕೇಂದ್ರಬಿಂದುವಾಗಿಟ್ಟುಕೊಂಡು, ಕಾರ್ಮಿಕರ ಅಭಿವೃದ್ಧಿಗಾಗಿ ಒತ್ತಾಯಿಸಿದ ಹಾಗೂ ಬೇರೆ ಬೇರೆ ಕಾರ್ಯತಂತ್ರಗಳನ್ನು ಸರ್ಕಾರ ಮತ್ತು ಮಾಲೀಕ ವರ್ಗವು ಜಾರಿಗೊಳಿಸುವಂತೆ ಪ್ರೇರೇಪಿಸಿದ ಅಧ್ಯಯನಗಳಾಗಿವೆ. ಹೀಗಾಗಿ ಅವುಗಳನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಏಕೆಂದರೆ ಬೇರೆ ಬೇರೆ ಪ್ರದೇಶಗಳಲ್ಲಿರುವ ಗಣಿಕಾರ್ಮಿಕರ ವಸ್ತುಸ್ಥಿತಿಯನ್ನು ಆಧಾರಿಸಿ ಅನೇಕ ಸಂಶೋಧನೆಗಳಿಂದ ಬಳ್ಳಾರಿ ಜಿಲ್ಲೆಯ ಗಣಿಗಳಲ್ಲಿ ದುಡಿಯುವ ಕಾರ್ಮಿಕರ ವೇತನ, ದುಡಿಮೆ, ಆದಾಯ, ಶಿಕ್ಷಣ ಹಾಗೂ ಅವರ ಕುಟುಂಬದ ಭದ್ರತೆಗೆ ಕೈಗೊಳ್ಳಬೇಕಾದ ಕಾರ್ಯತಂತ್ರಗಳ ಬಗ್ಗೆ ಹಲವಾರು ಮಾಹಿತಿಗಳನ್ನು ಒದಗಿಸುವುದರಿಂದ ಈ ಮೇಲಿನ ಅಧ್ಯಯನಗಳನ್ನು ಆಯ್ಕೆಗೆ ಪರಿಗಣಿಸಲಾಗಿದೆ. ಮತ್ತು ಮಹಾಪ್ರಬಂಧದ ಕೇಂದ್ರಬಿಂದುವಾದ ಬುಡಕಟ್ಟು ಸಮುದಾಯಗಳ ಕಾರ್ಮಿಕರನ್ನು ಆಧರಿಸಿ ರಾಜ್ಯ ಹಾಗೂ ದೇಶದಲ್ಲಿ ಕೈಗೊಳ್ಳಲಾದ ಕೆಲವು ಅಧ್ಯಯನಗಳನ್ನು ಪರಿಶೀಲಿಸುವುದು ಸೂಕ್ತ. ಏಕೆಂದರೆ ಬುಡಕಟ್ಟು ಕಾರ್ಮಿಕರಿಗೂ ಮತ್ತು ಇತರ ಕಾರ್ಮಿಕರಿಗೂ ಇರುವ ವ್ಯತ್ಯಾಸಗಳನ್ನು ತಿಳಿಯಲು ಸಹಾಯಕವಾಗುತ್ತದೆ. ಈ ಹಿನ್ನೆಲೆಯಲ್ಲಿ,

ಎಲ್.ಪಿ. ವಿದ್ಯಾವತಿ (೧೯೬೮) ಅವರು ಬಿಹಾರ ರಾಜ್ಯದ ಬೋಕ್ಕಾರೋ ಎಂಬಲ್ಲಿ ಗಣಿ ಮತ್ತು ಉಕ್ಕಿನ ಕಾರ್ಖಾನೆಯಲ್ಲಿರುವ ಬುಡಕಟ್ಟು ಕಾರ್ಮಿಕರಿಗೆ ಸಂಬಂಧಿಸಿದಂತೆ ಕೈಗೊಂಡ ಅಧ್ಯಯನದಲ್ಲಿ "ಬುಡಕಟ್ಟು ಜನರ ಸಂಸ್ಕಾರಗಳು, ಸಂಪ್ರದಾಯಗಳು, ರೂಢಿಗಳು, ಪದ್ಧತಿಗಳು ಹಾಗೂ ಅವರ

ರಕ್ತಸಂಬಂಧಗಳ ಸಂಸ್ಕೃತಿಗಳೆಲ್ಲವೂ ಕೈಗಾರಿಕೆಗಳಿಂದ ಸಂಪೂರ್ಣವಾಗಿ ವಿಘಟನೆಗೊಂಡಿವೆ. ಆ ಸಮುದಾಯಗಳು ತಮ್ಮ ದೈನಂದಿನ ಬದುಕಿನ ಬಗ್ಗೆ ತಿರಸ್ಕಾರ, ನಿರಾಸೆ ಮತ್ತು ಹತಾಶೆ ಭಾವನೆಗಳಲ್ಲಿ ಕಾಲ ಕಳೆಯುತ್ತಿದ್ದಾರೆಂದು ಎಚ್ಚರಿಸುತ್ತಾರೆ. ಹಾಗೆಯೇ ಮತ್ತೊಂದು ದೃಷ್ಟಿಯಲ್ಲಿ ಕೈಗಾರೀಕರಣವು ಬುಡಕಟ್ಟು ಜನರನ್ನು ತಮ್ಮ ಮೂಲನೆಲೆಯ ಸ್ಥಳಾಂತರಕ್ಕೆ ಕಾರಣನಾಗಿರುವುದರಿಂದ ಅವರಲ್ಲಿ ಪರಸ್ಪರ ಒಗ್ಗಟ್ಟು, ಸಾಮರಸ್ಯ ಹಾಗೂ ಸಹಕಾರದ ಬೆಳವಣಿಗೆಗೆ ಪೂರಕವಾಗಿದೆ".[೧೯] ಈ ಕಾರಣದಿಂದಾಗಿ ಬುಡಕಟ್ಟುಗಳೆಲ್ಲಾ ಒಂದಾಗಿ, ಸಂಘಟಿತಗೊಂಡು ದೊಡ್ಡ ಶಕ್ತಿಯಾಗಿ ಪರಿವರ್ತನೆಗೊಂಡಿದ್ದಾರೆ. ಇದರಿಂದ ಎಲ್ಲಾ ಬುಡಕಟ್ಟು ಸಮುದಾಯಗಳಲ್ಲಿ ಜನಾಂಗೀಯ ಭಾವನೆ ಮತ್ತು ಆದಿವಾಸಿ ಪ್ರಜ್ಞೆಯು ಜಾಗೃತಗೊಂಡು. ಅವರೆಲ್ಲಾ ಒಂದಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಮೇಲೆ ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಒತ್ತಡ ಹೇರುವಂತ ಸಾಮರ್ಥ್ಯವನ್ನು ಬೆಳೆಸಿಕೊಂಡಿದ್ದಾರೆ ಎಂಬುದಾಗಿ ವಿಶ್ಲೇಷಿಸುತ್ತಾರೆ.

ಕನಕ್ ಮಿತಲ್ (೧೯೮೬)ರವರು ಸಂತಾಲ್ ಬುಡಕಟ್ಟು ಜನರ ಬಗ್ಗೆ ಕೈಗೊಂಡ ಸಂಶೋಧನೆಯಲ್ಲಿ "ಕೈಗಾರಿಕಾ ವ್ಯವಸ್ಥೆಯಿಂದ ಬುಡಕಟ್ಟು ಜನರು ತಮ್ಮ ಮೂಲನೆಲೆ ಹಾಗೂ ವಂಚಿತಗೊಂಡಿದ್ದರೂ ಸಹ ಸಂತಾಲರು ತಮ್ಮ ಬಂಧುತ್ವ ಹಾಗೂ ಸಂಪ್ರದಾಯದಲ್ಲಿರುವ ರೂಢಿ-ಪದ್ಧತಿ-ಆಚಾರ ವಿಚಾರಗಳೆಲ್ಲವನ್ನು ಚಾಚು ತಪ್ಪದೇ ಪಾಲಿಸಿಕೊಂಡು ಬರುವ ಮೂಲಕ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿದ್ದಾರೆ"[೨೦] ಎಂಬುದಾಗಿ ಪತ್ತೆಹಚ್ಚಿದ್ದಾರೆ.

ಕೆ.ಎಲ್.ಶರ್ಮ (೧೯೮೭)ರವರು "ಸಾಮಾಜಿಕ ಆರ್ಥಿಕ ಬದಲಾವಣೆಯಲ್ಲಿ ಬುಡಕಟ್ಟು ಸಮುದಾಯಗಳು" ಎಂಬ ಸಂಶೋಧನೆಯಲ್ಲಿ ಆಧುನೀಕರಣ ಮತ್ತು ಕೈಗಾರಿಕೀಕರಣವು ಬುಡಕಟ್ಟುಗಳ ಮೇಲೆ ಉಂಟುಮಾಡಿದ ಪರಿಣಾಮಗಳನ್ನು ವಿಶ್ಲೇಷಿಸುತ್ತಾ, ಪ್ರಸ್ತುತ ಸನ್ನಿವೇಶದಲ್ಲಿ ಕೈಗಾರೀಕರಣವು ಎಲ್ಲಾ ಬುಡಕಟ್ಟು ಸಮುದಾಯಗಳಲ್ಲಿ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯನ್ನು ಗಟ್ಟಿಗೊಳಿಸಿದೆ. ಇದಕ್ಕೆ ಹಲವು ರಾಜ್ಯಗಳಲ್ಲಿ ನಡೆದ "ಬುಡಕಟ್ಟು ಸಮುದಾಯಗಳ ಸಂಘಟನೆ, ಪ್ರತಿಭಟನೆ, ಚಳುವಳಿ ಹಾಗೂ ಆಂದೋಲನಗಳು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳನ್ನು ನಡುಗಿಸುವ ಹಂತಕ್ಕೆ ತಲುಪಿವೆ. ಇಂತಹ ಬೆಳವಣಿಗೆಯು ಜಾರ್ಖಂಡ್ ಆಂದೋಲನಕ್ಕೆ ಕಾರಣವಾಯಿತು. ಅದಕ್ಕೆ ಉದಾಹರಣೆಯಾಗಿ ಭೂಶೋಷಣೆಯ ವಿರುದ್ಧ ಹಾಗೂ ಶಕ್ತಿ ರಾಜಕೀಯ ಸಾಮರಸ್ಯಕ್ಕಾಗಿ ೧೯೫೦ರಲ್ಲಿ ನಡೆದ ಜಾರ್ಖಂಡ್ ಆಂದೋಲನವು ಪ್ರತ್ಯೇಕ ರಾಜ್ಯದ ಅಸ್ತಿತ್ವಕ್ಕೆ ನಾಂದಿಯಾಯಿತು ಎಂಬುದನ್ನು ಅನೇಕ ಸಾಕ್ಷ್ಯಾಧಾರಗಳಿಂದ ಗುರುತಿಸುತ್ತಾರೆ".[೨೧]

ಪ್ರೊ. ಬಿ. ಶೇಷಾದ್ರಿ(೧೯೯೯)ರವರು ಬಳ್ಳಾರಿ ಜಿಲ್ಲೆಯಲ್ಲಿ "ಕೈಗಾರೀಕರಣ ಮತ್ತು ಜನಾಂದೋಲನಾ"

ಎಂಬ ಅಧ್ಯಯನದಲ್ಲಿ ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯಲ್ಲಿ ಕೈಗಾರೀಕರಣದ ಪರಿಣಾಮದಿಂದಾಗಿ ಗಣಿಗಾರಿಕೆಯ ಸಾಮರ್ಥ್ಯ, ನೀರಾವರಿಯ ಸಂಗ್ರಹಣೆ ಮತ್ತು ಪರಿಸರ ರಕ್ಷಣೆ ಹಾಗೂ ಕೃಷಿ ಚಟುವಟಿಕೆಯ ಮೇಲೆ ಉಂಟುಮಾಡಿದ ಏರಿಳಿತಗಳನ್ನು ವಿಶ್ಲೇಷಿಸುವ ಮೂಲಕ, "ಜಿಲ್ಲೆಯಲ್ಲಿರುವ ಅನೇಕ ಬುಡಕಟ್ಟು ಸಮುದಾಯಗಳ ಅಸ್ತಿತ್ವಕ್ಕೆ ಗಣಿಗಾರಿಕೆ ಗಂಡಾಂತರಕಾರಿಯಾಗಿ ಪರಿಣಮಿಸಿದೆ. ಒಂದು ರೀತಿಯಲ್ಲಿ ಜಿಲ್ಲೆಯಲ್ಲಿ ಸಾಗಿರುವ ಅಭಿವೃದ್ಧಿಯ ಗತಿಯ ಪಾರ್ಶ್ವಮುಖಿಯಾಗಿರುವುದರಿಂದ ಜಿಲ್ಲೆಯ ಸಾರಿಗೆ, ಉತ್ಪಾದನೆ, ಉದ್ಯೋಗ, ಆದಾಯ ಹಾಗೂ ತಲಾವರಮಾನಗಳು ಹೆಚ್ಚಾದಂತೆ ಕಂಡುಬಂದರೂ ಜನರ ಆರೋಗ್ಯ, ಜೀವಾವಧಿ, ದಕ್ಷತೆ ಮತ್ತು ಉತ್ಪಾದನೆಯ ಸಾಮರ್ಥ್ಯವು ಕುಂಠಿತಗೊಂಡಿದೆ"[೨೨] ಎಂಬುದನ್ನು ಸಾಕ್ಷ್ಯಾಧಾರಗಳಿಂದ ಸ್ಪಷ್ಟಪಡಿಸಿದ್ದಾರೆ. ಅದು ಅನೇಕ ಪರ್ಯಾಯ ಉದ್ಯೋಗಗಳ ಮೇಲೆ ತುಂಬಾ ಕೆಟ್ಟ ಪರಿಣಾಮವನ್ನುಂಟು ಮಾಡಲಿದೆ ಎಂಬುದನ್ನು ಪ್ರಾಯೋಗಿಕವಾಗಿ ವಿವರಿಸುವ ಮೂಲಕ ಜಿಲ್ಲೆಯ ಪರಿಸರ ರಕ್ಷಣೆ ಮತ್ತು ಜನರ ಆರೋಗ್ಯಕ್ಕಾಗಿ ಜನಾಂದೋಲನಕ್ಕೆ ಕರೆ ನೀಡಿದ್ದಾರೆ.

ಈ ಮೇಲಿನ ಅಧ್ಯಯನಗಳೆಲ್ಲವೂ ಕೈಗಾರೀಕರಣ ಮತ್ತು ಆಧುನೀಕರಣದ ಪ್ರಭಾವದಿಂದಾಗಿ ಬುಡಕಟ್ಟು ಸಮುದಾಯಗಳ ಮೇಲೆ ಉಂಟುಮಾಡಿರುವ ಪರಿಣಾಮಗಳ ಬಗ್ಗೆ ವಿವರಣೆಗಳು ಮತ್ತು ಅವುಗಳಿಂದ ರಕ್ಷಣೆ ಪಡೆಯವ ವಿಧಾನಗಳನ್ನು ಸೂಚಿಸಿರುವುದು ತಿಳಿದುಬರುತ್ತದೆ. ಇವೆಲ್ಲವುಗಳ ಜೊತೆಗೆ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆದ ಸಂಶೋಧನೆಗಳನ್ನು ಪರಿಸೀಲಿಸುವುದು ಅವಶ್ಯಕ. ಈ ನಿಟ್ಟಿನಲ್ಲಿ ಸಂಶೋಧನಾ ಕಾರ್ಯವು ಅಧ್ಯಯನ ಕ್ಷೇತ್ರವಾದ ಬಳ್ಳಾರಿ ಜಿಲ್ಲೆಯಲ್ಲಿ ವಿವಿಧ ಉದ್ದೇಶಗಳಿಗಾಗಿ ಪ್ರಜಾಸತ್ತೆಯು, ಆಯೋಜಿಸಿದ್ದ ಅನೇಕ ಸಂಶೋಧನಾ ಅಧ್ಯಯನಗಳನ್ನು ಕಾಣಬಹುದು.

ಕ್ಯಾಪ್ಟನ್ ನ್ಯೂಬೋಲ್ಡ್ (೧೮೩೮-೧೮೪೨) ಮದ್ರಾಸ್ ಸೈನ್ಯದ ತುಕಡಿಯಲ್ಲಿ ಸೈನ್ಯಾಧಿಕಾರಿಯಾಗಿದ್ದ ಅವರು "ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ದೋಣಿಮಲೈ, ಯಶವಂತನಗರ ಮತ್ತು ಕಮತೂರು ಮುಂತಾದ ಕಡೆಗಳಲ್ಲಿ ಬೆಟ್ಟಗುಡ್ಡಗಳ ಭೂಗರ್ಭದಲ್ಲಿ ಹುದುಗಿದ್ದ ಗಣಿಸಂಪನ್ಮೂಲಗಳನ್ನು ಪತ್ತೇಹಚ್ಚುವ ಕಾರ್ಯಯೋಜನೆಯನ್ನು ಪ್ರಪ್ರಥಮವಾಗಿ ಕೈಗೊಂಡರು. ಅವರು ತಮ್ಮ ವರದಿಯಲ್ಲಿ ಜಿಲ್ಲೆಯ ಸುತ್ತಮುತ್ತ ವೈವಿಧ್ಯಮಯವಾದ ಗಣಿಸಂಪನ್ಮೂಲಗಳ ಆಗರವಿದ್ದೂ, ಅದು ಖಜಾನೆಯ ಸ್ವರೂಪದಲ್ಲಿ ಅಡಕವಾಗಿದೆ. ಅಲ್ಲದೆ ಸಂಪನ್ಮೂಲದ ಗುಣಮಟ್ಟವು ತುಂಬಾ ಉತ್ಕೃಷ್ಟವಾಗಿದೆ ಎಂಬುದನ್ನು ಪತ್ತೇಹಚ್ಚಿದರು".[೨೩] ಆದರೆ ಅವರ ಅಧ್ಯಯನದಲ್ಲಿ ಯಾವ, ಯಾವ ಗಣಿಸಂಪನ್ಮೂಲಗಳಿವೆ ಎಂಬುದರ ಬಗ್ಗೆ ಸ್ಪಷ್ಟತೆ ಇರಲಿಲ್ಲ.

ಬ್ರೂಸ್ ಫೋಟ್ (೧೮೮೪-೧೮೯೦) ಅವರು ಬಳ್ಳಾರಿ ಜಿಲ್ಲೆಯಾದ್ಯಂತ ಅಡಗಿರುವ ಗಣಿ ಸಂಪನ್ಮೂಲವನ್ನು ಪತ್ತೇಹಚ್ಚಲು ಭೂಗರ್ಭಶಾಸ್ತ್ರಿಯ ಅಧ್ಯಯನವನ್ನು ಕೈಗೊಂಡಾಗ, ಜಿಲ್ಲೆಯ ಬಹುಭಾಗದ ಹಲವಾರು ಪ್ರದೇಶಗಳಿಗೆ ಭೇಟಿ ನೀಡಿ, ಇಲ್ಲಿರುವ "ಬೇರೆ, ಬೇರೆ ಗಣಿಸಂಪನ್ಮೂಲವನ್ನು ಸೂಕ್ಷ್ಮವಾಗಿ ಪರಿಶೀಲಿಸುವುದರ ಜೊತೆಗೆ, ಹೇರಳವಾದ ಕಬ್ಬಿಣದ ಅದಿರು ಹುದುಗಿರುವುದಾಗಿ ಪ್ರಥಮವಾಗಿ ಪ್ರಕಟಪಡಿಸಿದರು".[೨೪]

ಎಲ್.ಎಲ್.ಫರ್‌ಮನ್(೧೯೦೬-೧೯೦೯)ರವರು ಬಳ್ಳಾರಿ ಜಿಲ್ಲೆಯ ಸಂಡೂರು ಪ್ರಾಂತ್ಯವನ್ನೊಳಗೊಂಡಂತೆ ಹತ್ತಾರು ಪ್ರದೇಶಗಳ ಭೌಗೋಳಿಕ ಸಮೀಕ್ಷೆಯನ್ನು ಕೈಗೊಂಡಾಗ, ಕಂಡುಬಂದ ಅಂಶವೇನೆಂದರೆ "ಈ ಭಾಗದಲ್ಲಿ ಕಬ್ಬಿಣದ ಅದಿರಿನ ಜೊತೆಗೆ ಮ್ಯಾಂಗನೀಸ್ ಅದಿರಿನ ಸಂಗ್ರಹವು ಇರುವುದಾಗಿ ಪತ್ತೇಮಾಡಿದರು. ಜೊತೆಗೆ ಅದರ ಪ್ರಮಾಣವು ದೊಡ್ಡ, ದೊಡ್ಡ ಶಿಲೆಗಳ ರೂಪದಲ್ಲಿ ಮ್ಯಾಂಗನೀಸ್ ಖನಿಜ ನಿಕ್ಷೇಪಗಳು ಭೂಗರ್ಭದೊಳಗೆ ಅಡಗಿಕೊಂಡಿವೆ".[೨೫] ಇಂತಹ ಸಮೃದ್ಧಿಯ ಭೂಭಾಗವನ್ನು ಮ್ಯಾಂಗನೀಸ್ ಅದಿರಿನ ತೊಟ್ಟಿಲು ಎಂಬುದಾಗಿ ಗುರುತಿಸುವ ಮೂಲಕ ಆಶ್ಚರ್ಯ ವ್ಯಕ್ತಪಡಿಸಿದ್ದಾರೆ.

ನಾರಾಯಣ (೧೯೪೬) ಹಾಗೂ ವೆಂಕಟರಾಮ್ ಮತ್ತು ದತ್ತಾ (೧೯೪೮-೪೯)ರವರು ಸೊಂಡೂರು ಸ್ಟೇಟ್ ವ್ಯಾಪ್ತಿಯಲ್ಲಿ ಬರುವ ಭೂಪ್ರದೇಶಗಳಲ್ಲಿ ಬೇರೆ, ಬೇರೆ ಖನಿಜ ಸಂಪನ್ಮೂಲಗಳನ್ನು ಪತ್ತೇಹಚ್ಚಿ, ಅವುಗಳ ಬಗ್ಗೆ ವರದಿ ಮಾಡಲೂ ನಿಯುಕ್ತಿಗೊಂಡಾಗ, ಈ ಭಾಗದಲ್ಲಿರುವ "ಗಣಿಸಂಪನ್ಮೂಲವು ಧಾರವಾಡ ಜಿಲ್ಲೆಯ ವ್ಯಾಪ್ತಿಯಲ್ಲಿರುವಷ್ಟೇ ಉತ್ಕೃಷ್ಟವಾದ ಗಣಿಸಂಪನ್ಮೂಲದ ಗುಣಮಟ್ಟವನ್ನು ಇಲ್ಲಿ ಕಾಣಬಹುದಾಗಿದೆ. ಅಲ್ಲದೆ ಈ ಪ್ರದೇಶದ ಸುತ್ತಮುತ್ತ ಸ್ಪಟಿಕ, ಕ್ಯಾಲ್ಸಿಯಂ, ಸಲ್ಫರ್, ಸುಣ್ಣದಕಲ್ಲು ಮತ್ತು ಪೆಟ್ಲುಪ್ಪು ಇತ್ಯಾದಿ ಗಣಿಗಳು ಸಹ ದೊರೆಯುತ್ತವೆ"[೨೬] ಎಂಬುದಾಗಿ ಸಂಶೋಧನೆಯಿಂದ ಹೊರಹಾಕಿದರು.

ಸೀತಾರಾಮಯ್ಯ ಮತ್ತು ಪಾಟೀಲ್ (೧೯೬೫-೬೮) ಸಂಡೂರು ಪ್ರಾಂತ್ಯದಲ್ಲಿರುವ ದೋಣಿಮಲೈ ಹಾಗೂ ದೇವಗಿರಿಗೆ ಸಂಬಂಧಿಸಿದಂತೆ ಈ ಭಾಗದಲ್ಲಿರುವ "ಹತ್ತಾರು ಗಣಿ ಅದಿರುಗಳೊಂದಿಗೆ, ಅನೇಕ ಖನಿಜ ತೈಲಗಳು ಸಹ ದೊರೆಯುತ್ತವೆ".[೨೭] ಅಂತಹವುಗಳನ್ನು ವ್ಯವಸ್ಥಿತವಾಗಿ ಬಳಸಿಕೊಂಡರೆ ಈ ಭಾಗದ ಜನರ ಜೀವನಮಟ್ಟವನ್ನು ಉತ್ತಮಪಡಿಸಬಹುದೆಂದು ಪ್ರಯೋಗಿಕವಾಗಿ ವಿಶ್ಲೇಷಿಸಿದ್ದಾರೆ.

ಶಿವಕುಮಾರ ಮತ್ತು ನಾಗಣ್ಣ (೧೯೭೨) ಬಳ್ಳಾರಿ ಜಿಲ್ಲೆಯ ಸಂಡೂರು ಹಾಗೂ ಹೊಸಪೇಟೆ ವ್ಯಾಪ್ತಿಯ "ಭೂಪ್ರದೇಶವನ್ನು ೭ ಭಾಗಗಳಾಗಿ ವಿಭಾಗಿಸಿ, ಕಬ್ಬಿಣ ಮತ್ತು ಮ್ಯಾಂಗನೀಜ್‌ನ ಧಾತುವಲಯದ ರಚನೆಯನ್ನು ಕೈಗೊಂಡರು. ಯಾವ ಭಾಗದಲ್ಲಿ ಯಾವ ಖನಿಜ ಸಿಗುತ್ತದೆ.

ಎಷ್ಟು ಪ್ರಮಾಣದಲ್ಲಿದೆ ಎಂಬುದನ್ನು ಅಂಕಿಅಂಶಗಳ ಮೂಲಕ ಪ್ರಕಟಿಸಿದರು''.[೨೮] ಜೋಯಿದ್ದೀನ್ (೧೯೭೧) ಕೃಷ್ಣಮೂರ್ತಿ ಎಂ.(೧೯೭೪) ಇತ್ಯಾದಿ ಸಂಶೋಧಕರು ಬಳ್ಳಾರಿ ಜಿಲ್ಲೆಯನ್ನು ಕೇಂದ್ರ ಭಾಗವನ್ನಾಗಿಟ್ಟುಕೊಂಡು, ಹತ್ತಾರು ಖನಿಜ ಧಾತುಗಳನ್ನು ಪರಿಚಯಿಸುವ ಹಾಗೂ ವಿವಿಧ ಖನಿಜ ತೈಲಗಳನ್ನು ಪತ್ತೇಹಚ್ಚುವ ಅಧ್ಯಯನಗಳನ್ನು ಕೈಗೊಂಡಿರುವುದು ತಿಳಿದುಬರುತ್ತದೆ. ಆದರೆ ಈ ಮೇಲಿನ ಅಧ್ಯಯನಗಳೆಲ್ಲವೂ ಮಾನವೀಯ ಸಂಬಂಧಗಳಿಗಿಂತಲೂ ಕೇವಲ ಭೌಗೋಳಿಕ ಆರ್ಥಿಕ, ವಾಣಿಜ್ಯ ಮತ್ತು ವ್ಯಾಪಾರಿ ದೃಷ್ಟಿಕೋನಗಳಿಂದ ಜರುಗಿದ ಸಂಶೋಧನೆಗಳಾಗಿವೆ. ಇಂತಹವುಗಳು ಸಮಾಜದ ಸಾಮೂಹಿಕ ಅಭಿವೃದ್ಧಿಗೆ ತುಂಬಾ ಸಹಕಾರಿಯಾಗಿ ಕಂಡುಬಂದರೂ ವ್ಯಕ್ತಿಗಳ ಬೆಳವಣಿಗೆಗೆ ಹಾಗೂ ಸಮುದಾಯಗಳ ಸರ್ವೋತೋಮುಖ ಅಭಿವೃದ್ಧಿಗೆ ಸಹಕಾರಿಯಾಗಿಲ್ಲವೆಂದೇ ಹೇಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಇತ್ತೀಚಿನ ದಿನಗಳಲ್ಲಿ ಜಿಲ್ಲೆಯ ಗಣಿಗಾರಿಕೆಯಿಂದ ತಲೆದೋರಿರುವ ವೈಪರೀತ್ಯಗಳನ್ನು ಅಧ್ಯಯನ ಮಾಡಿದ ಸಂಶೋಧನೆಗಳು ಅತ್ಯವಶ್ಯಕವೆಂದೂ ಕಂಡುಬಂದ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದ ಸಂಶೋಧನಾ ಕಮ್ಮಟಗಳಲ್ಲಿ ವ್ಯಕ್ತವಾದ ವಿಚಾರಗಳನ್ನು ಪರಿಶೀಲಿಸಿದಾಗ, ಎಸ್.ಎಲ್. ಅಗರ್‌ವಾಲಾ(೧೯೭೦) ಅವರು ಗಣಿಗಾರಿಕೆಗೆ ಸಂಬಂಧಿಸಿದಂತೆ ಪ್ರಬಂಧವನ್ನು ಮಂಡಿಸುತ್ತಾ "ಗಣಿಗಳಲ್ಲಿರುವ ಕಾರ್ಮಿಕರ ರಕ್ಷಣೆ ಹಾಗೂ ಭದ್ರತೆಗಾಗಿ ಸರ್ಕಾರ ನೂರಾರು ಕಾಯ್ದೆಕಾನೂನುಗಳನ್ನು ಜಾರಿಗೊಳಿಸಿದ್ದರೂ, ಗಣಿಕಾರ್ಮಿಕರ ಅಭಿವೃದ್ಧಿ, ಭದ್ರತೆ ಮತ್ತು ರಕ್ಷಣೆಗೆ ಸಂಬಂಧಿಸಿದ ನೀತಿನಿಯಮಗಳು ಕೇವಲ ಕಾಗದದ ಹುಲಿಗಳಾಗಿ ಉಳಿದುಕೊಂಡಿವೆ''[೨೯] ಎಂದು ತಮ್ಮ ಕಾರ್ಮಿಕ ಕಲ್ಯಾಣ ಮತ್ತು ಸಂವಿಧಾನ ಎಂಬ ಅಧ್ಯಯನದಲ್ಲಿ ಚರ್ಚಿಸುತ್ತಾರೆ.

ಪುರೋಹಿತ್ ಮತ್ತು ಪ್ರದೀಪ್ ಕುಮಾರ ಸೇರಿ (೧೯೯೯) ಬಳ್ಳಾರಿ ಜಿಲ್ಲೆಯ ಕಬ್ಬಿಣ ಮತ್ತು ಉಕ್ಕು ಕೈಗಾರಿಕೆಗಳಿಂದಾಗಿ ಪರಿಸರದ ಮೇಲಿನ ವಿವಾದಗಳು ಎಂಬ ಪ್ರಬಂಧದಲ್ಲಿ ಗಣಿಸಂಸ್ಥೆಗಳಲ್ಲಿನ ಹೆಚ್ಚುವರಿ ಉತ್ಪಾದನೆಗೆ ಸಂಬಂಧಿಸಿದಂತೆ "ಉಕ್ಕು ಕೈಗಾರಿಕೆಗಳಲ್ಲಿ ಬಳಸುವ ಬೃಹತ್ ಗಾತ್ರದ ತಂತ್ರಜ್ಞಾನಗಳಿಂದ ಇಡೀ ಸಮಾಜದ ಸ್ವಾಸ್ಥ್ಯವನ್ನು ಹಾಳುಮಾಡಿ, ಜನಸಮುದಾಯಗಳ ಬದುಕನ್ನು ಅತಂತ್ರ ಸ್ಥಿತಿಗೆ ತಂದೊಡ್ಡಿವೆ''.[೩೦] ಇಂತಹ ಪರಿಸ್ಥಿತಿಯು ಸಮಾಜಕ್ಕೆ ಒಳ್ಳೆಯದಲ್ಲ ಎಂಬುದನ್ನು ಅಂಕಿಅಂಶಗಳ ಸಹಿತ ಸ್ಪಷ್ಟಪಡಿಸಿದ್ದಾರೆ.

೬. ಮೇಧಾ ವೆಂಕಟಯ್ಯ (೨೦೦೦) ಅವರು ಬೆಂಗಳೂರಿನಲ್ಲಿ ಆಯೋಜಿಸಿದ್ದ ರಾಷ್ಟ್ರೀಯ ಸಮ್ಮೇಳನದಲ್ಲಿ "ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ಗಣಿಗಾರಿಕೆಯಲ್ಲಿ ಯಾಂತ್ರೀಕರಣದ ಪ್ರಯೋಗ'' ಎಂಬ ಪ್ರಬಂಧದಲ್ಲಿ "ಜಿಲ್ಲೆಯ ಗಣಿಗಾರಿಕೆಯ ಉತ್ಪಾದನೆಯಲ್ಲಿ ಅಭಿವೃದ್ಧಿ ರಾಷ್ಟ್ರಗಳಲ್ಲಿರುವ ತಂತ್ರಜ್ಞಾನವನ್ನು ಅಳವಡಿಸಿಕೊಂಡರೆ ಕ್ರಮೇಣ ೨೦೦೨ರ ವೇಳೆಗೆ ಗಣಿಗಾರಿಕೆಯು ಬಂಡವಾಳ

ಸಂಬಂಧಿ ಉತ್ಪಾದನೆ ಯಾಗಲಿದೆ".[೧೧] ಇಂತಹ ಕ್ರಮವು ಜಿಲ್ಲೆಯಲ್ಲಿ ನಿರುದ್ಯೋಗದ ಪ್ರಮಾಣವನ್ನು ಹೆಚ್ಚಿಸುತ್ತದೆ ಎಂಬ ಸೂಚನೆಯನ್ನು ನೀಡುತ್ತಾ, ಜಿಲ್ಲೆಯ ಗಣಿಗಾರಿಕೆಯ ಉತ್ಪಾದನಾ ಕ್ರಮವು ಬದಲಾಗುತ್ತಿರುವುದನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ.

ಈ ಮೇಲಿನ ಅಧ್ಯಯನಗಳೆಲ್ಲವೂ ಆಯಾ ಕಾಲ, ಸಂದರ್ಭಕ್ಕನುಗುಣವಾಗಿ ಬೇರೆ ಬೇರೆ ದೃಷ್ಟಿಕೋನಗಳನ್ನಿಟ್ಟುಕೊಂಡು ರಚಿತಗೊಂಡಿವೆ. ಆದರೆ ಬಳ್ಳಾರಿ ಜಿಲ್ಲೆಯ ಬೆಟ್ಟಗುಡ್ಡಗಳಲ್ಲಿನ ಅರಣ್ಯದ ಉತ್ಪನ್ನಗಳಿಂದ ತಮ್ಮ ಬದುಕನ್ನು ಕಂಡುಕೊಂಡಿದ್ದ ಜನರಿಗೆ ಗಣಿಗಾರಿಕೆಯ ತಾಂತ್ರೀಕರಣವು ತುಂಬಾ ನಿರಾಸೆಯನ್ನುಂಟುಮಾಡಿದೆ. ಈ ಕಾರಣದಿಂಧಾಗಿ ಜಿಲ್ಲೆಯಲ್ಲಿ ನೆಲೆಗೊಂಡಿರುವ ವಿವಿಧ ಬುಡಕಟ್ಟು ಸಮುದಾಯಗಳು ತಮ್ಮ ಪಾರಂಪರಿಕ ವೃತ್ತಿಯಿಂದ ವಂಚಿತಗೊಂಡನಂತರ ಎದುರಿಸುತ್ತಿರುವ ಸಮಸ್ಯೆಗಳನ್ನು ಪತ್ತೇಹಚ್ಚಿ ಅವುಗಳಿಗೆ ಪರಿಹಾರಗಳನ್ನು ಹುಡುಕುವ, ಚರ್ಚಿಸುವ ಉದ್ದೇಶವೂ ಮಹಾಪ್ರಬಂಧದ ಉದ್ದೇಶವಾಗಿದೆ.

**ಅಡಿ ಟಿಪ್ಪಣಿಗಳು**

1. I and II :- Economics and Economic Geology and Mineral Industries - A.M. Hussain - P: 12-16
2. Ibid P: 12-16
3. Ibid, Vol-13, P: - 574
4. Ibid, Vol-I, 1991, P: 22-23
5. III-The World book Encyclopedia, Contributed by William Hustraid in Professor of Mining of the Colordo School and Mines, Vol-13, P: 574
6. Kaulir Kisor Kumar Chatterjee- An Introduction to Indian Miniral Economic, Vol-I, 1991, P: 22-25
7. Ibid, Vol-I, 1991, P: 22-25
8. Radhakrishna B.P, Mineral Resources of Karnataka, 1996, P: 380-390
9. A Report of the labour investigation committe, main Report manager publication division, Govt. of India Delhi, 1946, P:8
10. A Report of the committee on labour welfare, 1969, P: 15-17
11. R.R. Varma labour welfare work in jamshedpur university, Bihar, 1971, P: 62

12. V.V. Giri, Labour Problems in Indian Industry, Asia publishing House Bombay, 1972, P: 128-130

13. Francis Wilson, Labour in the South African Gold Mines, 1911-1969, Cambridge University Press, Cambridge, 1972, P: 78-79

14. Sahoo and Swarup Chandra, Problems of Industrial labour in orissa, Utkal univeristy, 1972, P:42-44

15. Hrishikeshi, Study of some Aspects of locial security in uttarpradesh, Lacknow University, Locknow, 1974, P: 45-47

16. V.R. Battacharya, Some Aspects of Social Secuirty in India, Indian worker, Vol-II, 1978, P:131-132

17. Saibaba G., Labour Conditions in the mining industry of A.P. - unpublished thesis submitted to Sri Venkateshwara University, Tirupathi, 1978, P:160-165

18. Srinivasan M.A., Socia-Economic conditions of workers in Kolar Gold Mines - Vikas Publishing House Pvt. Ltd., New Delhi, 1980, P: 50-52

19. Ravindra Kumar, Socio-economic condition of Lime stone labour in dhone, Kurnool distrsti, Sri Krishna Divaraya University, Anantapur, 1987, P: 61-64

20. Vidyavathi L.P., (1968), Applied Anthropolgy in India, Kitab Mahal, 1987

21. Kanak Mital, Tribes Identity in Changing Industrial Enviornment, The Santal Case, New Delhi, Ashis, 1986

22. Sharma K.L., (1987), The Industrial Worker: Some Myths Realities - Economic and Political Weekly, Vol.No.22, 30th May 1987

23. ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯ ಗಣಿಗಾರಿಕೆ ಮತ್ತು ಜನಾಂದೋಲನಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮, ಪು.೨೦

24. Cap New Bold T,T. Notes Principally Geogical and the treat between Bellary and Bijapur - Journal - Asia - Sec - Bangalore, 1842

25. Foote R.B. Geological of Bellary District, Men G - Si, 37, 1896

26. Former L.L. The Managalore Ore deposit of India, Memg-SI-37, 1909

27. Venkatataram M. & Dutt N.V., (1949) Report on Geological Survey of Sandur State, Publication of the department of Govt. India.

28. Seetaramayya ML and Patil R.D., Donimalai Iron ore Investigation Bellary District, Mysore State, Report on the results of Explaration, 1968

29. Shivakumar B.S. & Naganna C., A Straitgraphic study of the Sandur Schist, Bellary Dist., Karnataka, 1979

30. Agarwal S.L., Labour welfare and constitution National Labour Institute Bulletin, Jan-Mar, 1970

31. Purohit G.S. and Pradeep Kumar Sethi - Presented paper as mining and Enviornmental Legislation's - An over view in the workshop on miniral resources, utilisation and Enviornmental issues related to Iron and Steel Industry and Envionmental Issues, Dec, 13, 1999

# ಅಧ್ಯಾಯ ೩

## ಕಾರ್ಮಿಕರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿ

ಅ. ಸಾಮಾಜಿಕ ಪರಿಸ್ಥಿತಿ

೩.೧. ಕುಟುಂಬದ ಸ್ವರೂಪ

೩.೨. ಗಣಿ ಕಾರ್ಮಿಕರ ವೈವಾಹಿಕ ಸ್ಥಿತಿ

೩.೩. ಬುಡಕಟ್ಟು ಕಾರ್ಮಿಕರ ನಂಬಿಕೆ ಮತ್ತು ಆಚರಣೆ

೩.೪. ಕಾರ್ಮಿಕರ ಶಿಕ್ಷಣದ ಸ್ವರೂಪ

೩.೫. ಕಾರ್ಮಿಕರ ಜನನ ಮತ್ತು ಮರಣ ಪ್ರಮಾಣ

೩.೬. ಗಣಿ ಕಾರ್ಮಿಕರ ವಯೋಮಾನ

೩.೭. ಆರೋಗ್ಯ

ಬ. ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿ

೩.೮. ಉದ್ಯೋಗ

೩.೯. ಕೂಲಿ

೩.೧೦. ಆದಾಯ

೩.೧೧. ವೆಚ್ಚದ ಪ್ರಮಾಣ

೩.೧೨. ಸಾಲದ ಸೌಕರ್ಯ

೩.೧೩. ರಾಜಕೀಯ ಪ್ರಜ್ಞೆ ಮತ್ತು ಪಾಲ್ಗೊಳ್ಳುವಿಕೆ

# ಕಾರ್ಮಿಕರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿ

## ಅ. ಸಾಮಾಜಿಕ ಪರಿಸ್ಥಿತಿ

'ಸಮಾಜ'ವೆಂಬುದು ಮಾನವನ ಸಾಂಧರ್ಬಿಕ ಒಪ್ಪಂದದ ಒಂದು ಸ್ವರೂಪ. ಅದರ ಹುಟ್ಟು ಬೆಳವಣಿಗೆಗೆ ಸಾವಿರಾರು ವರ್ಷಗಳಷ್ಟು ದೀರ್ಘ ಇತಿಹಾಸವಿದೆ. ಆದಿಮಾನವನು ಅಲೆಮಾರಿಯಾಗಿದ್ದಾಗ ಅವನ ಅಸ್ಥಿತ್ವಕ್ಕೆ ಸವಾಲಾಗಿ ನಿಂತ ಅನೇಕ ಗಂಡಾಂತರಗಳಿಂದ ಪಾರಾಗಲು, ಅವುಗಳ ನಿವಾರಣೆಗೆ ಶಾಶ್ವತ ಪರಿಹಾರವನ್ನು ಕಂಡುಕೊಳ್ಳಲು, ಮತ್ತೊಂದರ ಅಥವಾ ಮತ್ತೊಬ್ಬರ ಸಹಾಯ, ಸಹಕಾರ ಮತ್ತು ಆಸರೆಯ ಅವಶ್ಯಕತೆಯೇ ಮಾನವನಲ್ಲಿ ಕುಟುಂಬದ ಅಸ್ತಿತ್ವಕ್ಕೆ ನಾಂದಿಯಾಯಿತು. ಈ ಹಿನ್ನೆಲೆಯಲ್ಲಿ ಅನೇಕ ಸಂಶೋಧನೆ, ಆವಿಷ್ಕಾರ-ಪರಿಷ್ಕಾರಗಳಿಗೆ ಕಾರಣವಾಗಿ ಕುಟುಂಬ, ವಿವಾಹ, ಧರ್ಮ, ರಾಜ್ಯ ಮತ್ತು ಆಸ್ತಿಗಳ ಪರಿಕಲ್ಪನೆಗೆ ಕಾರಣವಾಯಿತು. ಇವೆಲ್ಲವುಗಳ ರಕ್ಷಕ ಹಾಗು ಪೋಷಕ ಸ್ಥಾನವನ್ನು ಅವನ ಸುತ್ತಲಿನ ಸಮಾಜವು ವಹಿಸಿಕೊಂಡು, ಜನ ಸಮುದಾಯಗಳ ನಡೆ ನುಡಿ, ನೀತಿ ನಿಯಮಗಳ ನಿರೂಪಕನ ಸ್ಥಾನಮಾನವನ್ನು ನಿರ್ಧರಿಸುವ ಅಧಿಕಾರವನ್ನು ಸಮಾಜವು ಪಡೆದುಕೊಂಡಿತು. ನಂತರ ಮಾನವ ಕುಟುಂಬದ ಸ್ವರೂಪವೇ ಬದಲಾಯಿತು. ಆಧುನಿಕತೆ ಮತ್ತು ತಾಂತ್ರಿಕತೆಯು ಮಾನವನ ಭೌದ್ಧಿಕತೆಯ ದಿಕ್ಕನ್ನೇ ಬದಲಾಯಿಸಿ, ಹತ್ತಾರು ಬದಲಾವಣೆಗಳೊಂದಿಗೆ ಕುಟುಂಬ ವ್ಯವಸ್ಥೆಯ ರೀತಿ-ರಿವಾಜುಗಳು ನಿರ್ಧರಿಸಲ್ಪಟ್ಟವು.

ಬುಡಕಟ್ಟು ಸಮುದಾಯಗಳು ಮೂಲತಃ ಮಾನವ ಸಂಸ್ಕೃತಿಯ ಶ್ರೀಮಂತಿಕೆಯ ವಾರಸುದಾರರು. ತಮ್ಮ ಮೂಲ ನೆಲೆ ಹಾಗೂ ಅವರ ವೃತ್ತಿಗಳಲ್ಲಿ ತಮ್ಮ ದೈನಂದಿನ ಬದುಕನ್ನು ಸುತ್ತಲಿನ ಪರಿಸರದೊಂದಿಗೆ ಸಮೀಕರಿಸಿಕೊಂಡು, ಪರಿಸರದ ಒಂದು ಭಾಗವಾಗಿ ಜೀವಿಸಿದವರು. ಇಂದಿನ ವೈಜ್ಞಾನಿಕತೆ, ತಂತ್ರಜ್ಞಾನ ಮತ್ತು ಆಧುನಿಕತೆಗಳಿಂದ ದೂರವಾಗಿದ್ದ ಕಾರಣ, ಅವರ ಭೌದ್ಧಿಕ ಚಿಂತನೆ, ಆಲೋಚನೆ ಹಾಗೂ ಆಕಾಂಕ್ಷೆಗಳೆಲ್ಲವು ತಮ್ಮ ಸುತ್ತಲಿನ ಪರಿಸರದೊಂದಿಗೆ ಕೇಂದ್ರೀಕೃತಗೊಂಡಿತ್ತು. ಸಂತೋಷ, ಸಂತೃಪ್ತಿ, ಉಲ್ಲಾಸಭರಿತ ಹಾಗೂ ಲವಲವಿಕೆಯುಳ್ಳ ಜೀವನವು ಅವರದಾಗಿತ್ತು ಎಂಬುದು ಅನೇಕ ಸಮಾಜಶಾಸ್ತ್ರಜ್ಞರ ಹಾಗೂ ಮನಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಆಧುನಿಕರಣ ಹಾಗೂ ತಾಂತ್ರಿಕತೆಯು ವಿಸ್ತೃತಗೊಂಡಂತೆಲ್ಲಾ ಮಾನವನ ಭೌದ್ಧಿಕತೆಯು ಸಂಕೀರ್ಣಗೊಳ್ಳುತ್ತಾ ತನ್ನ ಸುತ್ತಲಿನ

ಪರಿಸರವನ್ನು ಪ್ರಶ್ನಿಸುವ, ಪರೀಕ್ಷಿಸುವ, ಹೊಸ ಹೊಸ ನಿರೀಕ್ಷೆಗಳನ್ನು ಅದರ ಮೇಲೆ ಪ್ರಯೋಗಿಸುವ, ಪ್ರಯೋಗ ಶಾಲೆಯನ್ನಾಗಿ ಪರಿಸರವನ್ನು ರೂಪಿಸಿಕೊಂಡನು. ತರುವಾಯ, ಮಾನವ ತನ್ನ ಮಹಾತ್ವಾಕಾಂಕ್ಷೆಗಳ ವಿಶ್ಲೇಷಣೆಗೆ ಮುಂದಾದಾಗ ಬುಡಕಟ್ಟು ಸಮುದಾಯಗಳು ತಮ್ಮ ಮೂಲವೃತ್ತಿ ಹಾಗೂ ಮೂಲ ನೆಲೆಯು ಸ್ಥಿತ್ಯಂತರಕ್ಕೆ ಒಳಗಾಗಿ, ಅನೇಕ ಸಂಕಷ್ಟಗಳನ್ನೆದುರಿಸಬೇಕಾಗಿದೆ. ಇಂತಹ ಪರಿಸ್ಥಿತಿಯು ಬಳ್ಳಾರಿ ಜಿಲ್ಲೆಯಲ್ಲಿರುವ ಬುಡಕಟ್ಟು ಸಮುದಾಯಗಳು ಗಣಿಕೈಗಾರಿಕೆಯನ್ನು ತಮ್ಮ ಜೀವನಾಧಾರವಾಗಿ ನಂಬಿಕೊಂಡಿರುವ ಅನೇಕ ಬುಡಕಟ್ಟು ಕಾರ್ಮಿಕರಲ್ಲಿ ಕಂಡುಬರುತ್ತದೆ.

ಕಾರ್ಮಿಕನೆಂದರೆ ಕೆಲಸಗಾರ ಅಥವಾ ಶ್ರಮಜೀವಿ ಅಥವಾ ಕೂಲಿಕಾರ ಅಥವಾ ದುಡಿಯುವವ ಎಂದೂ ಅರ್ಥವಾಗುತ್ತದೆ. ಇಂತಹ ಕಾರ್ಮಿಕ ಪದಕ್ಕೆ ನೂರಾರು ವ್ಯಾಖ್ಯಾನುಗಳಿದ್ದೂ ಅವುಗಳಲ್ಲಿ, "ಯಾವುದೇ ಒಬ್ಬ ವ್ಯಕ್ತಿಯು ದೈಹಿಕ ಇಲ್ಲವೇ ಬೌದ್ಧಿಕವಾಗಿ ಯಾವುದಾದರೂ ಒಂದು ನಿರ್ದಿಷ್ಟವಾದ ಕೆಲಸದಲ್ಲಿ ಭಾಗಶಃ ಇಲ್ಲವೇ ಸಂಪೂರ್ಣವಾಗಿ ಸರಳ ಅಥವಾ ಶ್ರಮದಾಯಕ ಕಾರ್ಯದಲ್ಲಿ ತೊಡಗಿರುವ ವ್ಯಕ್ತಿಯನ್ನು ಕಾರ್ಮಿಕ ಎಂದು ಕರೆಯುತ್ತಾರೆ."[೧]

"ಬಂಡವಾಳಶಾಹಿಗಳ ಇಲ್ಲವೇ ಬೂರ್ಜ್ವಾಗಳ ಇಚ್ಛಾಶಕ್ತಿಗನುಗುಣವಾಗಿ ಯಾವೊಬ್ಬ ಕೆಲಸಗಾರನು ತನ್ನೆಲ್ಲಾ ಆಸೆ ಆಕಾಂಕ್ಷೆಗಳನ್ನು ಬದಿಗೊತ್ತಿ, ಯಾವುದೇ ಸ್ವರೂಪದ ಭೌತಿಕ ಕೆಲಸ ಕಾರ್ಯಗಳಲ್ಲಿ ತೊಡಗಿರುವವನನ್ನು ಕಾರ್ಮಿಕನೆಂದು ಕರೆಯುತ್ತಾರೆ".[೨]

"ವಿವಿಧ ಬಗೆಯ ಕೈಗಾರಿಕೆಗಳಾದ ದೊಡ್ಡ, ಮಧ್ಯಮ, ಸಣ್ಣ ಹಾಗೂ ಗೃಹ ಕೈಗಾರಿಕೆಗಳಲ್ಲಿ ಯಾವುದೇ ಸ್ವರೂಪದ ವೇತನಕ್ಕಾಗಿ ದುಡಿಯುವ ಕೆಲಸಗಾರರನ್ನು ಕೈಗಾರಿಕಾ ಕಾರ್ಮಿಕರೆಂದು ಕರೆಯುತ್ತಾರೆ".[೩]

ಒಟ್ಟಾರೆಯಾಗಿ ಹೇಳುವುದಾದರೆ ನಮ್ಮ ಸುತ್ತಲು ಕಂಡುಬರುವ 'ವಿವಿಧ ವಸ್ತುಗಳ ಉತ್ಪಾದನಾ ಚಟುವಟಿಕೆಯಲ್ಲಿ ವಿಶಿಷ್ಟ ಪಾತ್ರವನ್ನು ನಿರ್ವಹಿಸಿ, ಅವುಗಳನ್ನು ಸಿದ್ಧವಸ್ತುವನ್ನಾಗಿ ಪರಿವರ್ತಿಸುವುದರ ಜೊತೆಗೆ, ಆರ್ಥಿಕ ಅಭಿವೃದ್ಧಿಗೆ ಪ್ರೇರಕರಾದ ದೈಹಿಕ ಅಥವಾ ಬೌದ್ಧಿಕ ಕೆಲಸಗಾರರನ್ನು ಕಾರ್ಮಿಕರೆಂದೂ ಕರೆಯಬಹುದು. ಆದರೆ ಪ್ರಸ್ತುತ ಸನ್ನಿವೇಶದಲ್ಲಿ 'ಕಾರ್ಮಿಕ' ಎಂಬ ಪದವು ಇತ್ತೀಚೆಗೆ ತುಂಬಾ ಸಂಕುಚಿತವಾದ ಅರ್ಥವನ್ನು ಪಡೆದುಕೊಳ್ಳುತ್ತಿದೆ. ಹೇಗೆಂದರೆ ಕಾರ್ಮಿಕ ನಿರ್ವಹಿಸುವ ಎಲ್ಲಾ ಕೆಲಸ-ಕಾರ್ಯಗಳನ್ನು ಯಂತ್ರಗಳೇ ನಿರ್ವಹಿಸುತ್ತಿರುವುದರಿಂದ ಕಾರ್ಮಿಕನ ಸ್ಥಾನ-ಮಾನ ಬಹಳಷ್ಟು ಇತಿ-ಮಿತಿಗೊಳಗಾಗಿದೆ. ಉದಾರೀಕರಣ ಹಾಗೂ ಜಾಗತೀಕರಣದಿಂದಾಗಿ ಅಧಿಕ ಉತ್ಪಾದನೆ. ಅಧಿಕ ಲಾಭ ಹಾಗೂ ಬೃಹತ್ ಮಾರುಕಟ್ಟೆ ಎಂಬ ಪ್ರಕ್ರಿಯೆಗಳು ಉತ್ಪಾದನಾ ವಲಯ ಹಾಗೂ ಮಾಲೀಕ ವರ್ಗಗಳಲ್ಲಿ ಪದೇ ಪದೇ ಪರಿಶೀಲನೆಗೊಳಪಡುತ್ತಿವೆ. ಜಾಗತೀಕರಣವು ಖಾಸಗೀಕರಣದ ಬಲವರ್ಧನೆಗೆ

ಸಹಕರಿಸುತ್ತಿರುವುದರಿಂದ ವಿಶ್ವದ ಬೇರೆ, ಬೇರೆ ದೇಶಗಳಲ್ಲಿರುವ ಬಂಡವಾಳ ಹಾಗೂ ಉನ್ನತ ತಂತ್ರಜ್ಞಾನವು ಅವ್ಯಹತವಾಗಿ ಹರಿದುಬರುತ್ತಿದೆ. ದೇಶದಲ್ಲಿರುವ ಎಲ್ಲಾ ಉತ್ಪಾದನಾ ಚಟುವಟಿಕೆಗಳು ಬಂಡವಾಳ ಆಧಾರಿತ ಉತ್ಪಾದನೆಯಾಗಿ, ಮಾರ್ಪಡುತ್ತಿರುವುದರಿಂದ ಕಾರ್ಮಿಕರ ಶಕ್ತಿಯು ದಿನೇ, ದಿನೇ ನಿಷ್ಪ್ರಯೋಜಕವಾಗುತ್ತಿದೆ. ಭಾರತ ಬಹಳಷ್ಟು ಅನಕ್ಷರಸ್ಥರನ್ನೊಳಗೊಂಡ ಶ್ರೀಮಂತ ರಾಷ್ಟ್ರ. ಇಂತಹ ಜನರು ಆಧುನೀಕತೆಯಿಂದಾಗುತ್ತಿರುವ ಬದಲಾವಣೆಗಳನ್ನು ಆಸ್ವಾದಿಸುವ ಇಲ್ಲವೇ, ಕರಗತ ಮಾಡಿಕೊಳ್ಳುವ ಚಾತುರ್ಯವನ್ನು ಪಡೆದುಕೊಳ್ಳದ ಕಾರಣ ಅನಕ್ಷರಸ್ಥ ಕಾರ್ಮಿಕನು ಮತ್ತಷ್ಟು ಉಪೇಕ್ಷೆಗೆ ಒಳಗಾಗಬೇಕಾಗಿದೆ. ಜಾಗತೀಕರಣವು ಮಾನವೀಯ ಮೌಲ್ಯಗಳಿಗಿಂತಲೂ, ಬಂಡವಾಳಸಂಬಂಧಿ ವಿಷಯಗಳಿಗೆ ಹೆಚ್ಚು ಮಾನ್ಯತೆ ಕೊಟ್ಟಿದ್ದರಿಂದ ಕಾರ್ಮಿಕ ಶಕ್ತಿಯು ಯಕಶ್ಚಿ:ತವಾಗಿ ಕಂಡುಬರುತ್ತಿದೆ. ಇಂತಹ ಗುರುತರವಾದ ಸನ್ನಿವೇಶದಲ್ಲಿ ಕೇವಲ ತನ್ನ ದೈಹಿಕ ಸ್ವಸಾಮರ್ಥ್ಯದಿಂದ ದುಡಿಮಯನ್ನೇ ನಂಬಿಕೊಂಡಿದ್ದ ಬಹಳಷ್ಟು ಕಾರ್ಮಿಕರು ಬೀದಿಪಾಲಾಗುತ್ತಿದ್ದಾರೆ. ಅವರನ್ನು ಆಶ್ರಯಿಸಿದ್ದ ಬಹಳಷ್ಟು ಕುಟುಂಬಗಳು ನಿರುದ್ಯೋಗ, ಹಸಿವು, ಅನಾರೋಗ್ಯಗಳಿಂದಾಗಿ ಅನೇಕ ರೋಗ-ರುಜಿನಗಳಿಗೆ ಬಲಿಯಾಗಿ ನಿರ್ನಾಮಗೊಂಡಿವೆ. ನಮ್ಮ ಸುತ್ತಲಿನ ವ್ಯವಸ್ಥೆಯಲ್ಲಿ ಹಸಿವು, ನಿರಾಸೆ, ಹಾಹಾಕಾರ, ಸಿಟ್ಟು-ಆಕ್ರೋಶಗಳು ಜನಸಮುದಾಯಗಳ ಒಡಲೊಳಗೆ ಕುದಿಯುತ್ತಿವೆ. ಇಂತಹ ತ್ವೇಷಮಯ ವಾತಾವರಣವು ಯಾವುದೇ ಸನ್ನಿವೇಶದಲ್ಲೂ, ಅದು ಯಾವುದೇ ಸ್ವರೂಪವನ್ನು ಪಡೆದುಕೊಳ್ಳುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಇಂತಹ ವಾತಾವರಣಕ್ಕೆ ಕಾರಣವಾಗುವ ಕಾರ್ಮಿಕನ ಪರಿಸ್ಥಿತಿಯು ಪ್ರಸ್ತುತ ಸನ್ನಿವೇಷದಲ್ಲಿ ಅಧ್ಯಯನಕ್ಕೆ ಯೋಗ್ಯವಾಗಿ ಕಂಡುಬರುವುದರಿಂದ ಬಳ್ಳಾರಿ ಜಿಲ್ಲೆಯ ಗಣಿಯನ್ನವ ಲಂಬಿಸಿರುವ ಬುಡಕಟ್ಟು ಗಣಿಕಾರ್ಮಿಕರ ಸಾಮಾಜಿಕ-ಆರ್ಥಿಕ ಪರಿಸ್ಥಿತಿಯ ಅಗತ್ಯತೆಯನ್ನು ಅಧ್ಯಯನ ದೃಷ್ಟಿಯಿಂದ ಕೈಗೆತ್ತಿಕೊಳ್ಳಲಾಗಿದೆ.

'ಕಾರ್ಮಿಕ'ನೆಂದಾಕ್ಷಣ ನಮ್ಮ ಮುಂದೆ ಹಲವಾರು ಪ್ರಶ್ನೆಗಳು ತಲೆ ಎತ್ತುತ್ತವೆ. ಅವುಗಳಲ್ಲಿ ಯಾವ ಕಾರ್ಮಿಕ, ಕಾರ್ಮಿಕನ ವಲಯ, ಯಾವ ಸಮುದಾಯದ ಕಾರ್ಮಿಕ ಇತ್ಯಾದಿ ಹತ್ತಾರು ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಬೇಕಾಗುತ್ತದೆ. ಏಕೆಂದರೆ ತಂತ್ರಜ್ಞಾನವು ಕಾರ್ಮಿಕವರ್ಗವನ್ನು ಕುಶಲ ಕಾರ್ಮಿಕರು (Skilled labour) ಅರೆಕುಶಲ ಕಾರ್ಮಿಕರು ಮತ್ತು ಕುಶಲರಹಿತ ಕಾರ್ಮಿಕರು (Unskilled labour)ಎಂಬುದಾಗಿ ವರ್ಗೀಕರಿಸಿದೆ. ಯಾವ ವರ್ಗದ ಕಾರ್ಮಿಕರನ್ನು ಆಯ್ಕೆಗೆ ಪರಿಗಣಿಸ ಬೇಕೆಂಬ ಗೊಂದಲ ಸೃಷ್ಟಿಯಾಗುತ್ತದೆ. ಒಂದು ವೇಳೆ ಉತ್ಪಾದನಾ ವಲಯವನ್ನು ಪರಿಗಣಿಸುವುದಾದರೆ ಕೈಗಾರಿಕಾವಲಯದಲ್ಲಿನ ಕಾರ್ಮಿಕ ಅಥವಾ ಕೃಷಿಯಲ್ಲಿರುವ ಕಾರ್ಮಿಕ ಎಂಬುದನ್ನು ಕಂಡುಹಿಡಿಯ ಬೇಕಾಗುತ್ತದೆ. ಹಾಗೆಯೇ ಸಂಘಟಿತ-ಅಸಂಘಟಿತ ಹಾಗೂ ಅಲೆಮಾರಿ ಕಾರ್ಮಿಕರೆಂಬ ಅನೇಕ ಪ್ರಭೇದಗಳು ಹತ್ತಾರು ಪ್ರಶ್ನೆಗಳಿಗೆ ಅವಕಾಶ ಮಾಡಿಕೊಡುತ್ತವೆ. ಇಂತಹ ಸನ್ನಿವೇಶದಲ್ಲಿ ಅಧ್ಯಯನಕಾರರು

ಯಾವುದಾದರೂ ಒಂದು ವರ್ಗದ ಕಾರ್ಮಿಕರನ್ನು ಕೈಗೆತ್ತಿಕೊಂಡು, ಅಧ್ಯಯನ ಕೈಗೊಳ್ಳುವುದು ಸೂಕ್ತವೆಂದೂ ಪರಿಭಾವಿಸುವುದಾದರೆ, ಬಳ್ಳಾರಿ ಜಿಲ್ಲೆಯ ಪ್ರಮುಖ ಆದಾಯದ ಮೂಲ ಹಾಗು ದ್ವಿತೀಯ ಉದ್ಯೋಗವೆಂದೂ ಗುರುತಿಸಲ್ಪಡುವ ಗಣಿಗಾರಿಕೆಯಲ್ಲಿ ಬುಡಕಟ್ಟು ಸಮುದಾಯದ ಗಣಿ ಕಾರ್ಮಿಕರನ್ನು ವಿವಿಧ ಆಯಾಮಗಳಲ್ಲಿ ಪರಿಷ್ಕರಿಸಿದಾಗ ಗಣಿಕಾರ್ಮಿಕರ ನೈಜ ಚಿತ್ರಣವನ್ನು ಅರಿಯಲು ಸಾಧ್ಯವಾಗುತ್ತದೆ.

ಭಾರತದ ಯಾವುದೇ ಉತ್ಪಾದನಾ ವಲಯವನ್ನು ತೆಗೆದುಕೊಂಡರೂ ಅಸಂಘಟಿತ ಕಾರ್ಮಿಕರೇ ಹೆಚ್ಚಾಗಿ ಕಂಡುಬರುತ್ತಾರೆ. ಕೃಷಿವಲಯದಲ್ಲಂತೂ ಅತ್ಯಧಿಕ ಪ್ರಮಾಣದಲ್ಲಿ ಇವರನ್ನು ಕಾಣಬಹುದು. ಇಂತಹ ಅಸಂಘಟಿತ ಕಾರ್ಮಿಕರು, ಆಯಾ ಉತ್ಪಾದನೆಗೆ ಸಂಬಂಧಿಸಿದ ಯಾವುದೇ ಸ್ವರೂಪದ ಶಿಕ್ಷಣವನ್ನು ಪಡೆಯದೇ ತಮ್ಮ ಸ್ವಸಾಮರ್ಥ್ಯದ ಮೇಲೆ ಕಾರ್ಯ ನಿರ್ವಹಿಸುವವರಾಗಿದ್ದಾರೆ. ಅವರು ತಮ್ಮ ಭವಿಷ್ಯದ ಬಗ್ಗೆ ಚಿಂತಿಸದೇ ಕೇವಲ ಆ ದಿನದ ಮಟ್ಟಿಗೆ ಊಟ, ವಸತಿ, ಬಟ್ಟೆಯ ಬಗ್ಗೆ ಮಾತ್ರ ಯೋಚಿಸುವವರು. ಸರ್ಕಾರ ರೂಪಿಸಿರುವ ಯಾವುದೆ ಕಾಯ್ದೆ-ಕಾನೂನುಗಳ ಬಗ್ಗೆ ಅವರಲ್ಲಿ ತಿಳುವಳಿಕೆಯೇ ಇಲ್ಲ. ಅವರ ಹಕ್ಕುಗಳೇನು? ಅವುಗಳ ರಕ್ಷಣೆಗೆ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಅರಿಯದವರಾಗಿದ್ದಾರೆ? ಇದರಿಂದಾಗಿ ಅಸಂಘಟಿತ ಕಾರ್ಮಿಕರು ಹೆಚ್ಚಾಗಿ ಶೋಷಣೆಗೆ ಒಳಗಾಗುತ್ತಾರೆ. ಹೀಗಾಗಿ ಬಂಡವಾಳದಾರರು ಅಥವಾ ಉತ್ಪಾದನೆಯ ಮಾಲೀಕರು ಅಸಂಘಟಿತ ಕಾರ್ಮಿಕರನ್ನು ಅತ್ಯಂತ ನಿಕೃಷ್ಟವಾಗಿ ನಡೆಸಿಕೊಳ್ಳುತ್ತಾರೆ. ಅಧ್ಯಯನದ ಸಮಯದಲ್ಲಿ ಅಸಂಘಟಿತ ಕಾರ್ಮಿಕರ ಸ್ಥಿತಿ ಗತಿಯ ಅಧ್ಯಯನಕ್ಕಾಗಿ ಮಹಾರಾಷ್ಟ್ರ ರಾಜ್ಯದ ಮುಂಬಾಯಿ ಪಟ್ಟಣಕ್ಕೆ ಬೇಟಿ ನೀಡಿದಾಗ, ಏಷ್ಯಾದ ದೊಡ್ಡ ಕೊಳಗೇರಿಯೆಂದೇ ಗುರುತಿಸಲ್ಪಡುವ "ಧಾರವಿ" ಯಲ್ಲಂತೂ ಕಾರ್ಮಿಕರ ಜೀವನಕ್ರಮ ನರಕಸಾದೃಶ್ಯ. ಆ ಕೊಳಗೇರಿಯಲ್ಲಿ ಸುಮಾರು ೫೦,೦೦೦ ಸಾವಿರಕ್ಕಿಂತಲೂ ಹೆಚ್ಚು ಕಾರ್ಮಿಕರು ವಾಸವಾಗಿದ್ದು, ಅವರಲ್ಲಿ ಶೇಕಡಾ ೮೦ರಷ್ಟು ಕರ್ನಾಟಕದಿಂದ ವಲಸೆ ಹೋದವರು. ಅಲ್ಲಿರುವ ಕಾರ್ಮಿಕರ ವಸತಿಯ ಸ್ವರೂಪವು ೫ x ೫, ೫ x ೬, ೫ x ೭ ಅಡಿಗಳ ಚಿಕ್ಕ, ಚಿಕ್ಕ ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ. ಇಡೀ ಮುಂಬಯಿ ನಗರದ ಗಗನ ಚುಂಬಿ ಕಟ್ಟಡಗಳ ನಿರ್ಮಾಣಕ್ಕಾಗಿ ತಮ್ಮ ಶ್ರಮ, ಬೆವರು, ರಕ್ತವನ್ನು ಧಾರೆಯೆರೆದ ಕಾರ್ಮಿಕರಿಗೆ ಬಯಲು ಆಲಯದ ಸನ್ಮಾನ ವಿಪರ್ಯಾಸವಲ್ಲವೇ? ಅಲ್ಲದೇ ಕಾರ್ಮಿಕರು ತಮ್ಮ ದಿನತ್ಯದ ಕೂಲಿಗಾಗಿ ಇಲ್ಲವೇ ದುಡಿಮೆಗಾಗಿ ಉದ್ಯೋಗವನ್ನು ಅರಸಿ ನಿರ್ದಿಷ್ಟ ಪ್ರದೇಶವೆಂಬ ಮಾರುಕಟ್ಟೆಯಲ್ಲಿ ಕೊಳ್ಳುವವರಿಗಾಗಿ ಕಾಯುತ್ತಾ ಕಾಲವನ್ನು ನೂಕಬೇಕಾಗಿದೆ. ಕೊಳ್ಳುವವರ ಬೇಡಿಕೆಗನುಗುಣವಾಗಿ ಕಾರ್ಮಿಕರ ಆಯಾ ದಿನದ ಕೂಲಿ ನಿರ್ಧಾರವಾಗುತ್ತದೆ. ಹೀಗೆ ಅಸಂಘಟಿತ ಕಾರ್ಮಿಕರು ತಮ್ಮ ದೈನಂದಿನ ಬದುಕಿನಲ್ಲಿ ಶೋಷಣೆ, ಹಲ್ಲೆ, ದೊಂಬಿ ಇತ್ಯಾದಿ ಪ್ರಕರಣಗಳಿಗೆ ನಿರಂತರವಾಗಿ ಬಲಿಯಾಗಬೇಕಾಗುತ್ತದೆ.

ಇಂತಹ ಸನ್ನಿವೇಶ ಪ್ರತಿಯೊಬ್ಬ ಅಸಂಘಟಿತ ಕಾರ್ಮಿಕರ ನೆತ್ತಿಯ ಮೇಲೆ ತೂಗು ಕತ್ತಿಯಂತೆ ಬದುಕಿನ ಎಚ್ಚರಿಕೆಯ ಗಂಟೆಯನ್ನು ಯಾವಾಗಲು ನೆನಪಿಸುತ್ತದೆ!

ಇನ್ನೂ ಕೃಷಿಕಾರ್ಮಿಕರ ಪರಿಸ್ಥಿತಿಯು ತುಂಬಾ ಅಸ್ತವ್ಯಸ್ತ ಹಾಗೂ ಅನಿಶ್ಚಿತತೆಯಿಂದ ಕೂಡಿದೆ. ಅವರಿಗೆಲ್ಲಾ ವರ್ಷಕ್ಕೆ ೬ ರಿಂದ ೮ ತಿಂಗಳವರಗೆ ದುಡಿಮೆ ಸಿಕ್ಕರೂ ಸಹ ಅವರ ಪರಿಸ್ಥಿತಿ ಬುಡಕಟ್ಟು ಕಾರ್ಮಿಕರಿಗಿಂತ ಉತ್ತಮವೆಂದೇ ಹೇಳಬಹುದು. ಏಕೆಂದರೆ ಕೃಷಿಕಾರ್ಮಿಕರ ಸುತ್ತಮುತ್ತಾ ನಮ್ಮ ವ್ಯವಸ್ಥೆಯ ಮಾನವೀಯ ಮೌಲ್ಯಗಳು ಸುತ್ತುವರೆದಿವೆ. ಕೃಷಿ ಕಾರ್ಮಿಕರಿಗೆ ತಮ್ಮ ಪೂರ್ವಿಕರಿಂದ ಬಳುವಳಿಯಾಗಿ ಅಲ್ಪ ಪ್ರಮಾಣದಲ್ಲಿ ಹೊಲ, ಮನೆಗಳಾದರೂ ಸ್ಥಿರ ಆಸ್ತಿಯ ಸ್ವರೂಪದಲ್ಲಿ ದೊರಕಿವೆ. ಅಲ್ಲದೆ ಅವರು ಸಮಾಜದಲ್ಲಿ ತಮ್ಮದೇ ಆದ ಒಂದು (Identity) ಅನನ್ಯತೆಯನ್ನು ಪಡೆದವರಾಗಿದ್ದಾರೆ. ಇನ್ನೂ ಕಾರ್ಖಾನೆಗಳಲ್ಲಿ ದುಡಿಯುವ ಕಾರ್ಮಿಕರು. ಸಂಘಟಿತಗೊಂಡಿರುವುದರಿಂದ ತಮ್ಮ ಹಕ್ಕುಗಳ ಬಗ್ಗೆ ಅರಿವುಳ್ಳವರು, ಬಲವುಳ್ಳವರು, ಪರಿಜ್ಞಾನವುಳ್ಳವರೂ ಆಗಿದ್ದಾರೆ. ಅಲ್ಲದೆ ಜಿಲ್ಲಾ, ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಸಂಘಟಿತಗೊಂಡಿರುವುದರಿಂದ ಬಂಡವಾಳಗಾರರು, ಮಾಲೀಕರು ಅವರನ್ನು ಸುಲಭವಾಗಿ ಪರಿಗಣಿಸುವಂತಿಲ್ಲ. ಹೀಗಾಗಿ ಅವರಿಗೆ ದುಡಿಮೆಗೆ ತಕ್ಕ ಕೂಲಿಯು ದೊರೆಯುತ್ತದೆ. ಇಂತಹ ಕಾರ್ಮಿಕರ ಪರಿಸ್ಥಿತಿಯು ಉತ್ತಮವಾಗಿದೆ. ಆದರೆ ಬುಡಕಟ್ಟು ಕಾರ್ಮಿಕರ ಪರಿಸ್ಥಿತಿಯೇ ಬೇರೆ, ಅವರ ಬದುಕಂತೂ ಅಯೋಮಯ. ಅವರಿಗೆ ತಮ್ಮದೆಂಬ ಯಾವುದೇ ಸ್ಥಿರ-ಚರವಾದ ಆಸ್ತಿ-ಪಾಸ್ತಿಗಳಿಲ್ಲ. ಏಕೆಂದರೆ ನಮ್ಮ ಘನ ಸರ್ಕಾರಗಳು ಜಾರಿಗೊಳಿಸುವ ಅವೈಜ್ಞಾನಿಕ ನೀತಿ ನಿಯಮಗಳಿಂದಾಗಿ ಬುಡಕಟ್ಟು ಸಮುದಾಯಗಳು ತಮ್ಮ ಮೂಲ ನೆಲೆ ಹಾಗೂ ಮೂಲವೃತ್ತಿಯಿಂದ ಸ್ಥಳಾಂತರಗೊಂಡಿವೆ. ಅವರು ತಮ್ಮ ದಿನನಿತ್ಯದ ಹೊಟ್ಟೆಪಾಡಿಗಾಗಿ, ದೈನಂದಿಕ ಜೀವನದ ಬದುಕಿಗಾಗಿ ಪರ್ಯಾಯ ವೃತ್ತಿಯನ್ನು ಹುಡುಕಿಕೊಳ್ಳುವ ಮತ್ತು ಸುಶಿಕ್ಷಿತ ಮಾನವ ಸಮಾಜದಲ್ಲಿ ನಿರ್ದಿಷ್ಟವಾದ ಸ್ಥಾನವನ್ನು ಪಡೆಯಲು ಹೆಣಗಾಡುತ್ತಿದ್ದಾರೆ. ಅಶಿಕ್ಷಿತರು ಹಾಗೂ ಅಸಂಘಟಿತರು ಆಗಿರುವ ಬುಡಕಟ್ಟುಗಳಿಗೆ ಸಮಾಜದಲ್ಲಿ ಯಾವುದೇ ರೀತಿಯ ಐಡೆಂಟಿಟಿ (Identity) ಅಥವಾ ಅನನ್ಯತೆ ಇಲ್ಲವಾಗಿ, ಆಧುನಿಕ ಸಮಾಜದಿಂದಲೂ ತಿರಸ್ಕಾರಕ್ಕೆ ಒಳಗಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯಲ್ಲಿ ಇನ್ನು ಬೇರೆ, ಬೇರೆ, ಕೆಳಜಾತಿಗಳು, ಅಲ್ಪಸಂಖ್ಯಾತರು, ಹಿಂದುಳಿದವರು ಸೇರಿದ್ದರೂ ಬುಡಕಟ್ಟು ಸಮುದಾಯಗಳಿಗಿಂತಲೂ ಅವರ ಪರಿಸ್ಥಿತಿ ವಿಭಿನ್ನ ಹಾಗೂ ಉತ್ತಮವೆಂದೇ ಹೇಳಬಹುದು.

ವಸಾಹತುಶಾಹಿ ನೆಲೆಯಲ್ಲಿ ಇಂದಿನ ಉತ್ಪಾದನೆ ಹಾಗೂ ವಿತರಣೆಗಳು ನಿರ್ಧರಿಸಲ್ಪಡುವುದರಿಂದ ಉತ್ಪಾದಕರು ತಮ್ಮ ಉತ್ಪಾದನೆಯ ಕಾರ್ಯಚಟುವಟಿಕೆಯನ್ನು ನಿರಂತರವಾಗಿ ಕಾಯ್ದುಕೊಳ್ಳಲು ಉತ್ಪಾದನಾ ಘಟಕದ ಹತ್ತಿರದಲ್ಲಿಯೇ ಕಾರ್ಮಿಕ ಕಾಲೋನಿ ಅಥವಾ ಕ್ಯಾಂಪ್‌ಗಳ ಮಾದರಿಯಲ್ಲಿ

ತಾತ್ಕಾಲಿಕ ವಸತಿ ವ್ಯವಸ್ಥೆಯನ್ನು ಕಾರ್ಮಿಕರಿಗೆ ನಿರ್ಮಿಸಿದ್ದಾರೆ. ತಮ್ಮ ಸ್ವಂತದ್ದಾಗಿರದ ಮತ್ತು ಬೇರೆಕಡೆಯಲ್ಲಿಯು ಸ್ಥಿರವಾಗಿ ನೆಲೆ ನಿಲ್ಲದ, ಬುಡಕಟ್ಟು ಗಣಿಕಾರ್ಮಿಕರು ಅತಂತ್ರ ಸ್ಥಿತಿಯಲ್ಲಿ ಬದುಕನ್ನು ಸಾಗಿಸಬೇಕಾಗಿದೆ. ಇಂತಹ ಸಮುದಾಯಗಳ ಕುಟುಂಬದ ಸ್ವರೂಪ, ಶಿಕ್ಷಣ, ಆದಾಯ, ಜೀವನಮಟ್ಟವನ್ನು ಅವಲೋಕಿಸುವುದರಿಂದ ಸಾಮಾಜಿಕವಾಗಿ ಯಾವ ಸ್ಥಾನಮಾನಗಳು ಬುಡಕಟ್ಟು ಕಾರ್ಮಿಕರಿಗೆ ಲಭ್ಯವಾಗಿವೆ ಎಂಬುದನ್ನು ಕುರಿತು ಅಧ್ಯಯನ ನಡೆಯಬೇಕಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಕೇಂದ್ರೀಕೃತಗೊಂಡಿರುವ ಗಣಿಗಾರಿಕೆಯಲ್ಲಿ ಶೇಕಡ ೭೦ರಷ್ಟು ಕಾರ್ಮಿಕರು ಲಂಬಾಣಿಗಳು, ಬೇಡರು, ಮ್ಯಾಸಬೇಡರು, ಗೊಲ್ಲ ಹಾಗೂ ಬುಡಗ ಇತ್ಯಾದಿ ಬುಡಕಟ್ಟು ಸಮುದಾಯಗಳಿಗೆ ಸೇರಿದ್ದಾರೆ. ಸಮಾಜಶಾಸ್ತ್ರೀಯ ಅಧ್ಯಯನಗಳಲ್ಲಿ ಇವರ ಜೀವನ, ಕಲೆ, ಭಾಷೆ ಮತ್ತು ಸಂಸ್ಕೃತಿಗಳ ಕೂಲಂಕುಶವಾದ ಅಧ್ಯಯನಕ್ಕೆ ಅವಕಾಶವಿರುವುದರಿಂದ ಪ್ರಸ್ತುತ ಅಧ್ಯಯನದಲ್ಲಿ ಅವುಗಳನ್ನು ಅತ್ಯಂತ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಆಧುನೀಕರಣಕ್ಕೊಳಗಾಗಿರುವ ಹಲವಾರು ಬುಡಕಟ್ಟುಗಳು ಮಾತೃ ಪ್ರಧಾನ ಕುಟುಂಬದಿಂದ ಸ್ಥಿತ್ಯಂತರಕ್ಕೊಳಗಾಗಿದ್ದರೂ, ಕುಟುಂಬಕ್ಕೆ ಸಂಬಂಧಿಸಿದ ಮುಖ್ಯವಾದ ವಿಷಯಗಳಲ್ಲಿ ಗಂಡಿನಷ್ಟೇ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಮತ್ತು ಕುಟುಂಬದ ಜವಾಬ್ದಾರಿಯನ್ನು ನಿಭಾಯಿಸುವಲ್ಲಿ ಬುಡಕಟ್ಟು ಸಮುದಾಯದ ಹೆಣ್ಣು ಗಂಡಿನಷ್ಟೇ ಸರಿಸಮಾನಳು. ವಿವಾಹ, ಜನನ, ಮರಣ, ಹಬ್ಬ ಹರಿದಿನಗಳಲ್ಲಿ ಯಾವುದೇ ತಾರತಮ್ಯವನ್ನು ಮಾಡದೇ ಹೆಣ್ಣಿಗೂ ಮುಕ್ತವಾದ ಅಧಿಕಾರಗಳನ್ನು ನೀಡಿವೆ. ಕುಟುಂಬದಲ್ಲಿನ ಹಿರಿಯರ ಹಾಗೂ ಮಕ್ಕಳ ಪಾಲನೆ ಪೋಷಣೆಯ ಜೊತೆಗೆ ಗಂಡಿನಂತೆ ಸರಿಸಮವಾಗಿ ಗಣಿಗಾರಿಕೆಯಲ್ಲಿ ದುಡಿಯುವ ಅಧಿಕಾರವನ್ನು ಪಡೆದುಕೊಂಡಿದ್ದಾಳೆ. ಇದಕ್ಕೆ ಅವರ ಬಡತನವೂ ಒಂದು ಕಾರಣವಾಗಿರುವುದನ್ನು ತಳ್ಳಿಹಾಕುವಂತಿಲ್ಲ. ಆದರೆ ಭಾರತದ ಮಧ್ಯಮ ಹಾಗು ಶ್ರೀಮಂತ ಕುಟುಂಬಗಳಲ್ಲಿನ ಸ್ತ್ರೀಯರಿಗೆ ಇಂತಹ ಸ್ವಾತಂತ್ರ್ಯವನ್ನು ಕಾಣುವುದು ವಿರಳವೆಂದೇ ಹೇಳಬಹುದು. ಏಕೆಂದರೆ ಮೇಲಿನ ಈ ಎರಡು ವರ್ಗದಲ್ಲಿ ನೆಲೆಸಿರುವ ಮಹಿಳೆಯು ಹೆಚ್ಚಾಗಿ ಪುರುಷನನ್ನೇ ಅವಲಂಭಿಸಿರುವುದರಿಂದ, ಪುರುಷನ ಅಧೀನದಲ್ಲಿಯೇ ತನ್ನ ಸುಖ-ಸಂತೋಷ, ಸಂತೃಪ್ತಿಯನ್ನು ಕಂಡುಕೊಳ್ಳಬೇಕಾಗಿದೆ. ಮಹಿಳೆಯನ್ನು ಕೇವಲ ಭೋಗದ ವಸ್ತುವಾಗಿ ಕುಟುಂಬದ ಸೇವಕಳಾಗಿ ಮತ್ತು ಅಲಂಕಾರಿಕ ವಸ್ತುವಾಗಿ ಪರಿಗಣಿಸಿರುವುದರಿಂದ ಅನೇಕ ಸಂಕೋಲೆಗಳ ಮಧ್ಯೆ ಮಹಿಳೆಯು ತನ್ನ ಅಸ್ತಿತ್ವವನ್ನು ಗುರುತಿಸಕೊಳ್ಳಬೇಕಾಗಿದೆ. ಆದರೆ ಅನೇಕ ಬುಡಕಟ್ಟುಗಳಲ್ಲಿ, ದಲಿತರಲ್ಲಿ ಹಾಗೂ ದುಡಿಯುವ ವರ್ಗಗಳಲ್ಲಿನ ಸ್ತ್ರೀಯರು ಹೆಚ್ಚು ಸ್ವಾತಂತ್ರ ಮತ್ತು ಮುಕ್ತ ಅಧಿಕಾರವನ್ನು ಪಡೆದುಕೊಂಡಿದ್ದಾರೆ. ಆದರೂ ಕೆಲವು ಮಹತ್ವದ ನಿರ್ಧಾರಗಳಲ್ಲಿ ಗಂಡೇ ಕುಟುಂಬದ ಮುಂದಾಳತ್ವವನ್ನು ಅಲ್ಲಿಯೂ ವಹಿಸಿಕೊಳ್ಳುವ ಮೂಲಕ ಪುರುಷಾಧಿಪತ್ಯವನ್ನು ಪ್ರತಿಪಾದಿಸಲಾಗುತ್ತಿದೆ.

### ೩.೧. ಕಾರ್ಮಿಕರ ಕುಟುಂಬದ ಸ್ವರೂಪ

ಸಾಂಪ್ರದಾಯಿಕ ಆರ್ಥಿಕ ತಜ್ಞರ ಪ್ರಕಾರ “ಕುಟುಂಬ”ವನ್ನು ಒಂದು “ಅಖಂಡ” ಹಾಗೂ “ಏಕರೂಪಿ” ಘಟಕವನ್ನಾಗಿ ಪರಿಭಾವಿಸಲಾಗುತ್ತದೆ. ಅದು ಮಾನವನ ರಕ್ಷಣೆ ಇಲ್ಲವೇ ಪೋಷಣೆಗೆ ವಿಶೇಷ ಆದ್ಯತೆಯನ್ನು ಕೊಡುವುದಲ್ಲದೇ, ಮನುಕುಲದ ರಕ್ಷಣೆ, ಪೋಷಣೆ, ಬೆಳವಣಿಗೆ ಮತ್ತು ಭದ್ರತೆ ಒದಗಿಸುವ ಸಂಪನ್ಮೂಲವುಳ್ಳ ಕಾರ್ಯಾಗಾರವಾಗಿದೆ ಎನ್ನಬಹುದು. ಕುಟುಂಬವೆಂಬುದು ಸರ್ವ ಸದಸ್ಯರ ಆಶಯಗಳನ್ನು ಮನ್ನಿಸುವ, ಕಾಪಾಡುವ, ವ್ಯಕ್ತಿ-ವ್ಯಕ್ತಿಗಳಲ್ಲಿ ಪರಸ್ಪರ ಸಂಬಂಧಗಳನ್ನು ಗಟ್ಟಿಗೊಳಿಸುವ, ಬೆಳೆಸುವ ಸಂಸ್ಥೆಯಾಗಿದೆ. ಈ ದಿಶೆಯಲ್ಲಿ ಕುಟುಂಬ ಪಾತ್ರ ಬುಡಕಟ್ಟು ಜನಾಂಗದಲ್ಲಿ ಇನ್ನು ಗಮನಾರ್ಹವಾಗಿರುತ್ತದೆ. ಯಾವುದೇ ಕುಟುಂಬದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಕುಟುಂಬದ ಸ್ವರೂಪ ರಚನೆಯು ಮಹತ್ವ ಪೂರ್ಣ ಪಾತ್ರವನ್ನು ನಿರ್ವಹಿಸುತ್ತದೆ. ಕಾರಣ ಪ್ರಸ್ತುತ ಅಧ್ಯಯನದಲ್ಲಿಯೂ ಅಧ್ಯಯನ ಕ್ಷೇತ್ರದ ಬುಡಕಟ್ಟು ಕುಟುಂಬಗಳ ಸ್ವರೂಪವನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಗಣಿಕಾರ್ಮಿಕರು ಹೊಂದಿರುವ ಕುಟುಂಬದ ಪ್ರಮಾಣವನ್ನು ಕೋಷ್ಟಕ ೩.೧ ರಿಂದ ತಿಳಿದುಕೊಳ್ಳಬಹುದು.

**ಕೋಷ್ಟಕ ೩.೧ : ಕಾರ್ಮಿಕ ಕುಟುಂಬಗಳ ಪ್ರಮಾಣ**

| ಮಾಹಿತಿದಾರರ ಸಂಖ್ಯೆ | ವಿವಾಹಿತರು | | | | | ಅವಿವಾಹಿತರು | | | ಒಟ್ಟು | | |
|---|---|---|---|---|---|---|---|---|---|---|---|
| | ಗಂಡು | ವಿಧುರ | ಹೆಣ್ಣು | ವಿಧವೆ | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೨೦೦ | ೨೧೮ | ೧೨ | ೨೮೭ | ೦೫ | ೫೨೨ | ೨೩೨ | ೧೫೮ | ೩೯೦ | ೪೬೨ | ೪೫೦ | ೯೧೨ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈ ಮೇಲಿನ ಕೋಷ್ಟಕ ೩.೧ರ ಪಟ್ಟಿಯನ್ನು ಅವಲೋಕಿಸಿದಾಗ ಗಣಿ ಅವಲಂಬಿತ ಕಾರ್ಮಿಕ ಕುಟುಂಬಗಳು ಹೊಂದಿರುವ ಜನಸಂಖ್ಯೆಯ ಪ್ರಮಾಣವು ತಿಳಿದುಬರುತ್ತದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೇವಲ ೨೦೦ ಗಣಿಕಾರ್ಮಿಕರನ್ನು ಸಂದರ್ಶಿಸಿ, ಅವರ ಕುಟುಂಬದಲ್ಲಿನ ಒಟ್ಟು ಸದಸ್ಯರ ಪ್ರಮಾಣವನ್ನು ಇದು ವ್ಯಕ್ತಪಡಿಸುತ್ತದೆ.

ಬುಡಕಟ್ಟು, ಗಣಿ ಕಾರ್ಮಿಕ ಸಮುದಾಯಗಳು ಅನೇಕ ಪಾರಂಪರಿಕ ನಡತೆ, ಆಚರಣೆ ಮತ್ತು ವಿವಿಧ ಮೌಢ್ಯತೆಗಳಲ್ಲಿದ್ದಾರೆ. ಅವರು ಆಧುನಿಕತೆಯನ್ನಾಗಲೀ, ಶಿಕ್ಷಣದ ಬಗ್ಗೆಯಾಗಲೀ ಮತ್ತು ಜಾಗತೀಕರಣದ ಪರಿಣಾಮಗಳನ್ನಾಗಲೀ ಅರ್ಥ ಮಾಡಿಕೊಳ್ಳುವ ಮನೋಧರ್ಮವನ್ನು ಬೆಳಸಿಕೊಂಡಿಲ್ಲ ವೆಂದೇ ಹೇಳಬಹುದು. ಆದರೆ ಈ ಮೇಲಿನ ಎಲ್ಲ ಪರಿಣಾಮಗಳು ಅವರ ಕುಟುಂಬದ ದುಡಿಮೆ, ಆದಾಯ ಮತ್ತು ಜೀವಮಟ್ಟದ ಮೇಲೆ ವ್ಯತ್ಯಾಸವನ್ನುಂಟು ಮಾಡಿರುವುದನ್ನು ತಳ್ಳಿಹಾಕುವಂತಿಲ್ಲ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಆಯ್ಕೆ ಮಾಡಿಕೊಂಡ ಕೇವಲ ೨೦೦ ಬುಡಕಟ್ಟು ಗಣಿಕಾರ್ಮಿಕ

ಕುಟುಂಬಗಳ ಒಟ್ಟು ಸದಸ್ಯರ ಸಂಖ್ಯೆ ೯೧೨ ರಷ್ಟು ಇರುವುದನ್ನು ಕಂಡಾಗ, ಅವರ ಸಾಂಪ್ರದಾಯಿಕ ಮನೋಧರ್ಮ ಬದಲಾಗದಿರುವುದು ಅರಿವಾಗುತ್ತದೆ. ಕಾರ್ಮಿಕರ ಒಟ್ಟು ಕುಟುಂಬದ ಸದಸ್ಯರಲ್ಲಿ ವಿವಾಹಿತರು ಹಾಗೂ ಅವಿವಾಹಿತರಲ್ಲಿಯು ಸಾಕಷ್ಟು ಅಂತರಗಳಿವೆ. ಅದಕ್ಕಿಂತಲೂ ಮುಖ್ಯವಾಗಿ ಲಿಂಗ ಸಂಬಂಧ ತಾರತಮ್ಯದ ಅಂತರವನ್ನು ಗಮನಿಸಿದಾಗ ಬುಡಕಟ್ಟು ಕುಟುಂಬಗಳಲ್ಲಿಯೂ ಆಧುನಿಕತೆಯ ಲಿಂಗಸಂಬಂಧಿ ವೈಪರಿತ್ಯವನ್ನು ಸ್ಪಷ್ಟವಾಗಿ ಗುರುತಿಸಬಹುದು.

ಬುಡಕಟ್ಟು ಸಮುದಾಯಗಳಲ್ಲಿ "ವಿವಾಹ"ವೆಂಬುದೊಂದು ಕುಟುಂಬದ ಮಹತ್ವಪೂರ್ಣ ಜವಾಬ್ದಾರಿ ಎಂದೇ ಪರಿಭಾವಿಸಲಾಗುತ್ತದೆ. ಹೀಗಾಗಿ ಕುಟುಂಬದ ಸಹ ಸದಸ್ಯ ಗಂಡಾದರೆ ೧೫ ವರ್ಷ ಹೆಣ್ಣಾದರೆ ೧೦ ವರ್ಷಕ್ಕೆ ಕಾಲಿಟ್ಟದ್ದೇ ತಡ ಅವರಿಗೆಲ್ಲಾ ಮದುವೆ ಮಾಡಿ, ಕುಟುಂಬದ ಜವಾಬ್ದಾರಿಯಿಂದ ಕೈತೊಳೆದುಕೊಳ್ಳಬೇಕೆಂಬುದು ಹಿರಿಯರ ಆಸೆ. ಇನ್ನೂ ಹುಡುಗಿಗೆ ೫ ವರ್ಷದ ನಂತರ ಯಾವುದಾದರೂ ಸಂಬಂಧ ಕೂಡಿ ಬಂದರೆ ಅತ್ಯಂತ ಸಂತೋಷ ಹಾಗೂ ಹರ್ಷದಿಂದ ಮದುವೆಮಾಡುತ್ತಾರೆ. ಏಕೆಂದರೆ ಹೆಣ್ಣಿಗೆ ಕಂಕಣಭಾಗ್ಯ ಬೇಗ ದೊರೆತರೆ ಅವರ ಪೂರ್ವಜನ್ಮದ ಫಲವೆಂದೂ, ಸತ್ತನಂತರ ಸ್ವರ್ಗದಲ್ಲಿ ಅವರಿಗೆ ಒಳ್ಳೆಯ ಸ್ಥಾನಮಾನ ದೊರೆಯುತ್ತದೆ ಎಂಬ ನಂಬಿಕೆಯನ್ನು ಹೊಂದಿದ್ದಾರೆ. ಇಂತಹ ಸನ್ನಿವೇಶವು ವಿವಾಹಿತ ಪುರುಷ ಮತ್ತು ಮಹಿಳಾ ಕಾರ್ಮಿಕರ ಪ್ರಮಾಣಗಳಲ್ಲಿನ ವ್ಯತ್ಯಾಸಗಳಿಂದ ಮನಗಾಣಬಹುದು. ಅದರಲ್ಲಿ. ವೈವಾಹಿಕ ಪುರುಷ ಪ್ರಮಾಣ ೨೩೦ರಷ್ಟಿದ್ದರೆ. ಮಹಿಳಾ ಕಾರ್ಮಿಕರಿಲ್ಲಿ ೨೯೨ರಷ್ಟು ಕಂಡುಬರುತ್ತದೆ. ಹಾಗೆಯೇ ಅವಿವಾಹಿತರಲ್ಲಿ ೨೩೨ ಪುರುಷ ಹಾಗೂ ೧೫೮ ಮಹಿಳೆಯರಿದ್ದಾರೆ. ಅವಿವಾಹಿತರ ಪ್ರಮಾಣದಲ್ಲಿ ಸ್ತ್ರೀಯರಿಗಿಂತ ಪುರುಷರ ಪ್ರಮಾಣವು ಹೆಚ್ಚಾಗಿರುವುದನ್ನು ಗಮನಿಸಿದಾಗ ಬುಡಕಟ್ಟು ಕಾರ್ಮಿಕರು ತಮ್ಮ ಪೂರ್ವಿಕರ ಬಹಳಷ್ಟು ಆಚರಣೆಗಳನ್ನು ಚಾಚು ತಪ್ಪದೇ ಪಾಲಿಸುತ್ತಿರುವುದು ದೃಢಪಡಿಸುತ್ತದೆ. ಗಣಿಕಾರ್ಮಿಕರಲ್ಲಿ ವಿವಾಹಿತರ ಸಂಖ್ಯೆ ೫೨೨ ಇದ್ದರೆ, ಅವಿವಾಹಿತರ ಸಂಖ್ಯೆ ೩೯೦ ಇರುವುದು ಬುಡಕಟ್ಟು ಕುಟುಂಬಗಳಲ್ಲಿರುವ ಸಂಪ್ರದಾಯಗಳ ಆಚರಣೆಯ ಪರಿಭಾವನೆಗೆ ಪೂರಕವಾಗಿ ನಿಲ್ಲುತ್ತದೆ.

ಬುಡಕಟ್ಟು ಗಣಿಕಾರ್ಮಿಕರ ವಿವಾಹಿತರಲ್ಲಿಯು ಗಂಡಸರಲ್ಲಿ ೨೩೦ ಇದ್ದರೆ ಅದರಲ್ಲಿ ವಿಧರರು ೧೨ ಹಾಗೂ ಹೆಂಗಸರು ೨೯೨ರಲ್ಲಿ ವಿಧವೆಯರು ೦೫ ಇರುವುದನ್ನು ಕಂಡಾಗ ಹೆಣ್ಣನ್ನು ಆದಷ್ಟು ಬೇಗ ವಿವಾಹಕ್ಕೆ ಒಳಪಡಿಸಿ, ಕುಟುಂಬದ ಹಿರಿಯರು ತಮ್ಮ ಜವಾಬ್ದಾರಿಯಿಂದ ನುಣುಚಿಕೊಳ್ಳುವ ತಂತ್ರವನ್ನು ಅನುಸರಿಸುವುದಾಗಿದೆ. ಹಾಗೆಯೇ ಅವಿವಾಹಿತರ ಬಗ್ಗೆ ಗಣಿಕಾರ್ಮಿಕರಲ್ಲಿ ಸಂಕುಚಿತ ಅಭಿಪ್ರಾಯವುಂಟು. ಕುಟುಂಬದ ತಂದೆ-ತಾಯಿಗಳು ತಮ್ಮ ಮಕ್ಕಳಿಗೆ ಮದುವೆ-ಮುಂಜಿ-ಹಿರಿಯರಿಗೆ ಗೌರವ ಹೆಣ್ಣಿನ ರಕ್ಷಣೆಯಂಥ ಕಾರ್ಯಗಳನ್ನು ನಿರ್ವಹಿಸುವುದರಿಂದ ತಮಗೆ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆಯನ್ನು ಹೊಂದಿದ್ದಾರೆ. ಹೀಗಾಗಿ ತಮ್ಮ ಮಕ್ಕಳನ್ನು ಬೇಗನೆ ಸಂಸಾರದ ಸುಖಕ್ಕೆ

ಒಳಪಡಿಸುವುದರಿಂದ ಸುಖದ ಸಂಪೂರ್ಣತೆಯನ್ನು ಹೊಂದುವುದರ ಜೊತೆಗೆ ಕುಟುಂಬದ ತಾಪತ್ರಯಗಳಲ್ಲಿ ಅವರು ಸಹ ಪಾಲ್ಗೊಳ್ಳಲು ಸಾಧ್ಯವಾಗುತ್ತದೆ. ಇದರಿಂದ ಸಂಸಾರದ ಸಮಸ್ಯೆಗೆ ಶೀಘ್ರ ಪರಿಹಾರವನ್ನು ಕುಂಡುಕೊಳ್ಳಬಹುದು. ಎಂಬ ನಂಬಿಕೆ ಇದೆ. ಇದಕ್ಕಾಗಿ ಅವಿವಾಹಿತರಲ್ಲಿ ೨೩.೨ ಗಂಡಸರಿದ್ದರೆ, ಹೆಂಗಸರ ಪ್ರಮಾಣ ೧೫೮ ಇರುವುದನ್ನು "ವಿವಾಹ" ಹೆಂಗಸರಿಗೆ ತುಂಬಾ ಕಡ್ಡಾಯವಾಗಿರುವುದರಿಂದ ವಿವಾಹಿತ ಗಂಡು-ಹೆಣ್ಣುಗಳಲ್ಲಿನ ವ್ಯತ್ಯಾಸಕ್ಕೆ ಪ್ರಮುಖ ಕಾರಣವಾಗಿದೆ.

ಪ್ರಸ್ತುತ ಸನ್ನಿವೇಶದಲ್ಲಿ ವಿಶ್ವದಾದ್ಯಂತ ತುಂಬಾ ಚರ್ಚೆಗೆ ಅನುವುಮಾಡಿಕೊಡುತ್ತಿರುವ ಲಿಂಗ ಸಂಬಂಧಿ ತಾರತಮ್ಯದ ಪ್ರಮಾಣವು ಬುಡಕಟ್ಟು, ಗಣಿ ಕಾರ್ಮಿಕರಲ್ಲಿಯು ಗೋಚರಿಸುತ್ತದೆ. ಪ್ರೊ. ಅಮರ್ತ್ಯಸೇನ್ ರಿಂದ ಜನಪ್ರಿಯತೆಗೆ ಬಂದ ಅಧ್ಯಯನವೆಂದರೆ "ಮಿಸ್ಸಿಂಗ್ ಮಹಿಳೆಯರು ಅಥವಾ ಕಣ್ಮರೆಯಾದ ಮಹಿಳೆಯರನ್ನು ಹುಡುಕುವ ಅವರ ಕ್ರಮವನ್ನು ವಿಶ್ವದ ಎಲ್ಲಾ ರಾಷ್ಟ್ರಗಳು ತುಂಬಾ ಗಂಭೀರವಾಗಿ ಪರಿಗಣಿಸಿವೆ. ಇಂತಹ ಕ್ರಮವು ಲಿಂಗವಾರು ಅಂತರದಲ್ಲಿನ ವ್ಯತ್ಯಾಸಕ್ಕೆ ಸಂಬಂಧಿಸಿದ ಚರ್ಚೆಯಾಗಿದೆ. ಯಾವುದೇ ರಾಷ್ಟ್ರ ಅಥವಾ ಪ್ರದೇಶದ ಒಟ್ಟು ಜನಸಂಖ್ಯೆಯಲ್ಲಿರುವ ಹೆಣ್ಣು-ಗಂಡುಗಳಲ್ಲಿನ ವ್ಯತ್ಯಾಸದ ಪ್ರಮಾಣದಿಂದಲೇ ಆ ದೇಶದ ಸಮಾಜ, ಸಮುದಾಯಗಳ ಆರೋಗ್ಯ, ಆದಾಯ, ಶಿಕ್ಷಣ, ಜೀವನ ಮಟ್ಟಗಳನ್ನು ತಿಳಿದುಕೊಳ್ಳಬಹುದೆಂಬ ಅಮರ್ತ್ಯಸೇನ್‌ರ ದೂರದೃಷ್ಟಿತ್ವದ ನೀತಿಯು ವಿಶ್ವದ ಪ್ರಶಂಸೆಗೆ ಪಾತ್ರವಾಗಿದೆ.' ಇದರಲ್ಲಿ ಪ್ರತಿಸಾವಿರ ಪುರುಷರಿಗೆ ಪ್ರತಿಯಾಗಿ ಲಭ್ಯವಿರುವ ಮಹಿಳೆಯರ ಪ್ರಮಾಣವನ್ನು ಕಂಡುಕೊಳ್ಳುವುದಾಗಿರುತ್ತದೆ. ಸಹ ಕಾರ್ಮಿಕ ಕುಟುಂಬದಲ್ಲಿರುವ ಒಟ್ಟು ಗಂಡು ಹೆಣ್ಣುಗಳಲ್ಲಿ ಲಿಂಗಸಂಬಂಧಿ ಅನುಪಾತವಿರುವುದನ್ನು ತೋರಿಸುತ್ತದೆ. ಒಟ್ಟು ಪುರುಷರ ಸಂಖ್ಯೆ ೪೬.೨ ಇದ್ದರೆ ಒಟ್ಟು ಮಹಿಳೆಯರ ಸಂಖ್ಯೆ ೪೫೦ರಷ್ಟಿದೆ. ಇಲ್ಲಿ ಪುರುಷನಿಗೆ ಸರಿಸಮವಾಗಿ ಮಹಿಳೆಯರ ಉತ್ಪಾದನೆಯಾಗದೇ ೧.೨ ಮಹಿಳೆಯರ ಸಂಖ್ಯೆ ಪುರುಷರಿಗಿಂತ ಕಡಿಮೆಯಾಗಿದೆ. ಇಂತಹ ಬೆಳವಣಿಗೆಯು ಆಯಾದೇಶಗಳು ಅನುಸರಿಸುತ್ತಿರುವ ಮಹಿಳೆಯ ಬಗ್ಗೆ ಇರುವ ಅನಾದರಣೆ, ತಾರತಮ್ಯ ನೀತಿ, ಪುರುಷರ ಬಗ್ಗೆಯಿರುವ ಶ್ರೇಷ್ಠತಾವಾದಗಳಿಂದಾಗಿ ಆಯಾ ಸಮಾಜ, ದೇಶಗಳು ಅನುಸರಿಸುತ್ತಿರುವ ಪುರುಷಾಧಿಪತ್ಯವನ್ನು ಸೂಕ್ಷ್ಮವಾಗಿ ಸ್ಪಷ್ಟಪಡಿಸುತ್ತದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಕುಟುಂಬವು ತನ್ನೆಲ್ಲಾ ಸದಸ್ಯರ ಹಿತಾಸಕ್ತಿಗಳನ್ನು ಸಮಾನವಾಗಿ ಕಾಣುವ, ಕಾಯುವ ಹಾಗೂ ಪೋಷಿಸುವ ಒಂದು ಬದಲಾವಣೆಯಾಧಾರಿತ ವ್ಯವಸ್ಥೆಯೆಂದೇ ಭಾವಿಸಲಾಗಿದೆ. ಹೇಗೆಂದರೆ ಕುಟುಂಬದೊಳಗೆ ಇಲ್ಲವೇ ಹೆಣ್ಣುಗಂಡುಗಳ ನಡುವೆ ಇರುವ ಅಧಿಕಾರ, ತೀರ್ಮಾನ ಮತ್ತು ಆಸ್ತಿಯ ಒಡೆತನಕ್ಕೆ ಸಂಬಂಧಿಸಿದಂತೆ ಅವಿಭಕ್ತ ಕುಟುಂಬದ ಸ್ವರೂಪದಲ್ಲಿ ಯಾವುದೇ ಭಿನ್ನತೆಯನ್ನು ಗುರುತಿಸುವುದಿಲ್ಲ.

ಭಾರತದ ಸಾಮಾಜಿಕ ಪರಂಪರೆಯಲ್ಲಿ ಕುಟುಂಬದ ಬೆಳವಣಿಗೆಗೆ ಧೀರ್ಘವಾದ ಚರಿತ್ರೆ ಉಂಟು. ಇಂತಹ ಸಂಕೀರ್ಣತೆಯಿಂದೊಡಗೂಡಿದ ಕುಟುಂಬದ ವ್ಯವಸ್ಥೆಯು ಬುಡಕಟ್ಟು ಕಾರ್ಮಿಕರಲ್ಲಿ ನಾನಾ ಸ್ವರೂಪಗಳಲ್ಲಿ ಕಂಡುಬರುತ್ತದೆ. ಕುಟುಂಬದಲ್ಲಿನ ಎಲ್ಲಾ ವಿಷಯಗಳಿಗೆ ಸಂಬಂಧಿಸಿದಂತೆ ನಿರ್ಧಾರವನ್ನು ತೆಗೆದುಕೊಳ್ಳುವ ಅಧಿಕಾರದ ಆಧಾರದ ಮೇಲೆ ಮಾತೃಪ್ರಧಾನ ಹಾಗೂ ಪಿತೃಪ್ರಧಾನ ಮಾದರಿಯ ಕುಟುಂಬ ವ್ಯವಸ್ಥೆಯು ರೂಪಗೊಂಡಿತು. ಕಾಲಕ್ರಮೇಣ ಆಧುನೀಕರಣ, ಕೈಗಾರೀಕರಣ ಹಾಗೂ ತಾಂತ್ರಿಕರಣವು ಬೆಳೆದಂತೆಲ್ಲಾ ಕುಟುಂಬದ ಗಾತ್ರ ಬದಲಾಗುತ್ತಾ ಅವಿಭಕ್ತ ಹಾಗು ವಿಭಕ್ತ ಪದ್ಧತಿಯ ಕುಟುಂಬಗಳ ಸ್ವರೂಪವಾಗಿ ಬದಲಾವಣೆಗೊಂಡಿದೆ. ಪಾರಂಪರಿಕವಾಗಿ ಬೆಳೆದುಬಂದ ವ್ಯವಸ್ಥೆಯು ಅವಿಭಕ್ತ ಕುಟುಂಬವೆಂದೆನಿಸಿದರೆ, ಆಧುನೀಕತೆಯ ಕೊಡುಗೆಗಳೆಂದೇ ಪರಿಭಾವಿಸುವ ತಾಂತ್ರಿಕತೆ, ನಗರೀಕರಣ, ಶಿಕ್ಷಣ ಹಾಗೂ ಕೈಗಾರೀಕರಣಗಳ ಕೂಸೆಂದು ಕರೆಯಲ್ಪಡುವ ವಿಭಕ್ತ ಕುಟುಂಬಗಳು ತಮ್ಮದೇ ಆದ ಬೇರೆ, ಬೇರೆ ಲಕ್ಷಣಗಳನ್ನು ಹೊಂದಿವೆ. ಅವುಗಳು ಪ್ರಸ್ತುತ ಸಮಾಜ ಹಾಗೂ ಕುಟುಂಬಗಳ ಮೇಲೆ ಅನೇಕ ನಿಯಂತ್ರಣಗಳನ್ನು ಸಾಧಿಸಿವೆ. ಇಂತಹ ಸಂವಾದಿ ಪ್ರಕ್ರಿಯೆಗಳು ಭಾರತೀಯ ಸಮಾಜದ ಒಂದು ಭಾಗವೆಂದೇ ಪರಿಗಣಿತವಾದ ಬುಡಕಟ್ಟು ಗಣಿಕಾರ್ಮಿಕರಲ್ಲಿರುವ ಕುಟುಂಬದ ಸ್ವರೂಪ ಮತ್ತು ಅವುಗಳ ಗಾತ್ರದ ಬಗ್ಗೆ ೩.೨ರ ಕೋಷ್ಟಕದಿಂದ ಅರಿಯಬಹುದು.

**ಕೋಷ್ಟಕ ೩.೨ : ಗಣಿ ಕಾರ್ಮಿಕರ ಕುಟುಂಬಗಳ ಸ್ವರೂಪ**

| ಕ್ರ.ಸಂ. | ವಿವರಗಳು | ಅವಿಭಕ್ತ ಕುಟುಂಬ | ವಿಭಕ್ತ ಕುಟುಂಬ | ಒಟ್ಟು |
|---|---|---|---|---|
| ೧. | ಮಾಹಿತಿದಾರರು | ೫೦ | ೧೫೦ | ೨೦೦ |
| ೨. | ಶೇಕಡವಾರು | ೨೫ | ೭೫ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಕೋಷ್ಟಕ ೩.೨ರಲ್ಲಿ ಬಳ್ಳಾರಿ ಜಿಲ್ಲೆಯ ಬುಡಕಟ್ಟು ಸಮುದಾಯಗಳು ಒಳಗೊಂಡಿರುವ ಕುಟುಂಬದ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ. ಕುಟುಂಬದ ಸ್ವರೂಪಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದಲ್ಲಿ ಲಭ್ಯವಾದ ಮಾಹಿತಿಗಳ ಆಧಾರದ ಮೇಲೆ ಬುಡಕಟ್ಟು ಗಣಿಕಾರ್ಮಿಕರು ಆಧುನಿಕತೆಗೆ ಒಳಗಾಗಿ, ಕೈಗಾರೀಕರಣದ ಪ್ರಕ್ರಿಯೆಗೆ ಮನಸೋತಿದ್ದಾರೆ. ಎಂಬುದನ್ನು ಕೇವಲ ಶೇಕಡ ೨೫ ರಷ್ಟಿರುವ ಅವಿಭಕ್ತ ಕುಟುಂಬದ ಪದ್ಧತಿಯು ಧೃಡಪಡಿಸುತ್ತದೆ. ಇದಕ್ಕೆ ಸಮಸ್ಯೆಗಳ ಆಗರವಾದ ಆಧುನಿಕತೆಯು ಕೆಳವರ್ಗ ಹಾಗೂ ಮಧ್ಯಮ ವರ್ಗದ ಕುಟುಂಬದ ಸ್ವರೂಪವನ್ನೇ ಬುಡಮೇಲುಗೊಳಿಸಲು ಶಕ್ತವಾಗಿದೆ.

ಅವಿಭಕ್ತ ಕುಟುಂಬ ಅಥವಾ ಕೂಡು ಕುಟುಂಬಗಳಲ್ಲಿರುವ ಎಲ್ಲಾ ಸದಸ್ಯರನ್ನು ಪೋಷಿಸುವ ಹಾಗೂ ಬೆಳೆಸುವ ಹಕ್ಕುದಾರಿಕೆಯು ಕುಟುಂಬದ ಎಲ್ಲಾ ಸದಸ್ಯರಿಗೂ ಸೇರಿರುತ್ತದೆ. ಇಲ್ಲಿ ವೈಯಕ್ತಿಕ

ಆಸೆ, ಆಕಾಂಕ್ಷೆ, ಒತ್ತಾಸೆಗಳಿಗಿಂತಲೂ, ಸಾಮೂಹಿಕವಾದ ಭಾವನೆಗಳಿಗೆ ಹೆಚ್ಚು ಮನ್ನಣೆಯಿರುತ್ತದೆ. ಕುಟುಂಬದಲ್ಲಿನ ಯಾವೊಬ್ಬ ಸದಸ್ಯನಿಗೆ ಕಾಡುವ ಅನಾರೋಗ್ಯ, ನಿರುದ್ಯೋಗ, ಬಡತನಗಳಂತಹ ಅಂಶಗಳು ಸಮಸ್ಯೆಗಳೆಂದೆನಿಸದೇ ಅವುಗಳ ಪರಿಹಾರಕ್ಕಾಗಿ ಸರ್ವರ ಪ್ರಯತ್ನ ಹಾಗೂ ಕುಟುಂಬದ ಕಾರ್ಯ ಯೋಜನೆಗಳು ರೂಪಗೊಳ್ಳುತ್ತವೆ. ಆದರೆ ಪ್ರಸ್ತುತ ವಿಶ್ವದ ಎಲ್ಲ ರಾಷ್ಟ್ರಗಳಲ್ಲಿಯು ಜನರಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದೇ ದೊಡ್ಡ ಸಮಸ್ಯೆಯಾಗಿರುವಾಗ ಜನ ಸಮುದಾಯಗಳಿಗೆ ಅಗತ್ಯವಾದ ಆಹಾರ, ವಸತಿ, ಶಿಕ್ಷಣ, ಸಾರಿಗೆ, ವಿದ್ಯುಚ್ಛಕ್ತಿ, ಉದ್ಯೋಗ, ಇತ್ಯಾದಿ ಸೌಕರ್ಯಗಳಿಗೆ ಸರ್ಕಾರಗಳು ಕೋಟಿಗಟ್ಟಲೇ, ಹಣವನ್ನು ವೆಚ್ಚ ಮಾಡುತ್ತಿವೆ. ಆದರೂ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಸಮಾಜದಲ್ಲಾಗಿರುವ ಅನೇಕ ಬದಲಾವಣೆಗಳು ಕುಟುಂಬದ ಸ್ವರೂಪವನ್ನು ಬದಲಾಯಿಸಲು ಶಕ್ತವಾಗಿವೆ. ಹಾಗೆಯೇ ಮೂಲಭೂತ ಸಮಸ್ಯೆಗಳ ಹೆಚ್ಚಾಳಕ್ಕೆ ಅವಿಭಕ್ತ ಕುಟುಂಬ ವ್ಯವಸ್ಥೆಯ ನಾಶವೂ ಒಂದು ಕಾರಣವೆಂದೆನ್ನಬಹುದು. ಹೇಗೆಂದರೆ, ಅವಿಭಕ್ತ ಕುಟುಂಬ ಪದ್ಧತಿಯಲ್ಲಿ ಸಾಮೂಹಿಕವಾಗಿ ಆಹಾರ ತಯಾರಿಕೆ, ಕೆಲಸಗಳಲ್ಲಿ ತೊಡಗುವಿಕೆ, ವಿಶ್ರಾಂತಿ ಪಡೆಯುವಿಕೆ, ವಿದ್ಯುಚ್ಛಕ್ತಿ, ವಾಹನಗಳ ಬಳಸುವಿಕೆ, ಗೃಹಕೈಗಾರಿಕೆಗಳಾದ ಚರ್ಮ, ವಸ್ತ್ರ, ಮಡಿಕೆ, ಚಾಪೆ, ಇನ್ನಿತರ ಗೃಹಪಯೋಗಿ ವಸ್ತ್ರಗಳ ಬಳಕೆಗೆ ಸಂಬಂಧಿಸಿದಂತೆ ಪ್ರತ್ಯೇಕತೆಯ ಅವಶ್ಯಕತೆ ಇರುವುದಿಲ್ಲ. ಆದರೆ ಏಕ ಅಥವಾ ವಿಭಕ್ತ ಕುಟುಂಬಗಳಲ್ಲಿ ಪ್ರತ್ಯೇಕವಾಗಿ ಈ ಮೇಲಿನ ಎಲ್ಲಾ ಬೇಡಿಕೆಗಳನ್ನು ಪೂರೈಸಬೇಕಾಗುವುದರಿಂದ ಸಮಸ್ಯೆಗಳು ಉಲ್ಬಣಗೊಳ್ಳುತ್ತಾ ಸಾಗುತ್ತವೆ. ಈ ಕುಟುಂಬಗಳಲ್ಲಿ ವ್ಯವಹಾರಿಕತೆ, ಕ್ರೌರ್ಯ ಹಾಗು ಪ್ರತ್ಯೇಕತೆಗಳು ಪ್ರಧಾನವಾಗಿ ಕಂಡುಬರುತ್ತವೆ. ಆದರೆ ಅವಿಭಕ್ತ ಕುಟುಂಬಗಳು ಸಾಮುದಾಯಿಕವಾದ ಅನುಕಂಪ, ಸಹಕಾರ ಹಾಗೂ ನೈತಿಕತೆಯ ತಳಹದಿಯನ್ನು ಪಡೆದುಕೊಂಡಿರುವುದರಿಂದ ಅಂತಹ ಕುಟುಂಬವು ಸಮಾಜದಲ್ಲಿ ಶಾಂತಿ, ಶಿಸ್ತು, ಸಹನೆ, ಪ್ರೀತಿ, ನಂಬಿಕೆಗಳಿಂದಾಗಿ, ಸಂತೋಷದಾಯಕ ಜೀವನವು ಅವಿಭಕ್ತ ಕುಟುಂಬದ್ದಾಗಲು ಸಾಧ್ಯವಾಗುತ್ತದೆ. ಇಂದಿನ ಕೈಗಾರೀಕರಣದಿಂದಾಗಿ ದೊಡ್ಡ ದೊಡ್ಡ ನಗರ, ಪಟ್ಟಣಗಳಲ್ಲಿ ವಿವಿಧ ಉತ್ಪಾದನಾ ಚಟುವಟಿಕೆಗಳು ಕೇಂದ್ರೀಕೃತಗೊಳ್ಳುವುದರಿಂದ ಆಧುನೀಕತೆಯ ಆಕರ್ಷಣೆಗೆ ಜನ ಸಮುದಾಯಗಳು ಮನಸೋತು ಇಲ್ಲವೇ ಉದ್ಯೋಗವನ್ನು ಅರಸಿ ನಗರ, ಪಟ್ಟಣಗಳಿಗೆ ವಲಸೆ ಹೋಗಲು ಪ್ರಾರಂಭವಾದ ನಂತರ ಸಾಂಪ್ರದಾಯಿಕ ಅವಿಭಕ್ತ ಕುಟುಂಬ ವ್ಯವಸ್ಥೆ ಮುರಿದು ಬಿದ್ದು, ವಿಭಕ್ತ ಕುಟುಂಬಗಳ ಪ್ರಮಾಣ ಹೆಚ್ಚಾಗಲು ಕಾರಣವಾಗಿದೆ. ಇದಕ್ಕಾಗಿಯೇ

ವಿಭಕ್ತ ಕುಟುಂಬ ಅಥವಾ ಸಣ್ಣ ಕುಟುಂಬ ವ್ಯವಸ್ಥೆಯು ಆಧುನಿಕತೆ ಹಾಗೂ ಕೈಗಾರೀಕರಣದ ಕೊಡುಗೆಯೆಂದೇ ಕರೆಯಲಾಗುತ್ತದೆ. ಸಾಂಪ್ರದಾಯಿಕ ಕೂಡು ಕುಟುಂಬಕ್ಕೆ ಪ್ರತಿರೂಪವಾಗಿ ಬೆಳೆದುಬಂದ

ವಿಭಕ್ತ ಕುಟುಂಬಗಳಲ್ಲಿ ಕೇವಲ ತಂದೆ-ತಾಯಿ, ಅವಿವಾಹಿತ ಮಕ್ಕಳಿಂದ ಕೂಡಿರುತ್ತದೆ. ಇಲ್ಲಿ ಪ್ರತಿಯೊಬ್ಬ ಸದಸ್ಯರಿಗೆ ವೈಯಕ್ತಿಕ ಸ್ವಾತಂತ್ರ್ಯವಿದ್ದು, ಯಾವುದೇ ಕೌಟುಂಬಿಕ ನಿಯಂತ್ರಣವಿಲ್ಲದೆ ಸದಸ್ಯರಿಗೆ ಹೆಚ್ಚು ಸ್ವಾತಂತ್ರ್ಯವಿರುತ್ತದೆ. ಇಲ್ಲಿ ಕುಟುಂಬದ ಅಭಿವೃದ್ಧಿಗಿಂತಲೂ ವ್ಯಕ್ತಿಯ ಅಭಿವೃದ್ಧಿಗೆ ಹೆಚ್ಚು ಅವಕಾಶಗಳಿರುತ್ತವೆ. ಹೀಗಾಗಿ ದಿನೇ ದಿನೇ ಹತ್ತಾರು ಬೇಡಿಕೆಗಳ ಪಟ್ಟಿ ಬೆಳೆಯುತ್ತಾ ಸಾಗಿದೆ. ಇಂತಹ ನಡುವಳಿಕೆಯು ಸಮಾಜ, ಸರ್ಕಾರ, ರಾಷ್ಟ್ರಗಳ ಮೇಲೆ ಹೆಚ್ಚು ಒತ್ತಡಕ್ಕೆ ಕಾರಣವಾಗಿ ಹಲವಾರು ವೈಪರೀತ್ಯಗಳ ಬೆಳವಣಿಗೆಗೆ ಸಹಕಾರಿಯಾಗಿದೆ.

ವಿಭಕ್ತ ಕುಟುಂಬಗಳ ಬೆಳವಣಿಗೆಯಿಂದ ವಸತಿ, ಉದ್ಯೋಗ, ಸಾರಿಗೆ, ಸೇವಾ ವಲಯಗಳಿಗೆ ವಿಪರೀತವಾದ ಬೇಡಿಕೆ ಉಂಟಾಗಿ ಅವುಗಳ ಬೆಲೆ ಏರಿಕೆ, ಬೆಲೆಯ ತೀವ್ರತೆ, ವಸ್ತುಗಳ ಕೊರತೆ, ಪರಸ್ಪರ ಪೈಪೋಟಿಯಿಂದಾಗಿ ಸಮಾಜವನ್ನು ಅಸಂತೃಪ್ತಿಗೊಳಿಸಿವೆ. ಇಂತಹ ವಿಭಕ್ತ ಕುಟುಂಬಗಳ ಪ್ರಮಾಣ ಶೇಕಡ ೭೫ ರಷ್ಟಿರುವುದರಿಂದ ಬುಡಕಟ್ಟು, ಗಣಿ ಕಾರ್ಮಿಕರಲ್ಲಿಯು ಉದ್ಯೋಗ, ವಸತಿ, ಆಹಾರ, ಆರೋಗ್ಯ, ಉಡುಪು ಹಾಗೂ ಅಂತಸ್ತುಗಳ ಸಮಸ್ಯೆ ಉತ್ತುಂಗಾವಸ್ಥೆಯನ್ನು ತಲುಪಿದೆ. ಅವುಗಳನ್ನು ಪಡೆಯಲು ಪರಸ್ಪರ ಪೈಪೋಟಿ, ನಿರುತ್ಸಾಹ, ಅಸಮಾನತೆಗಳು ಕಾರ್ಮಿಕರಲ್ಲಿ ತಮ್ಮ ಸುತ್ತಲಿನ ವ್ಯವಸ್ಥೆಯ ಬಗ್ಗೆ ದ್ವೇಷ, ಅಸೂಯೆ, ಅಶಾಂತಿ, ಅವಿಶ್ವಾಸವನ್ನು ಹುಟ್ಟುಹಾಕುವಲ್ಲಿ ವಿಭಕ್ತ ಕುಟುಂಬದ ಸ್ವರೂಪ ಶಕ್ತವಾಗಿದೆ. ಈ ಹಿನ್ನೆಲೆಯಲ್ಲಿ ಇಂದು ಇಡೀ ಜಗತ್ತೀನಾದ್ಯಂತ ಕುತೂಹಲ, ಭಯ, ಕೋಲಾಹಲಗಳಿಗೆ ಕಾರಣವಾಗುತ್ತಿರುವ ವೃದ್ಧಾಶ್ರಮಗಳ ಹುಟ್ಟು ಮತ್ತು ಬೆಳವಣಿಗೆಯ ವಿಷಯವು ಇವತ್ತಿನ ವಿಭಕ್ತ ಕುಟುಂಬಗಳ ಬೆಳವಣಿಗೆಯೇ ಕಾರಣವೆಂದು, ತುಂಬಾ ಗಂಭೀರವಾದ ಚರ್ಚೆ, ಸಂವಾದಗಳಿಗೆ ಎಡೆಮಾಡಿಕೊಟ್ಟಿದೆ. ಕೈಗಾರೀಕರಣದ ಪ್ರಕ್ರಿಯೆಗಳಿಂದಾಗಿ ಉದ್ಯೋಗವನ್ನು ಹುಡುಕಿಕೊಂಡು ಪಟ್ಟಣಗಳಿಗೆ ವಲಸೆ ಹೋಗುವವರ ಪ್ರಮಾಣವು ದಿನದಿಂದ ದಿನಕ್ಕೆ ಹೆಚ್ಚಾಗಿದೆ. ತಮ್ಮ ದೈನಂದಿನ ಜೀವನದ ಸಂಘರ್ಷದಿಂದ ಪಾರಾಗಲು ಉದ್ಯೋಗಕ್ಕಾಗಿ ಪುರುಷ ಹಾಗೂ ಮಹಿಳೆಯರಿಬ್ಬರೂ ಉದ್ಯೋಗವನ್ನು ಪಡೆಯಲು ಪೈಪೋಟಿಗಿಳಿದಿದ್ದಾರೆ. ಇದಕ್ಕೆ ದಿನೇ ದಿನೇ ಹೆಚ್ಚುತ್ತಿರುವ ಬೆಲೆ ಏರಿಕೆಯಿಂದ ದಿನನಿತ್ಯ ಕುಟುಂಬದಲ್ಲಿ ವೆಚ್ಚವನ್ನು ಭರಿಸಲು ಕುಟುಂಬದ ಸದಸ್ಯನೊಬ್ಬನಿಂದಲೇ ಸಾಧ್ಯವಾಗದ ಕಾರಣ ಅನಿವಾರ್ಯವಾಗಿ ಕುಟುಂಬವು ಮಹಿಳೆಯ ದುಡಿಮೆಯನ್ನು ಅವಲಂಬಿಸಬೇಕಾಗಿದೆ. ವಿಭಕ್ತ ಕುಟುಂಬದಲ್ಲಿ ಮಹಿಳೆ ಹಾಗು ಪುರುಷರಿಬ್ಬರು ಕೈಗಾರಿಕೆಗಳಲ್ಲಿ ದುಡಿಯಲು ಹೊರಗೆ ಹೋಗುವುದರಿಂದ ಮನೆಯಲ್ಲಿರುವ ಹಿರಿಯರ ರಕ್ಷಣೆ ಹಾಗು ಪೋಷಣೆಗೆ ಅವಕಾಶವೇ ಇಲ್ಲವಾಗಿದೆ. ದುಡಿಯುವ ಕುಟುಂಬಗಳು ತಮ್ಮ ಕುಟುಂಬದ ತಂದೆ ತಾಯಿ, ತಾತಾ ಅಜ್ಜಿಯವರ ನಿರ್ವಹಣೆಗಾಗಿ ಬೇರೆ ಬೇರೆ ಸಂಘಸಂಸ್ಥೆಗಳಲ್ಲಿ ಹಣವನ್ನು ಪಾವತಿಸುವ ಮೂಲಕ ವೃದ್ಧಾಶ್ರಮದ ಬೆಳವಣಿಗೆಗೆ ಪ್ರೋತ್ಸಾಹಿಸುತ್ತಿದ್ದಾರೆ.

ಹೀಗಾಗಿ ಚಿಕ್ಕಕುಟುಂಬ ಅಥವಾ ವಿಭಕ್ತ ಕುಟುಂಬಗಳು ಮಾನವೀಯ ಮೌಲ್ಯಗಳಿಗಿಂತ ವಾಸ್ತವಿಕ ಅಂಶಗಳಿಗೆ ಹೆಚ್ಚು ಒತ್ತು ನೀಡುತ್ತವೆ. ಆದರೆ ಸಮಾಜಶಾಸ್ತ್ರಜ್ಞರು ಹಾಗೂ ಮನಶಾಸ್ತ್ರಜ್ಞರ ಪ್ರಕಾರ ಇಂತಹ ಕ್ರಮವು ಅಮಾನವೀಯವಾದುದು. ತಮ್ಮ ಭವಿಷ್ಯದ ಕನಸುಗಳಾದ ಮಕ್ಕಳ ಲಾಲನೆ-ಪಾಲನೆಗೈದ ಹಿರಿಯರನ್ನು ಕೊನೆಯ ದಿನಗಳಲ್ಲಿ ಸಂತೋಷದಿಂದ, ನಗು ನಗುತಾ ಕಳೆಯುವುದನ್ನು ಅವರಿಂದ ಕಸಿದುಕೊಳ್ಳಲಾಗುತ್ತಿದೆ. ಅಲ್ಲದೆ ಇಂದಿನ ಬಹಳಷ್ಟು ವೃದ್ಧಾಶ್ರಮಗಳು ವ್ಯಾಪಾರಿ ಮನೋ ಭಾವನೆಯನ್ನು ಪಡೆದುಕೊಂಡಿರುವುದನ್ನು ಪತ್ರಿಕೆ, ದೂರದರ್ಶನಗಳಲ್ಲಿ ಪ್ರಕಟಗೊಳ್ಳುತ್ತಿರುವ ಸುದ್ಧಿ ವಿಶ್ಲೇಷಣೆಗಳೇ ಇದಕ್ಕೆ ಸಾಕ್ಷಿ. ವಿಭಕ್ತ ಕುಟುಂಬಗಳಲ್ಲಿ ತಮ್ಮ ಮಕ್ಕಳ ಪಾಲನೆ ಪೋಷಣೆಗೆ ಸಮಯವಕಾಶವಿಲ್ಲದಿರುವುದರಿಂದ ದಾದಿಯರ ನೇಮಕ, ಶಿಶುವಿಹಾರಗಳ ಸೇರ್ಪಡೆ, ವಸತಿಶಾಲೆಗಳಿಂದಾಗಿ ಮಕ್ಕಳ ಬಾಲ್ಯವಸ್ಥೆಯು, ತಂದೆ ತಾಯಿ ಪ್ರೀತಿಯಿಂದ ವಂಚಿತರಾಗುತ್ತಾರೆ. ಇಂತಹ ಮಕ್ಕಳು, ಅಡ್ಡದಾರಿ, ಅನೈತಿಕ ಚಟುವಟಿಕೆಗಳಲ್ಲಿ ತೊಡಗುವ ಸಾಧ್ಯತೆ ಇರುವುದರಿಂದ ದಿನನಿತ್ಯ, ದರೋಡೆ, ಕೊಲೆ ಸುಲಿಗೆಗಳಲ್ಲಿ ಯಥೇಚ್ಛವಾಗಿ ಯುವಶಕ್ತಿ ಪಾಲ್ಗೊಳ್ಳುವುದನ್ನು ಕಾಣುತ್ತಿದ್ದೇವೆ. ಈ ಕಾರಣಗಳಿಂದ ವಿಭಕ್ತ ಕುಟುಂಬ ಪದ್ಧತಿ ದುಡಿಯುವ ವರ್ಗಕ್ಕೆ ಹಾಗೂ ಕುಟುಂಬದ ರಕ್ಷಣೆ ಮತ್ತು ಪೋಷಣೆಗೆ ಫಲಕಾರಿಯಾಗಿಲ್ಲವೆಂದು ವಿಶ್ಲೇಷಿಸುತ್ತಾರೆ.

### ೩.೨. ಗಣಿ ಕಾರ್ಮಿಕರ ವೈವಾಹಿಕ ಸ್ಥಿತಿ

ಕುಟುಂಬದ ಅಭಿವೃದ್ಧಿಯ ಸಂವಾಹನದಲ್ಲಿ ವೈವಾಹಿಕ ಸ್ಥಿತಿಯು ಒಂದು ಮುಖ್ಯವಾದ ಕಾಲಘಟ್ಟ. ಅದು ಮಾನವನ ಬೌದ್ಧಿಕ ಹಾಗೂ ದೈಹಿಕ ಮಟ್ಟದ ಗುಣಸೂಚಕವೂ ಹೌದು. ವೈವಾಹಿಕ ಜೀವನದಲ್ಲಿ ಸಾಕಷ್ಟು ಅಂತರವನ್ನು ಕಾಯ್ದುಕೊಳ್ಳುವ ಯಾವುದೇ ಸಮಾಜ ಅಥವಾ ಸಮುದಾಯಗಳು ಸಾಮಾಜಿಕವಾಗಿ, ದೈಹಿಕವಾಗಿ ಮತ್ತು ಆರೋಗ್ಯವಾಗಿ ಸಧೃಡವಾಗಿದ್ದು, ಸುಸ್ಥಿರ ಸಮಾಜದ ನಿರ್ಮಾತೃಗಳು ಹೌದು ಎಂಬುದು ಸಮಾಜಶಾಸ್ತ್ರಜ್ಞರ ವಿಚಾರವಾಗಿದೆ. ಇಂತಹ ವಾತಾವರಣ ಕೇವಲ ಮುಂದುವರೆದ ದೇಶಗಳಲ್ಲಿ ಮಾತ್ರ ನೋಡಬಹುದು. ಏಕೆಂದರೆ ಆ ದೇಶಗಳಲ್ಲಿ "ವಿವಾಹ"ವೂ ಕಡ್ಡಾಯವಾಗಿರದೇ ಅದೊಂದು ಪುರುಷ ಹಾಗೂ ಮಹಿಳೆಯರ ಆಯ್ಕೆಗೆ ಸಂಬಂಧಿಸಿರುತ್ತದೆ. ಅಥವಾ ಒಂದು ರೀತಿಯ ಪುರುಷ ಮತ್ತು ಮಹಿಳೆಯರ ನಡುವಿನ ಒಪ್ಪಂದವಾಗಿರುತ್ತದೆ ಎಂದೆನ್ನಬಹುದು. ಅಂತಹ ಸಮಾಜವು ಉದಾರವಾದಿ, ವೈಶಾಲ್ಯತೆಯುಳ್ಳ ಹಾಗೂ ಆರೋಗ್ಯವಂತ ವ್ಯವಸ್ಥೆಯಾಗಿರುತ್ತದೆ. ಆದರೆ ಹಿಂದುಳಿದ ಭಾರತದಲ್ಲಿ ಪರಂಪರಾಗತದಿಂದ ಬಂದ ಅನೇಕ ರೂಢಿ, ಪದ್ಧತಿ, ಸಂಪ್ರದಾಯಗಳನ್ನು ಚಾಚುತಪ್ಪದೇ ಪಾಲಿಸಿ ಸನ್ಮಾರ್ಗವನ್ನು ಪಡೆಯಬೇಕೆಂಬ ವಿಧಿ-ನಿಯಮಗಳನ್ನು ಸಮಾಜವು ಕುಟುಂಬಗಳ ಮೇಲೆ ಒತ್ತಾಯ ಪೂರ್ವಕವಾಗಿ ಹೇರಲ್ಪಡುವುದರಿಂದ ಇಲ್ಲಿ "ವಿವಾಹ"ವೆಂಬುದು ಕಡ್ಡಾಯವಾಗಿರುತ್ತದೆ. ಒಂದು ವೇಳೆ ಯಾವೊಬ್ಬ ಪುರುಷ ಅಥವಾ ಮಹಿಳೆ ಅದರಿಂದ ಬಿಡುಗಡೆ ಹೊಂದುವುದೇ

ಸಾಮಾಜಿಕ ಹಾಗೂ ಧಾರ್ಮಿಕ ಪ್ರಮಾದವಾಗಿ ಕಂಡುಬರುತ್ತದೆ. ಹೀಗಾಗಿ ಭಾರತದಲ್ಲಿ ಅಜ್ಞಾನ, ಮೂಡನಂಬಿಕೆ, ಅನಾರೋಗ್ಯ ಮತ್ತು ಜನಸಂಖ್ಯೆಯ ಹೆಚ್ಚಳವು ಇಲ್ಲಿ ಸರ್ವೇ ಸಾಮಾನ್ಯವಾಗಿವೆ ಎಂಬುದು ಆರ್ಥಿಕ ತಜ್ಞರ ಅಭಿಮಾತವಾಗಿದೆ.

ಇದಕ್ಕೆ ಒತ್ತಾಸೆಯಾಗಿ ಬುಡಕಟ್ಟು ಗಣಿ ಕಾರ್ಮಿಕರಲ್ಲಿನ ವೈವಾಹಿಕ ಸ್ವರೂಪವನ್ನು ತಿಳಿಯುವುದು ಅವಶ್ಯ. ಏಕೆಂದರೆ ಅದು ಅವರ ಸಾಮಾಜಿಕ, ದೈಹಿಕ, ಆರ್ಥಿಕ ಪ್ರಗತಿಯ ಧ್ಯೋತಕವಾಗಿರುವುದರಿಂದ, ಅದರ ಸ್ಪಷ್ಟತೆಗಾಗಿ ಕೋಷ್ಟಕ ೩.೩ನ್ನು ಗಮನಿಸಬಹುದು.

**ಕೋಷ್ಟಕ ೩.೩ : ಗಣಿಕಾರ್ಮಿಕರ ವೈವಾಹಿಕ ಸ್ಥಿತಿಯ ಚಿತ್ರಣ**

| ಕ್ರ.ಸ. | | | ವಿವರಗಳು | | | | |
|---|---|---|---|---|---|---|---|
| ೧. | ಕಾರ್ಮಿಕರ ವಯಸ್ಸು | ೧೪ ವರ್ಷದೊಳಗೆ | ೧೫-೨೧ | ೨೨-೨೮ | ೨೯-೩೫ | ಮದುವೆ ಯಾಗದವರು | ಒಟ್ಟು |
| ೨. | ಕಾ. ಸಂಖ್ಯೆ | ೩೫ | ೧೦೦ | ೨೦ | -- | ೪೫ | ೨೦೦ |
| ೩. | ಶೇಕಡವಾರು | ೧೭.೫ | ೫೦ | ೧೦ | -- | ೨೨.೫ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

೩.೩ರ ಕೋಷ್ಟಕವು ಗಣಿಕಾರ್ಮಿಕರಲ್ಲಿ ಶೇಕಡ ೧೭.೫ ರಷ್ಟು ೧೪ ವರ್ಷದ ಒಳಗಡೆಯೇ ಮದುವೆಯಾದವರ ಪ್ರಮಾಣವನ್ನು ತೋರಿಸುತ್ತದೆ. ಇಂತಹ ನಡವಳಿಕೆಗೆ ಬುಡಕಟ್ಟು ಗಣಿ ಸಮುದಾಯಗಳಲ್ಲಿರುವ ಅನಕ್ಷರತೆ, ಅಜ್ಞಾನ, ಮೂಢನಂಬಿಕೆಗಳಿಂದಾಗಿ ಈಗಲೂ ಬುಡಕಟ್ಟುಗಳಲ್ಲಿ ಬಾಲ್ಯವಿವಾಹ ಪದ್ಧತಿ ಚಾಲ್ತಿಯಲ್ಲಿದೆ ಎಂಬುದನ್ನು ಎಚ್ಚರಿಸುವಂತಿದೆ. ಕಾರ್ಮಿಕರಲ್ಲಿ ೧೫ ರಿಂದ ೨೧ ವರ್ಷದೊಳಗಿರುವವರ ಪ್ರಮಾಣ ಶೇಕಡ ೫೦ ಇದೆ. ಇವರಲ್ಲಿ ಸರ್ಕಾರ ರೂಪಿಸರುವ ವೈವಾಹಿಕ ಕಾಯ್ದೆ ಕಾನೂನುಗಳ ಬಗ್ಗೆ ಅರಿವಿಲ್ಲ. ಈ ಹಂತದಲ್ಲಿ ಮದುವೆಯಾದ ಬಹಳಷ್ಟು ಹೆಂಗಸರು ತಮ್ಮ ೧೫ ವರ್ಷಗಳ ಒಳಗಡೆ ಮದುವೆಯ ಬಂಧನಕ್ಕೆ ಒಳಗಾದವರು. ಭಾರತ ಸರ್ಕಾರ ನಿಗಧಿಪಡಿಸಿದ ಮದುವೆ ವಯಸ್ಸಿಗೆಲ್ಲಾ ಅವರು ಮೂರು ಅಥವಾ ನಾಲ್ಕು ಮಕ್ಕಳ ತಾಯಂದಿರಾಗಿರುತ್ತಾರೆ. ಇಂತಹ ಬೆಳವಣಿಗೆಯು ಮಹಿಳೆಯ ಆರೋಗ್ಯದ ಮೇಲೆ, ಮಾನಸಿಕ ಸಾಮರ್ಥ್ಯ ಹಾಗೂ ಬೌದ್ಧಿಕ ಸಾಮರ್ಥ್ಯದ ಮೇಲೆ ದುಷ್ಪಾರಿಣಾಮವನ್ನುಂಟು ಮಾಡಿ, ಮಹಿಳೆಯರಲ್ಲಿ ರೋಗನಿರೋಧಕ ಸಾಮರ್ಥ್ಯವನ್ನೇ ಇಲ್ಲವಾಗಿಸುತ್ತದೆ.

೨೨-೩೦ ವರ್ಷಗಳ ಅಂತರದಲ್ಲಿರುವವರ ವೈವಾಹಿಕ ಬಂಧನವು ಶೇಕಡ ೧೦ರಷ್ಟಿದೆ. ಇತ್ತೀಚಿಗೆ ಈ ವರ್ಗದಲ್ಲಿ ಅಲ್ಪಸ್ವಲ್ಪ ವಿದ್ಯಾವಂತರಾದ ಗಣಿಕಾರ್ಮಿಕರು ಸೇರಿದ್ದು, ವಾಸ್ತವಿಕ ಸನ್ನಿವೇಶದ ಅರಿವುಳ್ಳರಾಗಿದ್ದಾರೆ. ಹಾಗೆಯೇ ಇತ್ತೀಚಿನ ದಿನಗಳಲ್ಲಿ ಅಕ್ಷರಸ್ಥ ಸಮೂಹದ ವಿವಾಹದ ಆಯ್ಕೆ

ಎಂದೇ ಭಾವಿಸಲಾಗಿರುವ ೨೯-೩೫ರ ಸನ್ನಿವೇಶದಲ್ಲಿ ಮದುವೆಯಾದ ಯಾವುದೇ ಉದಾಹರಣೆಗಳು ಬುಡಕಟ್ಟು ಗಣಿಕಾರ್ಮಿಕರಲ್ಲಿ ಕಂಡುಬರುವುದಿಲ್ಲ. ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡಿದ್ದ ೨೦೦ ಗಣಿ ಕಾರ್ಮಿಕರಲ್ಲಿ ಶೇಕಡ ೨೨.೫ ರಷ್ಟು ಮದುವೆಯಾಗದ ಕಾರ್ಮಿಕರಿದ್ದಾರೆ. ಇದಕ್ಕೆ ಅವರಲ್ಲಿರುವ ಬಡತನ, ನಿರುದ್ಯೋಗ, ಮದುವೆ ಪೂರ್ವ ವಯಸ್ಸು ಇತ್ಯಾದಿಗಳಿಂದ ವಿವಾಹವಾಗದೇ ಇರುವ ಜನರು ಸಂದರ್ಶನದಲ್ಲಿ ವಿಶೇಷವಾಗಿ ಕಂಡುಬರುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಗಣಿಕಾರ್ಮಿಕರು ಅನಕ್ಷರಸ್ಥರಾಗಿರುವುದರಿಂದ ಹಲವಾರು ಸಂಪ್ರದಾಯಗಳಲ್ಲಿ ತಮ್ಮ ಬದುಕನ್ನು ರೂಪಿಸಿಕೊಳ್ಳುವವರಾಗಿದ್ದಾರೆ. ಮದುವೆಯೆಂಬುದು ಅವರಿಗೆ ಕಡ್ಡಾಯವಾದ ಬಂಧನವಾಗಿದೆ. ಚಿಕ್ಕ ಚಿಕ್ಕ ವಯಸ್ಸಿನಲ್ಲಿ ಮದುವೆಯಾಗುವುದರಿಂದ ಪುರುಷ ಮತ್ತು ಮಹಿಳೆಯರಲ್ಲಿ ಜನನ ಸಾಮರ್ಥ್ಯ ಹೆಚ್ಚಾಗಿರುತ್ತದೆ. ಹೀಗಾಗಿ ಹೆಚ್ಚು ಹೆಚ್ಚು ಮಕ್ಕಳನ್ನು ಪಡೆಯುವ ಅವಕಾಶಗಳು ಅವರಲ್ಲಿ ಅಧಿಕವಾಗಿರುವುದರಿಂದ ಕಾರ್ಮಿಕ ಕುಟುಂಬಗಳಲ್ಲಿ ಜನಸಂಖ್ಯೆಯ ಪ್ರಮಾಣವು ಅಧಿಕವಾಗಿರಲು ಮೂಲ ಕಾರಣವಾಗಿದೆ. ಇಂತಹ ಬೆಳೆಯುತ್ತಿರುವ ಜನಸಂಖ್ಯೆಯಿಂದಾಗಿ ಬುಡಕಟ್ಟು ಕುಟುಂಬದಲ್ಲಿ ಬಡತನ, ಆನಾರೋಗ್ಯ, ಅಸಮಾನತೆಗೆ ಕಾರಣವಾಗುತ್ತದೆ ಎಂಬುದನ್ನು ತಿಳಿಯದವರಾಗಿದ್ದಾರೆ.

## ೩.೩. ಬುಡಕಟ್ಟು ಕಾರ್ಮಿಕರ ನಂಬಿಕೆ ಮತ್ತು ಆಚರಣೆ

ಆರ್ಥಿಕ ಅಭಿವೃದ್ಧಿಯ ವಿಶ್ಲೇಷಣೆಯಲ್ಲಿ ಸಮಾಜದ ಸಂಪ್ರದಾಯ, ನಂಬಿಕೆ, ಹಾಗೂ ಆಚರಣೆ ಗಳಂತಹ ನಡವಳಿಕೆಗಳು ಅಭಿವೃದ್ಧಿಯ ಗತಿಗೆ ದೊಡ್ಡ ತೊಡಕಾಗಿ ಕಂಡುಬರುತ್ತವೆ ಎಂದೇ ಆನೇಕ ಆರ್ಥಿಕ ತಜ್ಞರ ಅಭಿಪ್ರಾಯವಾಗಿದೆ. ಆದರೆ ಇತ್ತೀಚಿನ ಪ್ರಗತಿಪರ ಆರ್ಥಿಕ ಚಿಂತಕರ ಪ್ರಕಾರ ಸುಧಾರಣೆ ಅಥವಾ ಅಭಿವೃದ್ಧಿಯೆಂಬುದು ಕೇವಲ ವರಮಾನ, ಉತ್ಪಾದನೆ, ಮಾರುಕಟ್ಟೆ, ತಂತ್ರಜ್ಞಾನ ಹಾಗೂ ವಿಜ್ಞಾನವಾಗಿರದೇ ಒಳ್ಳೆಯ ಶಿಕ್ಷಣ, ಆರೋಗ್ಯ, ರಾಜಕೀಯ ಪ್ರಾತಿನಿಧ್ಯ, ಸಾಂಸ್ಕೃತಿಕ ಮನ್ನಣೆ ಹಾಗು ಸಮುದಾಯದಲ್ಲಿ ಭಾಗವಹಿಸುವಂತಹ ಅವಕಾಶಗಳು ಸಾಕಷ್ಟು ಪ್ರಮಾಣ ದಲ್ಲಿರಬೇಕೇ ಹೊರತು ಆದಾಯವನ್ನಷ್ಟೇ ಹೆಚ್ಚಿಸುವಂತಿರಬಾರದು ಎಂಬ ನೀತಿಗೆ ಹೆಚ್ಚೂ ಬೆಂಬಲ ವ್ಯಕ್ತವಾಗುತ್ತಿದೆ. ಅಂದರೆ ಅಭಿವೃದ್ಧಿಯ ಪರಿಕಲ್ಪನೆಯು ಇಡೀ ಸಮಾಜವನ್ನು ಕುರಿತು ವರ್ತಿಸಬೇಕೆ ವಿನಹಃ ಕೇವಲ ಆರ್ಥಿಕತೆಗೆ ಸೀಮಿತವಾಗಿರಬಾರದೆಂಬ ಧೋರಣೆಗೆ ಹೆಚ್ಚು ಬೆಂಬಲ ವ್ಯಕ್ತವಾಗಿದೆ. ಬುಡಕಟ್ಟು ಕಾರ್ಮಿಕರನ್ನು ಮುಖ್ಯ ಆಧಾರವಾಗಿಟ್ಟುಕೊಂಡಿದ್ದರಿಂದ, ಆ ಸಮುದಾಯಗಳಲ್ಲಿರುವ ಅನೇಕ ರೂಢಿ, ಪದ್ಧತಿ, ಸಂಪ್ರದಾಯ, ರಕ್ತಸಂಬಂಧ, ಹಿರಿಯರ ಮೇಲಿನ ಗೌರವ, ಮಾತೃ ಭೂಮಿಯ ಬಗ್ಗೆ ಅವರಲ್ಲಿನ ವಿಶೇಷ ಕಾಳಜಿ ಮತ್ತು ತಮ್ಮ ಬುಡಕಟ್ಟುಗಳ ಹುಟ್ಟಿನ ಬಗ್ಗೆ ವಿಶೇಷ ಅಭಿಮಾನವನ್ನು ಹೊಂದಿದ್ದಾರೆ. ಜೊತೆಗೆ ಅವುಗಳನ್ನು ಚಾಚುತಪ್ಪದೇ ಪಾಲಿಸಿಕೊಂಡು

ಹೋಗಲು ಆಸಕ್ತರಾಗಿದ್ದಾರೆ. ಇಂತಹ ಹಲವು ಸಂಪ್ರದಾಯಗಳಲ್ಲಿ ಬೇಟೆಗಾರಿಕೆ, ದೇವದಾಸಿ ಪದ್ಧತಿ, ವೇಶ್ಯಾವಾಟಿಕೆ, ಜಾತಿ ಬಹಿಷ್ಕಾರ, ನ್ಯಾಯಪಂಚಾಯ್ತಿ, ಬಲಿ, ಸ್ತ್ರೀಯರನ್ನು ದೇವರಿಗೆ ಬಿಡುವುದು, ಬೆತ್ತಲೆ ಸೇವೆ ಮುಂತಾದ ಆಚರಣೆಗಳನ್ನು ಪಾಲಿಸಿಕೊಂಡು ಹೋಗಲು ಆಸಕ್ತಿಯಿದೆಯೇ ಅಥವಾ ಇಲ್ಲವೆ ಎಂಬುದನ್ನು ಪತ್ತೆ ಹಚ್ಚಲು ಗಣಿ ಕಾರ್ಮಿಕರನ್ನು ಸಂದರ್ಶಿಸಿದಾಗ ದೊರೆತ ಫಲಿತಾಂಶಗಳ ವಿವರ ಈ ಕೆಳಗಿನಂತೆ ಕಂಡುಬರುತ್ತದೆ.

**ಕೋಷ್ಟಕ ೩.೪ : ಬುಡಕಟ್ಟು ಸಮಾಜದ ಆಚರಣೆ/ನಂಬಿಕೆಗಳು**

| ಕ್ರ.ಸ. | ವಿವರಗಳು | ರೂಢಿ | | ಸಂಪ್ರದಾಯ ಮತ್ತು ಪದ್ಧತಿಗಳ ಆಚರಣೆ | | |
|---|---|---|---|---|---|---|
| ೧. | ಕಾ.ಸಂಖ್ಯೆ | ಬೇಕು | ಬೇಡ | ಬದಲಾವಣೆ ಅಗತ್ಯ | ಗೊತ್ತಿಲ್ಲ | ಒಟ್ಟು |
| ೨. | ಕಾ.ಸಂಖ್ಯೆ | ೩೨ | ೫೩ | ೧೦೦ | ೧೫ | ೨೦೦ |
| ೩. | ಶೇಕಡವಾರು | ೧೬ | ೨೬.೨ | ೫೦ | ೭.೫ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಕೋಷ್ಟಕ ೩.೪ರ ಪ್ರಕಾರ ಗಣಿ ಕಾರ್ಮಿಕರೊಂದಿಗೆ ಚರ್ಚಿಸುವಾಗ ತಮ್ಮ ಹಿರಿಯರಿಂದ ನಡೆದುಕೊಂಡು ಬಂದ ರೂಢಿ, ಸಾಂಪ್ರದಾಯ ಹಾಗೂ ಪದ್ಧತಿಗಳನ್ನು ಪಾಲಿಸಿಕೊಂಡು ಹೋಗುವುದರಿಂದ ತಮ್ಮ ಭವಿಷ್ಯದ ಜೀವನದಲ್ಲಿ ಸಂತೃಪ್ತಿ ಇಲ್ಲವೇ ಸದ್ಗತಿ ಸಾಧ್ಯ, ಇಲ್ಲವಾದರೆ ಮುಂದಿನ ಜೀವನವು ಅತಂತ್ರವಾಗಿರುತ್ತದೆಂಬ ಆತಂಕವನ್ನು ಶೇಕಡ ೧೬ ರಷ್ಟು ಕಾರ್ಮಿಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಆಧುನಿಕತೆಗೆ ಮನಸೋತು, ಹಿರಿಯರಿಂದ ಬಂದ ರೂಢಿ ಸಂಪ್ರದಾಯಗಳಿಂದ ಲಾಭಗಳೇನು ಇಲ್ಲ. ಅವೆಲ್ಲವುಗಳನ್ನು ಕಟ್ಟು ನಿಟ್ಟಾಗಿ ಪಾಲಿಸಿಕೊಡು ಹೋಗುವ ಕಾಲಮಾನವೂ ಅಲ್ಲ. ಹೀಗಾಗಿ ಅವೆಲ್ಲವುಗಳನ್ನು ಕೈಬಿಟ್ಟು, ಬದಲಾವಣೆಗಳನ್ನು ರೂಢಿಸಿಕೊಳ್ಳುವುದು ಅವಶ್ಯಕವೆಂದೂ ಶೇಕಡ ೨೬.೨ ರಷ್ಟು ಕಾರ್ಮಿಕರು ತಮ್ಮ ಮನದಾಳದಲ್ಲಿನ ಇಂಗಿತವನ್ನು ಹೊರಹಾಕಿದ್ದಾರೆ.

ಸಾಂಪ್ರದಾಯಕತೆಯನ್ನು ಕೈಬಿಡದೇ ಆಧುನೀಕತೆಯನ್ನು ಮೈಗೂಡಿಸಿಕೊಳ್ಳದೆ ಸಂಕ್ರಮಣ ಸ್ಥಿತಿಯಲ್ಲಿರುವ ಶೇಕಡ ೫೦ ರಷ್ಟು ಬುಡಕಟ್ಟು ಗಣಿ ಕಾರ್ಮಿಕರು ತಮ್ಮ ಮೂಲ ನಿವಾಸಿಗಳಿಂದ ಹರಿದು ಬಂದಿರುವ ಅನೇಕ ಸತ್ಸಂಪ್ರದಾಯಗಳ್ನು ಬದಲಾವಣೆಗೊಳಪಡಿಸಿ ಆಚರಿಸುವುದು ಸೂಕ್ತವೆಂಬ ಇಂಗಿತವನ್ನು ವ್ಯಕ್ತಪಡಿಸಿದ್ದಾರೆ.

ಬುಡಕಟ್ಟು ಸಮುದಾಯಗಳ ಸಂಪ್ರದಾಯಗಳನ್ನು ಪಾಲಿಸಬೇಕೆ ಅಥವಾ ಬೇಡವೆ ಎಂಬ

ಬಗ್ಗೆ ಪ್ರಶ್ನಿಸಿದಾಗ ಶೇಕಡ ೭.೫ ರಷ್ಟು ಕಾರ್ಮಿಕರು ಸಂಪ್ರದಾಯಗಳನ್ನು ಪಾಲಿಸುವ ಬಗ್ಗೆಯಾಗಲಿ ಅಥವಾ ಕೈಬಿಡುವ ಬಗ್ಗೆಯಾಗಲೀ ತೀರ್ಮಾನ ತೆಗೆದುಕೊಳ್ಳದೇ ತಮಗೇನು ಗೊತ್ತಿಲ್ಲವೆಂದು ಉತ್ತರಿಸಿದ್ದಾರೆ.

ಒಟ್ಟಾರೆಯಾಗಿ ಅಂತಿಮ ತೀರ್ಮಾನಕ್ಕೆ ಬರುವುದಾದರೆ ಬುಡಕಟ್ಟು ಗಣಿಕಾರ್ಮಿಕರ ಸಾಮಾಜಿಕ ಅಂಶಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಆಧುನಿಕ ಕಾಲಘಟ್ಟಕ್ಕೆ ಅನುಗುಣವಾಗಿ ಅವರ ಶಿಕ್ಷಣ ಪದ್ದತಿ, ಆರೋಗ್ಯ, ವೈವಾಹಿಕ ಸ್ಥಿತಿ, ರೂಢಿಪದ್ಧತಿಗಳು, ಸಾಂಪ್ರದಾಯಿಕತೆಯಿಂದ ಕೂಡಿದ್ದು, ಆಧುನೀಕತೆಯನ್ನು ಆಸ್ವಾದಿಸುವ ಇಲ್ಲವೆ ಅನುಮೋದಿಸುವ ಬಗ್ಗೆ ತೀರ್ಮಾನವನ್ನು ಕೈಗೊಳ್ಳುವ ಸಾಮರ್ಥ್ಯ ಕಡಿಮೆ ಪ್ರಮಾದಲ್ಲಿದೆ. ಶಿಸ್ತುಬದ್ಧ ಸಮಾಜದಲ್ಲಿ ಜೀವಿಸುವ ನಾವುಗಳು ಬುಡಕಟ್ಟು ಸಮುದಾಯ ಹಾಗೂ ಕಡಿಮೆ ಮಟ್ಟದ ಉದ್ಯೋಗದ ಸ್ವರೂಪವನ್ನು ತಾತ್ಸಾರ, ತಿರಸ್ಕಾರ, ಅನುಮಾನ ಹಾಗೂ ಅಗೌರವದಿಂದ ಕಾಣುವವರಾಗಿದ್ದೇವೆ. ಹೀಗಾಗಿ ಆಧುನೀಕತೆಯ ತುಟ್ಟ ತುದಿಯಲ್ಲಿರುವ ನಾಗರೀಕ ಪ್ರಪಂಚದಲ್ಲಿ ಮೋಸ, ವಂಚನೆ, ಅನ್ಯಾಯಗಳನ್ನು ಅರಿಯದ ಆನೇಕ ಮುಗ್ಧ ಬುಡಕಟ್ಟು ಕುಟುಂಬಗಳು ಅತ್ಯಂತ ಕೆಳಮಟ್ಟದ ಸಾಮಾಜಿಕ ಸ್ಥಾನಮಾನಗಳಲ್ಲಿ ತೃಪ್ತಿ ಹೊಂದಬೇಕಾಗಿದೆ.

### ೩.೪. ಕಾರ್ಮಿಕರ ಶಿಕ್ಷಣದ ಸ್ವರೂಪ

ಗಣಿ ಅವಲಂಬಿತ ಕಾರ್ಮಿಕ ಕುಟುಂಬಗಳು ಹೆಚ್ಚಾಗಿ ವಲಸೆ ಬಂದವರಾಗಿದ್ದು, ಅವರು ಯಾವುದೇ ರೀತಿಯ ಸ್ಥಿರ ಮತ್ತು ಚರಾಸ್ತಿಗಳನ್ನು ಹೊಂದಿಲ್ಲದೆ ಇರುವವರು. ಇಂತಹ ಸನ್ನಿವೇಶದಲ್ಲಿ ಅವರಿಗೆ ತಮ್ಮ ದೈನಂದಿನ ಜೀವನದ ನಿರ್ವಹಣೆಯೇ ಪ್ರಧಾನವಾಗಿ ಕಂಡುಬರುತ್ತದೆಯೇ ವಿನಹಃ ಶಿಕ್ಷಣ, ಆರೋಗ್ಯ ಹಾಗೂ ಜೀವನ ಮಟ್ಟದ ಸುಧಾರಣೆಗಳಲ್ಲ. ಪ್ರಸ್ತುತ ಸಂದರ್ಭದಲ್ಲಿ ಎಲ್ಲಾ ಕೆಳಜಾತಿ ಹಾಗೂ ವರ್ಗಗಳು ಮಾಡುವ ಪ್ರಮಾದವೇನೆಂದರೆ ಇನ್ನೂ ಅವರು ತಮ್ಮ ಕರ್ಮಸಿದ್ಧಾಂತದಲ್ಲಿ ನಂಬಿಕೆ ಇಟ್ಟಿರುವುದು. ಅಲ್ಲದೆ ಈಗಾಲು ತಮ್ಮ ಪೂರ್ವಾಪರ ಸ್ಥಿತಿಯಿಂದ ಅವರು ಬಿಡುಗಡೆಗೊಳ್ಳಲು ಪ್ರಯತ್ನಿಸದೇ ಇರುವುದು. ಒಂದು ವೇಳೆ ಇಂತಹ ಪರಿಸ್ಥಿತಿಗೆ ಅವರ ಸುತ್ತಲಿನ ವ್ಯವಸ್ಥೆಯು ಸಹ ಸೂಕ್ಷ್ಮವಾಗಿ ಅದಕ್ಕೆ ಪೂರಕವಾದ ಪರಿಸರವನ್ನು ಹುಟ್ಟು ಹಾಕಿರಬಹುದು. ಎಂಬ ಅಂಶವನ್ನು ಅಲ್ಲಗಳೆಯುವಂತಿಲ್ಲ. ಹೀಗಾಗಿ ಇಂತಹ ಮೂಢನಂಬಿಕೆಗಳಿಂದ ಬಿಡುಗಡೆಗೊಳ್ಳುವ ಯಾವುದೇ ಪ್ರಯತ್ನಗಳಾಗದೇ ಇರುವುದರಿಂದ ಎಲ್ಲಾ ಕೆಳಜಾತಿಗಳು ಮತ್ತಷ್ಟು ಕೆಳಮಟ್ಟಕ್ಕಿಳಿಯಲು ಕಾರಣವಾಗಿವೆ. ಈ ಹಿನ್ನೆಲೆಯಲ್ಲಿ ಬುಡಕಟ್ಟು ಗಣಿ ಕಾರ್ಮಿಕರಲ್ಲಿರುವ ಶಿಕ್ಷಣದ ಸ್ಥಾನಮಾನಗಳನ್ನು ಅರಿಯುವುದು ಅತ್ಯವಶ್ಯಕವಾಗಿದೆ. ಅದನ್ನು ಕೋಷ್ಟಕ ೩.೫ರಿಂದ ತಿಳಿಯಬಹುದಾಗಿದೆ.

## ಕೋಷ್ಟಕ ೩.೫ : ಗಣೆ ಕಾರ್ಮಿಕರ ಶಿಕ್ಷಣದ ಪ್ರಮಾಣ

| ಕ್ರ. ಸಂ. | ವಿವರಗಳು | ಶಿಕ್ಷಣದ ವರ್ಗೀಕರಣ | | | | | | | | | | | | ಒಟ್ಟು ಮಾಹಿತಿ ದಾರರು |
|---|---|---|---|---|---|---|---|---|---|---|---|---|---|---|
| | | ಪ್ರಾಥಮಿಕ | | | ಮಾಧ್ಯಮಿಕ | | | ಪ್ರೌಢ | | | ಅನಕ್ಷರಸ್ಥರು | | | |
| ೧. | ಲಿಂಗವಾರು ಹಂಚಿಕೆ | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | |
| ೨. | ಕಾರ್ಮಿಕರ ಸಂಖ್ಯೆ | ೧೯ | ೧೨ | ೩೧ | ೧೨ | ೦೫ | ೧೭ | ೦೭ | ೦೩ | ೧೦ | ೬೨ | ೮೦ | ೧೪೨ | ೨೦೦ |
| ೩. | ಶೇಕಡವಾರು | ೯.೫ | ೬ | ೧೫.೫ | ೬ | ೨.೫ | ೮.೫ | ೩.೫ | ೧.೫ | ೫ | ೩೧ | ೪೦ | ೭೧ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

೩.೫ರ ಕೋಷ್ಟಕ ಪಟ್ಟಿಯನ್ನು ಅವಲೋಕಿಸಿದಾಗ ಬುಡಕಟ್ಟು ಗಣೆ ಕುಟುಂಬಗಳಲ್ಲಿ ಅನಕ್ಷರಸ್ಥರ ಪ್ರಮಾಣವು ಅತ್ಯಧಿಕವಾಗಿರುವುದು ಕಂಡುಬರುತ್ತದೆ. ಅದು ಶೇಕಡ ೭೧ರಷ್ಟಾಗಿದೆ. ಇದಕ್ಕೆ ಕಾರಣವೇನೆಂದರೆ ಬುಡಕಟ್ಟು ಸಮುದಾಯಗಳಲ್ಲಿರುವ ಮೂಢನಂಬಿಕೆ, ಸಂಪ್ರದಾಯ, ಬಡತನ ಹಾಗೂ ಆಧುನಿಕತೆಯೊಂದಿಗಿನ ಅವರ ಕಡಿಮೆ ಒಡನಾಟಗಳಿಂದಾಗಿ ಬುಡಕಟ್ಟು ಸಮುದಾಯಗಳು ಅಕ್ಷರ ಲೋಕದಿಂದ ತುಂಬಾ ದೂರ ಉಳಿದಿವೆ. ಕ್ಷೇತ್ರ ಕಾರ್ಯಕ್ಕೆ ಆಯ್ಕೆಮಾಡಿಕೊಂಡಿದ್ದ ಮಾಹಿತಿದಾರರ ಪ್ರಕಾರ ಕೇವಲ ಶೇ. ೨೯ರಷ್ಟು ಮಾತ್ರ ಗಣೆಕಾರ್ಮಿಕರು ಶಿಕ್ಷಣವನ್ನು ಪಡೆದಿದ್ದಾರೆ. ಅದರಲ್ಲೂ ಪ್ರಾಥಮಿಕ ಹಂತದಲ್ಲಿ ೧೫.೫ರಷ್ಟು ಮತ್ತು ಮಾಧ್ಯಮಿಕ ಹಂತದಲ್ಲಿ ಕೇವಲ ೮.೫ರಷ್ಟು ಮಾತ್ರ ಸಾಕ್ಷರಸ್ಥರಿದ್ದಾರೆ. ಇವುಗಳೆರಡೂ ಸೇರಿ ಶೇಕಡ ಶೇ. ೨೪ರಷ್ಟು ಮಾತ್ರ ಶಿಕ್ಷಣವನ್ನು ಪಡೆಯಲು ಸಾಧ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಪ್ರಾಥಮಿಕ ಹಂತದ ಶಿಕ್ಷಣವನ್ನು ಪಡೆದುಕೊಂಡವರನ್ನು ಅಕ್ಷರಸ್ಥರೆಂದು ಪರಿಗಣಿಸಬೇಕೆ? ಅಥವಾ ಬೇಡವೆ? ಎಂಬ ವಾಗ್ವಾದ ಪ್ರಾರಂಭವಾಗಿದೆ. ಇಂತಹ ಸಂದಿಗ್ಧತೆಯಲ್ಲಿ ಬುಡಕಟ್ಟು ಕಾರ್ಮಿಕರು ಪ್ರೌಢ ಹಂತದ ಶಿಕ್ಷಣವನ್ನು ಕೇವಲ ಶೇ. ೮.೫ರಷ್ಟು ಮಾತ್ರ ಪಡೆದಿರುವುದನ್ನು ಗಮನಿಸಿದರೆ ಒಟ್ಟಾರೆಯಾಗಿ ಗಣೆ ಕಾರ್ಮಿಕ ಸಮುದಾಯವನ್ನು ಅನಕ್ಷರಸ್ಥರೆಂದೂ ಪರಿಗಣಿಸಬೇಕಾಗುತ್ತದೆ. ಇಂಥ ವಿಷಮ ಪರಿಸ್ಥಿತಿಯಲ್ಲಿ ಶೇಕಡ ೨೯ರಷ್ಟು ಅಕ್ಷರಸ್ಥರೆಂದೂ ಗುರುತಿಸಲ್ಪಡುವ ಒಟ್ಟು ಮಾಹಿತಿದಾರರಲ್ಲಿ ಮಹಿಳೆಯರ ಶಿಕ್ಷಣದ ಪ್ರಮಾಣ ಶೇಕಡ ೧೦ರಷ್ಟು ಇದೆ. ಅದರಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದ ಶಿಕ್ಷಣದ ಪ್ರಮಾಣವು ಶೇ. ೮.೫ ರಷ್ಟಿದ್ದರೆ, ಪ್ರೌಢ ಹಂತದಲ್ಲಿ ಕೇವಲ ಶೇಕಡ ೧.೫ರಷ್ಟು ಇರುತ್ತದೆ. ಹಾಗೆಯೇ ಪುರುಷರಲ್ಲಿ ಸಾಧಾರಣವೆನ್ನಬಹುದಾದ ಸಾಕ್ಷರತೆಯ ಪ್ರಮಾಣ ಶೇಕಡ ೧೯ ರಷ್ಟಿದೆ. ಅದರಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದಲ್ಲಿ ಶೇ. ೧೫.೫ ಮತ್ತು ಪ್ರೌಢ ಶಿಕ್ಷಣದ ಹಂತದಲ್ಲಿ ಕೇವಲ ಶೇಕಡ ೩.೫ರಷ್ಟು ಇರುವುದು ಕಂಡುಬರುತ್ತದೆ. ಗಣೆ ಕಾರ್ಮಿಕರ ಶಿಕ್ಷಣದ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಪುರುಷ ಹಾಗು ಮಹಿಳೆಯರಲ್ಲಿ ಪ್ರಾಥಮಿಕ ಹಾಗು ಮಾಧ್ಯಮಿಕ ಹಂತದ ಶಿಕ್ಷಣದ ಪ್ರಮಾಣವು

ಹೆಚ್ಚಾಗಿರಲು ಮಕ್ಕಳಲ್ಲಿ ದುಡಿಯುವ ಸಾಮರ್ಥ್ಯವಿಲ್ಲದ್ದರಿಂದ ಚಿಕ್ಕಮಕ್ಕಳನ್ನು ಶಾಲೆಗಳಿಗೆ ಕಳುಹಿಸಿ ಕೊಡಲಾಗುತ್ತದೆ, ಹೈಸ್ಕೂಲ್ ಶಿಕ್ಷಣದ ಹೊತ್ತಿಗೆ ದುಡಿಯಲು ಮಕ್ಕಳಿಗೆ ದೈಹಿಕ ಸಾಮರ್ಥ್ಯ ಮೂಡುವುದರಿಂದ ಶಿಕ್ಷಣದ ಪ್ರಮಾಣವು ಕಡಿಮೆಯಾಗಲು ಒಂದು ಕಾರಣವಾಗಿರಬಹುದು.

ಗಣಿ ಕಾರ್ಮಿಕರು ಹೊಂದಿರುವ ಕಡಿಮೆ ಶಿಕ್ಷಣದ ಪ್ರಮಾಣವು ಅವರ ಸಾಮಾಜಿಕ ಸ್ಥಾನಮಾನವನ್ನು ಸೂಚಿಸುತ್ತದೆ. ಎಲ್ಲಾ ರಾಷ್ಟ್ರಗಳಲ್ಲೂ ಹೆಚ್ಚೂ ಶಿಕ್ಷಿತ ಅಥವಾ ಸಾಕ್ಷರತೆಯುಳ್ಳ ಸಮುದಾಯಗಳು ಉನ್ನತ ಸಾಮಾಜಿಕ ಸ್ಥಾನಮಾನಗಳೊಂದಿಗೆ ಆರ್ಥಿಕವಾಗಿ ಬಲಿಷ್ಠಗೊಂಡಿವೆ. ಅಲ್ಲದೆ ರಾಜಕೀಯದಲ್ಲೂ ಜವಾಬ್ದಾರಿಯುತ ಸ್ಥಾನಗಳನ್ನು ಪಡೆದುಕೊಂಡಿರುವುದು ಈಗಾಗಲೇ ಸಾಬೀತಾಗಿದೆ. ಆದರೆ ಮುಂದುವರೆಯುತ್ತಿರುವ ಭಾರತ ದೇಶದಲ್ಲಿ ಅನಕ್ಷರತೆಯು ಒಂದು ದೊಡ್ಡ ಶಾಪವಾಗಿ ಭಾರತವನ್ನು ಕಾಡುತ್ತಿದೆ. ಕಡಿಮೆ ಸಾಕ್ಷರತೆಯಿಂದಾಗಿ, ಸಮಾಜದ ಬಹಳಷ್ಟು ಸಮುದಾಯಗಳು ಕನಿಷ್ಠ ಅಥವಾ ಕೀಳುಮಟ್ಟದ ಸಾಮಾಜಿಕ ಸ್ಥಾನಮಾನಗಳನ್ನು ಪಡೆದುಕೊಂಡಿವೆ. ನಾಗರಿಕತೆಯ ಉತ್ತುಂಗ ಸ್ಥಿತಿಯಲ್ಲಿರುವ ಸಂದರ್ಭದಲ್ಲಿ ಈಗಲೂ ನಮ್ಮ ಸಮಾಜದಲ್ಲಿರುವ ಕೆಲವು ಸಮುದಾಯಗಳು ಸ್ಪರ್ಷಕ್ಕೂ ಯೋಗ್ಯವಾಗಿಲ್ಲದ ಅಥವಾ ಅಸ್ಪೃಶ್ಯ ಸಮುದಾಯಗಳೆಂದು ಗುರುತಿಸಲ್ಪಡುತ್ತಿರುವುದು ದೊಡ್ಡ ದುರಂತವೇ ಸರಿ. ಇದಕ್ಕೆಲ್ಲಾ ತಳ ಸಮುದಾಯಗಳು ಶಿಕ್ಷಣದಿಂದ ವಂಚಿತಗೊಂಡಿರುವುದು ಒಂದು ಕಾರಣವಾದರೇ, ಅನಕ್ಷರತೆಯ ಆರ್ಥಿಕ ಸದಾವಕಾಶಗಳಿಂದ ಆ ಸಮುದಾಯಗಳನ್ನು ವಂಚಿಸುವ ಮೂಲಕ ಇನ್ನಷ್ಟು ಕಡುಬಡವರನ್ನಾಗಿ ಮಾಡಿದೆ. ಹೀಗೆ ಅನಕ್ಷರತೆಯಿಂದೊಡಗೂಡಿದ ಗಣಿಕಾರ್ಮಿಕರು ತಮ್ಮ ಸುತ್ತಲಿನ ಸಮಾಜದ ಶೋಷಣೆಗೆ, ದೌರ್ಜನ್ಯಕ್ಕೆ ಹಾಗೂ ಅನಾದರಣೆ ಗುರಿಯಾಗಲು ಬಹುಮುಖ್ಯ ಕಾರಣವಾಗಿದೆ ಎಂದೆನ್ನಬಹುದು.

ಭಾರತದ ಮಧ್ಯಮ ವರ್ಗದಲ್ಲಿನ ಮಹಿಳೆಯನ್ನು ಸಾಕಷ್ಟು ಬಂಧನಗಳಲ್ಲಿಡಲಾಗಿದೆ. ಅವಳ ಹಕ್ಕು-ಕರ್ತವ್ಯಗಳೇನಿದ್ದರೂ ಮಕ್ಕಳ ಪಾಲನೆ, ಪೋಷಣೆಗಳಿಗೆ ಮಾತ್ರ ಸೀಮಿತವಾಗಿದೆ. ಬುದ್ಧಿಹೇಳುವ ಅಧಿಕಾರವನ್ನು ಅವಳಿಂದ ಕಿತ್ತುಕೊಳ್ಳಲಾಗಿದೆ. ಅವಳಿಗೆ ಆರ್ಥಿಕ ಸ್ವಾತಂತ್ರ್ಯವಂತೂ ಇಲ್ಲವಾಗಿದೆ. ಅವಳ ಕಾರ್ಯವ್ಯಾಪ್ತಿ ಕೇವಲ ಕುಟುಂಬದ ಒಳಗಡೆ ಹೊರತು, ಹೊರಗಲ್ಲ ಎಂಬಂತೆ ಕಟ್ಟುನಿಟ್ಟಿನ ನಿಯಂತ್ರಣಗಳನ್ನು ಹೇರಲಾಗಿದೆ. ಈ ಹಂತದಲ್ಲಿ ಹೆಣ್ಣಿನ ಶೋಷಣೆ, ದೌರ್ಜನ್ಯ ಹಾಗೂ ದಬ್ಬಾಳಿಕೆಗಳಂತೂ ಪರಮಾವಧಿಯನ್ನು ಮುಟ್ಟಿವೆ ಎಂದೆನ್ನಬಹುದು. ಆದರೆ ಕೈಗಾರೀಕರಣ ಆಧುನೀಕರಣ, ಜಾಗತೀಕರಣವು ಸಮಾಜದ ಪುರುಷ ಹಾಗೂ ಮಹಿಳೆಯರ ಅಲೋಚನಾಕ್ರಮವನ್ನೇ ಬದಲಾಯಿಸಿವೆ. ಅಗತ್ಯ ವಸ್ತುಗಳ ಬೆಲೆಗಳು ದಿನನಿತ್ಯ ಹೆಚ್ಚುತ್ತಿರುವುದರಿಂದ ಕುಟುಂಬದ ನಿರ್ವಹಣೆ ಕೇವಲ ಗಂಡಿನ ದುಡಿಮೆಯಿಂದ ಮಾತ್ರ ಸಾಧ್ಯವಾಗುತ್ತಿಲ್ಲ. ಹೀಗಾಗಿ ಕುಟುಂಬದ ನಿರ್ವಹಣೆಗಾಗಿ ಹೆಣ್ಣಿನ ದುಡಿಮೆ, ಅವಳ ಸಹಭಾಗಿತ್ವ ಮತ್ತು ಅವಳ ಸಹಕಾರಗಳಿಗೆ ಮಧ್ಯಮವರ್ಗದ ಕುಟುಂಬ ವ್ಯವಸ್ಥೆಯು ಕೂಡ

ಪುರುಷಾಧಿಪತ್ಯ ನಿಲುವುಗಳಿಂದ ಸಡಿಲಗೊಂಡಿದೆ. ಇಂತಹ ಮನೋಧರ್ಮದ ಬದಲಾವಣೆಯಿಂದಾಗಿ ಮಧ್ಯಮ ವರ್ಗದ ಮಹಿಳೆ ಶಿಕ್ಷಣ, ಆಧುನೀಕತೆ, ಸಮಾನತೆಯ ಅವಕಾಶಗಳಿಂದಾಗಿ ವಿವಿಧ ವಲಯಗಳಲ್ಲಿ ಹೆಚ್ಚಾಗಿ ಕಂಡುಬರುತ್ತಿದ್ದಾಳೆ. ಶ್ರೀಮಂತರು, ರಾಜಕೀಯ ನಾಯಕರು, ಸಮಾಜದಲ್ಲಿನ ಪ್ರತಿಷ್ಠಿತ ಕುಟುಂಬಗಳು ಸಹ ತಮ್ಮ ಕುಟುಂಬದಲ್ಲಿ ಮಹಿಳೆಗೆ ಬಹಳಷ್ಟು ಸ್ವಾತಂತ್ರ್ಯವನ್ನು ನೀಡಿವೆ. ಇದರಿಂದ ಕುಟುಂಬಕ್ಕೆ ಸಂಬಂಧಿಸಿದ ಅನೇಕ ನಿರ್ಧಾರಗಳಲ್ಲಿ ಗಂಡಿನಷ್ಟೇ ಸಮಪಾಲನ್ನು ಮಹಿಳೆಯು ಪಡೆದುಕೊಂಡಿದ್ದಾಳೆ. ಈ ವರ್ಗದ ಮಹಿಳೆಯು ಬೌದ್ಧಿಕವಾಗಿ ಮತ್ತು ಆರ್ಥಿಕವಾಗಿ ಸಬಲಳಾಗಿರುವುದರಿಂದ ಮಹಿಳೆಯು ತನ್ನ ಸುತ್ತಲಿನ ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನಮಾನಗಳನ್ನು ಪಡೆದುಕೊಂಡಿದ್ದಾಳೆ. ಈ ಹಿನ್ನೆಲೆಯನ್ನು ಬಳ್ಳಾರಿ ಜಿಲ್ಲೆಯ ಗಣಿಕೈಗಾರಿಕೆಗಳಲ್ಲಿ ದುಡಿಯುತ್ತಿರುವ. ಕಾರ್ಮಿಕರಲ್ಲಿ ಪುರುಷ ಹಾಗೂ ಮಹಿಳಾ ಕಾರ್ಮಿಕರನ್ನು ಸಮಾನವಾಗಿ ಕ್ಷೇತ್ರಕಾರ್ಯದ ಆಯ್ಕೆಗೆ ಪರಿಗಣಿಸಲಾಗಿದೆ.

**ಕೋಷ್ಟಕ ೩.೬ : ಗಣಿ ಕಾರ್ಮಿಕರ ಪ್ರಮಾಣ**

| ಕ್ರ. ಸಂ. | ವಿವರಗಳು | ಪುರುಷ | | | | ಮಹಿಳಾ | | | |
|---|---|---|---|---|---|---|---|---|---|
| | | ಕುಶಲ | ಅರೆ ಕುಶಲ | ಕುಶಲ ರಹಿತ | ಒಟ್ಟು | ಕುಶಲ | ಅರೆ ಕುಶಲ | ಕುಶಲ ರಹಿತ | ಒಟ್ಟು |
| ೧. | ಕಾರ್ಮಿಕರ ಸಂಖ್ಯೆ | ೨೦ | ೨೦ | ೬೦ | ೧೦೦ | -- | -- | ೧೦೦ | ೨೦೦ |
| ೨. | ಶೇಕಡವಾರು | ೧೦ | ೧೦ | ೩೦ | ೫೦ | -- | -- | ೫೦ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈ ಮೇಲಿನ ೩.೬ರ ಕೋಷ್ಟಕವನ್ನು ಅವಲೋಕಿಸಿದಾಗ, ಬುಡಕಟ್ಟು ಗಣಿ ಕಾರ್ಮಿಕರು ಪಡೆದುಕೊಂಡಿರುವ ಶಿಕ್ಷಣ, ಪ್ರಾವಿಣ್ಯತೆ ಹಾಗೂ ಅವರ ಚಾತುರ್ಯದ ಆಧಾರದ ಮೇಲೆ ಕಾರ್ಮಿಕರ ವರ್ಗೀಕರಣವು ಕುಶಲ ಅರೆಕುಶಲ ಹಾಗೂ ಕುಶಲ ರಹಿತ ಕಾರ್ಮಿಕರೆಂದು ವರ್ಗೀಕರಿಸಲಾಗಿದೆ, ಮುಖ್ಯವಾಗಿ ಪ್ರೌಢ, ಪದವಿಪೂರ್ವ ಶಿಕ್ಷಣವನ್ನು ಪಡೆದ ಶಿಕ್ಷಿತ ಕಾರ್ಮಿಕರು, ಸೂಪರ್‌ವೈಸರ್ ಬ್ಲಾಸ್ಟರ್, ಡ್ರೈವರ್, ಎಲೆಕ್ಟ್ರಿಷಿಯನ್ಸ್, ಡ್ರಿಲ್ಲರ್ಸ್' ಆಪರೇಟರ್ಸ್ ಇತ್ಯಾದಿ ಸೇವೆಗಳಲ್ಲಿರುವರನ್ನು ಕುಶಲ ಕಾರ್ಮಿಕರು, ಹೆಲ್ಪರ್ಸ್, ಕ್ಲಿನರ್ಸ್, ಸ್ಯಾಂಪಲರ್ಸ್‌ಗಳನ್ನು ಅರೆ ಕುಶಲಿಗರೆಂದೂ, ಅಶಿಕ್ಷಿತ, ಅಮಾಯಕ ಮತ್ತು ಪ್ರಾವಿಣ್ಯತೆಯಿಲ್ಲದ ಕಾರ್ಮಿಕರನ್ನು ಕುಶಲರಹಿತ ಕಾರ್ಮಿಕರು ಎಂದು ಗುರುತಿಸಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಬುಡಕಟ್ಟು ಗಣಿ ಕಾರ್ಮಿಕ ಸಮುದಾಯಗಳು ತಮ್ಮ ದೈನಂದಿಕ ಬದುಕಿಗಾಗಿ, ಮತ್ತು ಕುಟುಂಬದ ನಿರ್ವಹಣೆಗಾಗಿ ಗಂಡು-ಹೆಣ್ಣು ದುಡಿಮೆಯಲ್ಲಿ ಸಮಾನವಾಗಿ ಪಾಲ್ಗೊಳ್ಳುತ್ತಿರುವದರಿಂದ ಜಿಲ್ಲೆಯ ಹತ್ತು ಗಣಿ ಉತ್ಪಾದನಾ ಸಂಸ್ಥೆಗಳಿಂದ ತಲಾ ೨೦ ಕಾರ್ಮಿಕರಂತೆ ಒಟ್ಟು ೨೦೦ ಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅದರಲ್ಲಿ ೧೦೦ ಪುರುಷ ಕಾರ್ಮಿಕ ೧೦೦ ಮಹಿಳಾ ಕಾರ್ಮಿಕರನ್ನು ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಜಾಗತೀಕರಣದ ಸಂದರ್ಭದಲ್ಲಿ "ಕೌಶಲ್ಯ"ವೆಂಬುದು ತುಂಬಾ ಚರ್ಚೆಯ ಹಾಗೂ ಮಹತ್ವಪೂರ್ಣ ವಸ್ತುವೆಂದೇ ಪರಿಗಣಿಸಲಾಗಿದೆ. ಯಾವುದೇ ಕ್ಷೇತ್ರಗಳಲ್ಲಿ ಆಯಾ ಉದ್ಯೋಗಿಯ, ಇಲ್ಲವೇ ನೌಕರರ ಅಥವಾ ಕಾರ್ಮಿಕರ ಸ್ಥಾನ-ಮಾನ ನಿರ್ಧಾರವಾಗುವುದು ಆಯಾ ವ್ಯಕ್ತಿಗಳು ಪಡೆದಿರುವ ಕೌಶಲ್ಯತೆಯುಳ್ಳ ಜ್ಞಾನದಿಂದ. ಹಾಗೆಯೇ ವಿವಿಧ ಕೌಶಲ್ಯತೆಯಿಂದ ಕೂಡಿದ ಉತ್ಪಾದನೆ ಹಾಗೂ ವಿತರಣೆಗಳು ಸಾಕಷ್ಟು ಲಾಭವನ್ನು ತಂದುಕೊಡುವ ಇಲ್ಲವೇ ಸಮಾಜದ ವಿಶೇಷವಾದ ಮಾನ್ಯತಗೆ ಒಳಗಾಗುತ್ತಿವೆ. ನಮ್ಮ ಪರಂಪರೆಯಲ್ಲಿ ಮನುವಾದಿಯ ನೆಲೆಗಳು ಆಳವಾಗಿ ಬೇರುಬಿಟ್ಟಿರುವದರಿಂದ, ಉತ್ಪಾದನೆಯ ವಲಯದಲ್ಲಿಯು ದೈಹಿಕ ಶ್ರಮಕ್ಕೆ ನೀಡಿರುವ ಗೌರವ ಮಾತ್ರ ತುಂಬಾ ಕನಿಷ್ಠವೆಂದೇ ಹೇಳಬಹುದು. ಆದರೆ ಇತ್ತೀಚಿನ ದಿನಗಳಲ್ಲಿ ಶ್ರಮಕ್ಕೆ ತುಂಬಾ ಗೌರವ ಉಂಟು. ಶ್ರಮವನ್ನು ಭೌದ್ಧಿಕ ಹಾಗು ದೈಹಿಕ ಶ್ರಮವೆಂದೂ ವರ್ಗಕರಿಸಲಾಗಿದೆ. ನಮ್ಮ ಸಮಾಜದಲ್ಲಿ ಭೌದ್ಧಿಕ ಶ್ರಮಕ್ಕೆ ಸಿಗುತ್ತಿರುವ ಗೌರವ, ಪ್ರೀತಿ, ಅನುಕಂಪಗಳು ದೈಹಿಕ ಶ್ರಮಕ್ಕೆ ದೊರೆಯುತ್ತಿಲ್ಲ. ಉತ್ಪಾದನಾ ಪ್ರಕ್ರಿಯೆಯಲ್ಲಿ ಯಾವುದೇ ಚಿಕ್ಕ ವಸ್ತುವಿನಿಂದ ಹಿಡಿದು ದೊಡ್ಡ ವಸ್ತುವಿನವರೆಗೂ ಸಿದ್ಧವಸ್ತುವನ್ನಾಗಿ ಪರಿವರ್ತಿಸುವಲ್ಲಿ ದೈಹಿಕಶ್ರಮವೇ ಮುಖ್ಯವೆನಿಸುತ್ತದೆ ವಿನಃ ಭೌದ್ಧಿಕ ಶ್ರಮವಂತೂ ಅಲ್ಲ.

ಆಧುನಿಕ ತಂತ್ರಜ್ಞಾನದಲ್ಲಿ ಕೈಗೊಳ್ಳುತ್ತಿರುವ ಉತ್ಪಾದನಾ ಸಂಬಂಧಗಳೆಲ್ಲವೂ ಉನ್ನತ ತಂತ್ರಜ್ಞಾನದಿಂದ ಕೂಡಿದ್ದು, ಅವುಗಳೆಲ್ಲಾ ಬಂಡವಾಳಸಂಬಂಧಿ ಉತ್ಪಾದನೆಯಾಗಿವೆ. ಅದರ ನಿರ್ವಹಣೆಗಾಗಿ ವೃತ್ತಿ ಆಧಾರಿತ ಶಿಕ್ಷಣದ ಜೊತೆಗೆ ವಿಶೇಷವಾದ ಜ್ಞಾನವನ್ನು ಪುರಸ್ಕರಿಸಲಾಗುತ್ತದೆ. ನಮ್ಮ ದೇಶದ ಪಾರಂಪರಿಕ ಉದ್ಯೋಗಗಳಾದ ಚಮ್ಮಾರಿಕೆ, ಕುಂಬಾರಿಕೆ, ನೇಕಾರಿಕೆ, ಕಮ್ಮಾರಿಕೆ, ಕಸೂತಿ ಮುಂತಾದ ನೂರಾರು ಗುಡಿಕೈಗಾರಿಕೆಗಳಲ್ಲಿ ತಯಾರಿಸಲಾಗುವ ವಸ್ತುಗಳನ್ನು ಉತ್ಪಾದಿಸುವವರು ಯಾವುದೆ ತಂತ್ರಜ್ಞಾನ, ಶಿಕ್ಷಣವನ್ನು ಪಡೆಯದ ಅನಕ್ಷರಸ್ಥರು ಎಂಬುದನ್ನು ಮನೋಗತ ಮಾಡಿಕೊಂಡಾಗ "ಕೌಶಲ್ಯ" ಅಥವಾ "ಕೌಶಲ್ಯರಹಿತ" ಪರಿಕಲ್ಪನೆಗಳು ಬಂಡವಾಳಶಾಹಿ ವ್ಯವಸ್ಥೆಯ ಕಪಟ ತಂತ್ರಗಳೆಂದೇ ಹೇಳಬಹುದು ಇಂದು ಕಂಪ್ಯೂಟರ್ ಹಾಗೂ ಬಯೋ-ಟೆಕ್ನಾಲಾಜಿಯ ಮುಂದೆ ಇನ್ನಿತರ ಎಲ್ಲಾ ಜ್ಞಾನಗಳು ಅಸ್ಪಷ್ಟವೆಂದೂ ಭಾವಿಸಲಾಗುತ್ತಿದೆ. ಕೆಲವು ಖಾಸಗಿ ಕಂಪನಿಗಳಲ್ಲಿ ವಿಶೇಷ ಕೌಶಲ್ಯತೆಯನ್ನು

ಪಡೆದ ಉದ್ಯೋಗಿಗಳಿಗೆ ಪ್ರತಿ ತಿಂಗಳು ಒಂದು ಲಕ್ಷ ರೂ.ಗಳಿಗಿಂತಲೂ ಅಧಿಕ ವೇತನವನ್ನು ಇನ್‌ಫೋಸಿಸ್, ವಿಪ್ರೋ ಇನ್ನಿತರ ಖಾಸಗಿ ಕಂಪನಿಗಳು ನೀಡುತ್ತಿವೆ. ನೋಬೆಲ್ ಪ್ರಶಸ್ತಿ ವಿಜೇತರಾದ ಪ್ರೊ. ಅಮರ್ತ್ಯಸೇನ್‌ರ ವಿಚಾರಗಳಿಗೆ ಕಾರ್ಮಿಕರ "ಕೌಶಲ್ಯ" ಹಾಗೂ "ಕೌಶಲ್ಯರಹಿತ" ಎಂಬೀ ಮಾನದಂಡಗಳನ್ನು ಅವರು "ಉದ್ಯೋಗಕ್ಕೆ-ಕಾಯಕಕ್ಕೆ ಪ್ರಾಪ್ತವಾಗುವ ಮಹತ್ವ ಇಲ್ಲವೇ, ಮರ್ಯಾದೆಯು ಉದ್ಯೋಗಿಯ ವರ್ಗ ಸ್ವರೂಪವನ್ನು ಹಾಗು ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುತ್ತದೆ. ಏಕೆಂದರೆ ವಿಲಾಸಿ ಅಥವಾ ಶ್ರೀಮಂತ ಕುಟುಂಬಗಳಲ್ಲಿ ದೈಹಿಕ ಶ್ರಮವನ್ನು ತುಂಬಾ ಕೀಳು ದೃಷ್ಟಿಯಿಂದ ನೋಡಲಾಗುತ್ತದೆ. ಈ ವರ್ಗದಲ್ಲಿ ದೈಹಿಕ ಶ್ರಮವು ಅವಮಾನದ ಅಥವಾ ತಮ್ಮ ಘನತೆಗೆ ಕುಂದುಂಟು ಮಾಡುವ ಸಂಗತಿಯಾಗಿರುತ್ತದೆ. ಇವರಿಗೆ ದೈಹಿಕ ಶ್ರಮವೆಂಬುದೇ ಮೈಲಿಗೆ. ಆದರೆ ಉಳಿದ ವರ್ಗಗಳಿಗೆ ದುಡಿದು ಉಣ್ಣಲೇಬೇಕಾದ ವರ್ಗಗಳಿಗೆ ಉದ್ಯೋಗ ಇಲ್ಲದಿರುವುದು ಅವಮಾನದ ಇಲ್ಲವೇ ಅದರಲ್ಲೂ ಅಗೌರವದ ಸಂಗತಿಯಾಗಿ ಬಿಡುತ್ತದೆ."[೫] ಎಂಬೀ ವಾದವನ್ನು ಪರಿಶೀಲಿಸಿದಾಗ ಆಧುನೀಕತೆಯು ವೃತ್ತಿಯ ವಿಗಂಡನೆಯಲ್ಲಿ ಪುರೋಹಿತಶಾಹಿವಾದವನ್ನು ಅಕ್ಷರಶಃ ಪಾಲಿಸುತ್ತಿದೆಂಬಂತೆ ಭಾಸವಾಗುತ್ತದೆ. ಏಕೆಂದರೆ ನಮ್ಮ ತಾತ್ವಿಕ ಚಿಂತನೆಯಲ್ಲಿ ಮಾನವನ ದೇಹಾಕೃತಿಯಲ್ಲಿಯೂ ತಲೆಯೇ ಶ್ರೇಷ್ಠ ಪಾದಗಳು ಕನಿಷ್ಠವೆಂಬಂತಹ ಮನೋಧರ್ಮವು ಜನರ ಉದ್ಯೋಗವನ್ನು ಪರಿಭಾವಿಸುತ್ತಿರುವುದು ದುರಂತವೇ ಸರಿ. ವಾಸ್ತವಿಕವಾಗಿ ನೋಡುವುದಾದರೆ ಕಾಲುಗಳೇ ಇಲ್ಲದ ದೇಹ ಅಥವಾ ತಲೆ ಅಪ್ರಸ್ತುತವೆಂಬ ಗ್ರಹಿಕೆಯು ನಮಗೆ ಇಲ್ಲಿಯವರಿಗೂ ಅರ್ಥವಾಗುತ್ತಿಲ್ಲವೆಂಬುದೇ ನಿಗೂಢವಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ವ್ಯವಸ್ಥೆಯ ವೃತ್ತಿ ವರ್ಗೀಕರಣವು ಗಣಿಕೈಗಾರಿಕೆಯನ್ನೂ ಆವರಿಸಿರುವುದರಿಂದ ಕೌಶಲ್ಯಆಧಾರಿತ ಕಾರ್ಮಿಕರನ್ನು ಹಾಗು ಕೌಶಲ್ಯರಹಿತರನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಗಣಿ ಕಾರ್ಮಿಕರಲ್ಲಿ ಪುರುಷ ಕಾರ್ಮಿಕರಲ್ಲಿ ಶೇಕಡ ೧೦ ರಷ್ಟು ಕಾರ್ಮಿಕರು ಡ್ರೈವರ್, ಕ್ಲೀನರ್, ಆಪರೇಟರ್ಸ್, ಕ್ಲೀನರ್ಸ್ ಇತ್ಯಾದಿ ವೃತ್ತಿಯಲ್ಲಿದ್ದಾರೆ. ಆದರೆ ಮಹಿಳೆಯರಲ್ಲಿ ಯಾವುದೇ ರೀತಿಯ ವಿಶೇಷ ಕೌಶಲ್ಯವನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಭಾರತ ಹಿಂದುಳಿದ ಹಾಗೂ ಅನಕ್ಷರಸ್ಥರನ್ನೊಳಗೊಂಡ ಶ್ರೀಮಂತ ದೇಶವಾದ್ದರಿಂದ ಗಣಿಗಾರಿಕೆಯಲ್ಲಿ ಅನಕ್ಷರಸ್ಥ ಹಾಗೂ ಬುಡಕಟ್ಟು, ಸಮುದಾಯಗಳ ಕಾರ್ಮಿಕರ ಪ್ರಮಾಣ ಶೇಕಡ ೬೦ ರಷ್ಟಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಉದ್ಯೋಗನಿರತ ಕಾರ್ಮಿಕರಲ್ಲಿ ಯಾವುದೇ ಭಿನ್ನತೆಯನ್ನು ಮಾಡದೇ ಮಹಿಳಾ ಹಾಗೂ ಪುರುಷ ಕಾರ್ಮಿಕರನ್ನು ಶೇಕಡ ೫೦ರಂತೆ ಆಯ್ಕೆಗೆ ಪರಿಗಣಿಸಲಾಗಿದೆ. ಇಂತಹ ಕ್ರಮದಿಂದ ಮಹಿಳೆ ಹಾಗೂ ಪುರುಷ ಪರಸ್ಪರ ದುಡಿಮೆಯಲ್ಲಿ ತೊಡಗಿಕೊಂಡಿದ್ದರೂ ಆರ್ಥಿಕ ಸ್ವಾತಂತ್ರ್ಯವು ಯಾರಲ್ಲಿ ಕೇಂದ್ರೀಕೃತಗೊಂಡಿದೆ ಎಂಬುದನ್ನು ಪತ್ತೆಹಚ್ಚಲು ಸಾಧ್ಯವಾಗುತ್ತದೆ.

## ೩.೫. ಜನನ ಮತ್ತು ಮರಣ ಪ್ರಮಾಣ

ಯಾವುದೇ ರಾಷ್ಟ್ರ ಆರ್ಥಿಕವಾಗಿ ಸಬಲತೆಯನ್ನು ಹೊಂದಿ, ಸದೃಢಗೊಳ್ಳಬೇಕಾದರೆ ಆ ದೇಶದ ಮಾನವ ಸಂಪನ್ಮೂಲವು ಆರೋಗ್ಯ ಮತ್ತು ಹಸನ್ಮುಖಿಯಾಗಿರಬೇಕೆಂಬುದು ಈಗಾಗಲೇ ಜಾಗತೀಕ ಮಟ್ಟದಲ್ಲಿ ಸಾಭೀತಾಗಿದೆ. ಇಂತಹ ಸಂಗತವಾದ ವಿಚಾರಗಳನ್ನು ಭಾರತೀಯ ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳೊಂದಿಗೆ ಹೋಲಿಕೆ ಮಾಡಿದಾಗ, ಪಾಶ್ಚಿಮಾತ್ಯ ದೇಶಗಳ ಆಹಾರ, ಪರಿಸರ, ಆರೋಗ್ಯ, ಉದ್ಯೋಗದ ಸೌಲಭ್ಯಗಳು ಯತೇಚ್ಛವಾಗಿರುವುದರಿಂದ ಆ ದೇಶದ ಮಾನವ ಸಂಪನ್ಮೂಲವು ಸಧೃಡತೆ, ದಕ್ಷತೆ, ದೀರ್ಘಾಯುಷಿ ಹಾಗೂ ಕಷ್ಟಸಹಿಷ್ಣುಗಳೆಂಬ ಪ್ರತೀತಿಯಿದೆ. ಆದರೆ ಭಾರತೀಯ ಕಾರ್ಮಿಕರು ಅನಾರೋಗ್ಯ, ಅದಕ್ಷತೆ, ಅಜ್ಞಾನ ಮತ್ತು ಸೋಮಾರಿತನಗಳಿಂದಾಗಿ ಭಾರತದ ಕಾರ್ಮಿಕನು ತುಂಬಾ ಚರ್ಚೆಗೊಳಗಾಗಿದ್ದಾನೆ. ಯಾವುದೇ ವಲಯದ ಅಭಿವೃದ್ಧಿಯು ಸಹ ಆಯಾ ವಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಧೃಡ ಕಾರ್ಮಿಕರನ್ನು ಒಳಗೊಂಡಿರುತ್ತದೆ. ಇಂತಹ ಸಧೃಡತೆಯನ್ನು ಕಂಡುಕೊಳ್ಳಬೇಕಾದರೆ ತಾಯಂದಿರ ಆರೋಗ್ಯ, ಆಹಾರ ಪದ್ಧತಿ, ವಸತಿ ಸ್ವರೂಪ ಹಾಗೂ ಸುತ್ತಲಿನ ಪರಿಸರ ಮಗುವಿನ ಜನನ-ಮರಣದ ಪ್ರಮಾಣವನ್ನು ನಿರ್ಧರಿಸುವುದರಿಂದ ಬುಡಕಟ್ಟು ಗಣಿ ಕಾರ್ಮಿಕರಲ್ಲಿರುವ ಜನನ-ಮರಣದ ಪ್ರಮಾಣಗಳನ್ನು ಅರಿಯುವುದು ಅತ್ಯವಶ್ಯಕವಾಗಿದೆ ಈ ಹಿನ್ನೆಲೆಯಲ್ಲಿ ೩.೭ರ ಕೋಷ್ಟಕವನ್ನು ಗಮನಿಸೋಣ.

**ಕೋಷ್ಟಕ ೩.೭ : ಕಾರ್ಮಿಕರಲ್ಲಿನ ಜನನ-ಮರಣ ಪ್ರಮಾಣ**

| ವಿವರಗಳು | ಜನನ | | | ಮರಣ | | | | |
|---|---|---|---|---|---|---|---|---|
| ಲಿಂಗವಾರು ಹಂಚಿಕೆ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಇತರೆ | ಒಟ್ಟು |
| ತಾಯಂದಿರ ಸಂಖ್ಯೆ | ೧೮ | ೨೦ | ೩೮ | ೦೬ | ೧೧ | ೧೭ | ೧೫ | ೭೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈ ಮೇಲಿನ ಕೋಷ್ಟಕ ೩.೭ರ ಪ್ರಕಾರ ಕಳೆದ ವರ್ಷಗಳಿಂದಾದ ಬುಡಕಟ್ಟು ಗಣಿ ಕಾರ್ಮಿಕರಲ್ಲಿನ ಮಕ್ಕಳ ಜನನ ಮತ್ತು ಮರಣದ ಪ್ರಮಾಣವನ್ನು ತೋರಿಸುತ್ತದೆ. ಕ್ಷೇತ್ರಕಾರ್ಯದಲ್ಲಿ ೧೦೦ ಮಹಿಳಾ ಕಾರ್ಮಿಕರಿಗೆ ಪ್ರತಿಯಾಗಿ ೭೦ ತಾಯಂದಿರು ದೊರೆಕಿದ್ದಾರೆ. ಅವರಲ್ಲಿನ ಶಿಶುಗಳ ಜನನ ಪ್ರಮಾಣದ ಸಂಖ್ಯೆ ೩೮ ಮತ್ತು ಮರಣದ ಪ್ರಮಾಣ ಸಂಖ್ಯೆ ೧೭ ಇದೆ. ಇತರೇ ೧೫ ಜನ ಮಹಿಳಾ ಕಾರ್ಮಿಕರಲ್ಲಿ ಗರ್ಭಪಾತ, ಮುಟ್ಟು ನಿಲ್ಲದಿರುವಿಕೆ, ರಕ್ತಹೀನತೆ, ಗರ್ಭಕೋಶದಲ್ಲಿ ನೋವು (ಗಾಯ) ಇತ್ಯಾದಿ ಕಾರಣಗಳಿಂದಾಗಿ ಜನನ ಕಾರ್ಯನಡೆದಿರುವುದು ಕಂಡುಬಂದಿರುವುದಿಲ್ಲ.

ಬುಡಕಟ್ಟು ಕುಟುಂಬಗಳ ಮಕ್ಕಳ ಜನನ ಕಾರ್ಯ ಚಟುವಟಿಕೆಯಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳಲ್ಲಿ ವ್ಯತ್ಯಾಸವಿರುವುದನ್ನು ಕಾಣಬಹುದು. ಅದರಲ್ಲಿ ಗಂಡು ೨೪ ಇದ್ದರೆ ಹೆಣ್ಣು ೩೧ ಇದೆ. ಇಲ್ಲಿ ವಿಶೇಷವಾಗಿ ಗಮನಿಸಬೇಕಾದ ಅಂಶವೆನೆಂದರೆ ಗಂಡಸರಿಗಿಂತ ೭ ಹೆಣ್ಣು ಮಕ್ಕಳು ಹೆಚ್ಚಾಗಿದ್ದರೂ ಶಿಶು ಮರಣದ ಸನ್ನಿವೇಶದಲ್ಲಿ ಹೆಣ್ಣು ಶಿಶುಗಳ ಪ್ರಮಾಣ ಹೆಚ್ಚಾಗಿರುವುದು ಆಶ್ಚರ್ಯವನ್ನು ಮೂಡಿಸುತ್ತದೆ. ಜನ್ಮಪಡೆದ ಗಂಡು ಶಿಶುಗಳು ೦೬ ಮರಣ ಹೊಂದಿದರೆ, ಹೆಣ್ಣು ಶಿಶುಗಳು ೧೧ ಸಾವಿಗೀಡಾಗುತ್ತಿವೆ. ಇಲ್ಲಿ ಮುಖ್ಯವಾಗಿ ಚರ್ಚೆಗೆ ಅವಕಾಶ ಮಾಡಿಕೊಡುವ ಅಂಶವೇನೆಂದರೆ ಹೆಣ್ಣು ಶಿಶುಗಳ ಮರಣದಲ್ಲಿನ ಏರಿಕೆಯು ಅವುಗಳ ಬಗ್ಗೆಯಿರುವ ಬುಡಕಟ್ಟು ಗಣಿಕಾರ್ಮಿಕರ ನಿರಾಸಕ್ತಿಯನ್ನು ತೋರಿಸುತ್ತದೆ. ಇದಕ್ಕೆ ಪೂರಕವಾಗಿ ನೋಬಲ್ ಪ್ರಶಸ್ತಿ ವಿಜೇತ ಪ್ರೊ. ಅಮರ್ತ್ಯಸೇನ್ ಅವರು "ಮರಣ ಪ್ರಮಾಣದಲ್ಲಿನ ಲಿಂಗ ಸಂಬಂಧಿ ವ್ಯತ್ಯಾಸವು ಭಾರತದ ಸಂದರ್ಭದಲ್ಲಿ ಕೇವಲ ಮಹಿಳೆಯರಲ್ಲಿ ಪುರುಷರಿಗಿಂತ ಅಧಿಕವಿದೆ ಎನ್ನುತ್ತಾರೆ. ಅಖಿಲ ಭಾರತ ಮಟ್ಟದಲ್ಲಿ ೫ ರಿಂದ ೧೪ ಮತ್ತು ೧೫ ರಿಂದ ೩೪ ವರ್ಷಗಳ ವಯೋಗುಂಪಿನಲ್ಲಿ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಕ್ರಮವಾಗಿ ಶೇಕಡ ೩೧.೫೭ ಮತ್ತು ಶೇಕಡ ೨೫ ರಷ್ಟು ಅಧಿಕವಾಗಿದೆ"[೬] ಎಂಬುದನ್ನು ಪ್ರಾಯೋಗಿಕವಾಗಿ ಸ್ಪಷ್ಟಪಡಿಸಿದ್ದಾರೆ. ಇಂತಹ ಪರಿಸ್ಥಿತಿ ಬುಡಕಟ್ಟು ಕುಟುಂಬಗಳಲ್ಲಿ ಗೋಚರಿಸುತ್ತದೆ.

ಈಗಾಗಲೇ ಕೆಲವು ದೈಹಿಕ ರಚನಾಶಾಸ್ತ್ರಜ್ಞರ ಪ್ರಕಾರ ಮಹಿಳೆಯರ ದೇಹ ರಚನೆಯು ನೈಸರ್ಗಿಕವಾಗಿ ಪ್ರತಿಕೂಲ ಸಂದರ್ಭಗಳಲ್ಲೂ ಸ್ತ್ರೀಯರು ಪುರುಷರಿಗಿಂತ ಹೆಚ್ಚಾಗಿ ಬದುಕುಳಿಯುವಂತಹ ಸಾಮರ್ಥ್ಯವನ್ನು ಪಡೆದಿದ್ದಾರೆ. ಆಕೆಯಲ್ಲಿ ದೈಹಿಕ ಪರಿಶ್ರಮ, ಕಷ್ಟಸಹಿಷ್ಣುತೆ, ರೋಗನಿರೋಧಕ ಗುಣ ಹಾಗು ಜೈವಿಕ ಸಾಮರ್ಥ್ಯ ಇತ್ಯಾದಿಗಳು ಪುರುಷರಿಗಿಂತ ಉತ್ತಮವಾಗಿರುತ್ತವೆ ಎನ್ನಲಾಗಿದೆ. ಅಂದ ಮೇಲೆ ಸ್ತ್ರೀ-ಪುರುಷರಿಬ್ಬರಿಗೂ ಸಮಾಜದಲ್ಲಿ ಸಮಾನ-ಅವಕಾಶ, ಸಮಾನ-ಸ್ಥಾನಮಾನ ಹಾಗೂ ಭಾಗವಹಿಸುವಿಕೆ ಸಮಾನವಾಗಿದ್ದ ಪಕ್ಷದಲ್ಲಿ ಸ್ತ್ರೀಯರ ಮರಣದ ಪ್ರಮಾಣವು ಎಲ್ಲಾ ವಯೋಗುಂಪುಗಳಲ್ಲೂ ಪುರುಷರಿಗಿಂತ ಕಡಿಮೆ ಇರಬೇಕಾಗಿತ್ತು. ಆದರೆ ವಾಸ್ತವಿಕತೆಯಲ್ಲಿರುವ ಸನ್ನಿವೇಶವೇ ಬೇರೆಯಾಗಿದೆ. ಸೇನ್ ಪ್ರಕಾರ "ಸಮಾಜದಲ್ಲಿ ವ್ಯಾಪಕವಾಗಿ ಬೇರು ಬಿಟ್ಟಿರುವ ಲಿಂಗ ತಾರತಮ್ಯದ ಪರಿಣಾಮವಾಗಿ ಇಂತಹ ಅಸಮಾನತೆಗಳು ಉಂಟಾಗಿವೆ"[೭] ಎಂಬ ಹೇಳಿಕೆಗೆ ಪುಷ್ಠಿನೀಡುವಂತೆ ಬುಡಕಟ್ಟು ಗಣಿ ಕಾರ್ಮಿಕರಲ್ಲಿ ಹೆಣ್ಣು ಶಿಶುವಿನ ರಕ್ಷಣೆ, ಪಾಲನೆ-ಪೋಷಣೆಗಳಲ್ಲಿ ಅವುಗಳು ಚಿಕ್ಕಂದಿನಿಂದಲೇ ತಾತ್ಸಾರಕ್ಕೆ, ಅನಾದರಣೆಗೆ ಮತ್ತು ತಿರಸ್ಕಾರಕ್ಕೆ ಗುರಿಯಾಗುವುದರಿಂದ ಹೆಣ್ಣುಶಿಶುಗಳ ಮರಣದ ಪ್ರಮಾಣ ಹೆಚ್ಚಾಗಲು ಕಾರಣವಾಗಿದೆ.

## ೩.೬. ಗಣಿ ಕಾರ್ಮಿಕರ ವಯೋಮಾನ

ಯಾವುದೇ ಕುಟುಂಬ ಅಥವಾ ಉತ್ಪಾದನಾ ವ್ಯವಸ್ಥೆಯಲ್ಲಿ ಆಯಾ ಸದಸ್ಯರ ಅಥವಾ ಕಾರ್ಮಿಕರ ವಯೋಮಾನದ ಮಾನದಂಡವು ಆಯಾ ಕುಟುಂಬಗಳ ಅಥವಾ ಉತ್ಪಾದನಾ ವ್ಯವಸ್ಥೆಯ ಸ್ಥಾನ-ಮಾನಗಳನ್ನು ನಿರ್ಧರಿಸುವಲ್ಲಿ ಪ್ರಮುಖಪಾತ್ರವನ್ನು ವಹಿಸುತ್ತದೆ. ಮಾನವನ ಉತ್ತಮವಾದ ದೈಹಿಕ ಸಾಮರ್ಥ್ಯತೆ ಹಾಗೂ ಅವನ ಆರೋಗ್ಯವಂತ ಸ್ಥಿತಿಯು ಏನೆಲ್ಲಾವನ್ನು ಸಾಧಿಸುವಂತಹ ಛಲ, ಹುಮ್ಮಸ್ಸು, ಹುರುಪುಗಳು ಇದಕ್ಕೆ ಪೂರಕವಾಗಿ ನಿಲ್ಲುತ್ತವೆ. ಮಾನವನ ವಯೋಮಾನದ ಆಧಾರದ ಮೇಲೆ ಬಾಲ್ಯಾವಸ್ಥೆ, ಯೌವನಾವಸ್ಥೆ, ವೃದ್ಧಾಪ್ಯ ಎಂಬೀ ವೈವಿಧ್ಯತೆಯು ಮಾನವನಲ್ಲಿ ಅಡಗಿರುವ ದೈಹಿಕ, ಮಾನಸಿಕ, ಭೌದ್ಧಿಕ, ಸಾಮರ್ಥ್ಯವನ್ನು ಅಳೆಯಲು ಸಹಕಾರಿಯಾಗಿವೆ. ವಿಶ್ವದ ಯಾವುದೇ ರಾಷ್ಟ್ರವನ್ನು ಗಣನೆಗೆ ತೆಗೆದುಕೊಂಡರೂ ಆ ರಾಷ್ಟ್ರದಲ್ಲಿರುವ ಆರೋಗ್ಯವಂತ ಮಾನವ ಸಂಪನ್ಮೂಲವು ಅದರ ಯೌವನಾವಸ್ಥೆಯ ಕಾಲಘಟ್ಟದಲ್ಲಿ ಆಯಾ ದೇಶಗಳ ಸಾಮಾಜಿಕ, ಆರ್ಥಿಕ, ರಾಜಕೀಯ ನಿರ್ಧಾರಗಳಲ್ಲಿ ತನ್ನದೇ ಆದ ಛಾಪನ್ನು ಬೀರುವಂಥಹದ್ದು, ಈ ಕಾರಣದಿಂದಾಗಿಯೆ ಪ್ರತಿಯೊಂದು ರಾಷ್ಟ್ರಗಳಲ್ಲಿ ವಿವಿಧ ಯೋಜನೆ ಅಥವಾ ನೀತಿ-ನಿಯಮಗಳು ಆ ದೇಶದಲ್ಲಿರುವ ಯುವಶಕ್ತಿಗೆ ಅನುಗುಣವಾಗಿಯೇ ನಿರ್ಧರಿಸಲ್ಪಡುತ್ತವೆ.

ಜಿಲ್ಲೆಯಲ್ಲಿರುವ ಗಣಿಕೈಗಾರಿಕೆಯು ಹೆಚ್ಚಾಗಿ ಕಾರ್ಮಿಕರ ದೈಹಿಕ ಸಾಮರ್ಥ್ಯವನ್ನು ಆಧರಿಸಿರುವುದರಿಂದ ದೈಹಿಕ ಸಾಮರ್ಥ್ಯವುಳ್ಳ ಕಾರ್ಮಿಕ ಶಕ್ತಿಯ ಅವಶ್ಯಕತೆಯು ಜಿಲ್ಲೆಯ ಗಣಿಗಾರಿಕೆಗೆ ಬೇಕಾಗಿದೆ. ಹೀಗಾಗಿ ಕ್ಷೇತ್ರಕಾರ್ಯದುದ್ದಕ್ಕೂ ಇಳಿವಯಸ್ಸಿನ ಹಿರಿಯ ಕಾರ್ಮಿಕರು ಯಾವುದೇ ಗಣಿ ಸಂಸ್ಥೆಯಲ್ಲಿ ತುಂಬಾ ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತಾರೆ. ತೆರೆದ ಗಣಿಗಾರಿಕೆಯು ಮೂಲತಃ ಮಾಲಿನ್ಯವುಳ್ಳ ಉತ್ಪಾದನೆಯಾಗಿದ್ದು, ಇಲ್ಲಿ ಮಣ್ಣು, ಗಾಳಿ, ವಾಹನ, ಧೂಳು ಸರ್ವೇಸಾಮಾನ್ಯ. ಇಂತಹ ಮಾಲಿನವಾದ ವಾತಾವರಣದಲ್ಲಿ ಕೆಲಸವನ್ನು ನಿರ್ವಹಿಸಲು ಯೌವನಾವಸ್ಥೆಗೆ ಮಾತ್ರ ಸಾಧ್ಯವಿರುವುದರಿಂದ ಗಣಿಯಲ್ಲಿ ಹೆಚ್ಚಾಗಿ ಯುವಕ, ಯುವತಿಯರೇ ಕಂಡುಬರುತ್ತಾರೆ. ಅದನ್ನು ೩.೮ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೩.೮ : ಗಣಿ ಕಾರ್ಮಿಕರ ವಯೋಮಿತಿ**

| ಕ್ರ.ಸ. | ವಿವರಗಳು | ಕಾರ್ಮಿಕರ ವಯಸ್ಸು | | | | |
|---|---|---|---|---|---|---|
| ೧. | ಕಾರ್ಮಿಕರ ವಯಸ್ಸು | ೮-೧೪ | ೧೫-೩೦ | ೩೧-೪೫ | ೪೫ಕ್ಕೂ ಮೇಲ್ಪಟ್ಟ | ಒಟ್ಟು |
| ೨. | ಕಾರ್ಮಿಕರ ಸಂಖ್ಯೆ | ೨೫ | ೬೫ | ೯೦ | ೨೦ | ೨೦೦ |
| ೩. | ಶೇಕಡವಾರು | ೧೨.೫ | ೩೨.೫ | ೪೫ | ೧೦ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಗಣಿ ಕೈಗಾರಿಕೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪುರುಷ ಮತ್ತು ಮಹಿಳಾ ಕಾರ್ಮಿಕರ ವಯಸ್ಸಿನ ಅವಧಿಯನ್ನು ಸ್ಪಷ್ಟಪಡಿಸುತ್ತದೆ. ಗಣಿಗಾರಿಕೆಯ ವೃತ್ತಿಯು ಕಾರ್ಮಿಕರ ದೈಹಿಕ ಸಾಮರ್ಥ್ಯವನ್ನು ಅವಲಂಬಿಸಿರುವುದರಿಂದ ೧೫ ರಿಂದ ೪೫ ವರ್ಷದೊಳಗಿನ ಕಾರ್ಮಿಕರ ಪ್ರಮಾಣವು ಶೇಕಡ ೭೭ ಕ್ಕಿಂತಲೂ ಹೆಚ್ಚಿದೆ. ಇದಕ್ಕೆ ಕಾರಣ ಗಣಿಗಾರಿಕೆಯ ವೃತ್ತಿಯು ತುಂಬಾ ಅಪಾಯಕಾರಿಯಾಗಿದ್ದು, ಸಾಕಷ್ಟು ಮಾಲಿನ್ಯದಿಂದ ಕೂಡಿದೆ. ಇದರಲ್ಲಿ ಕಾರ್ಮಿಕನ ವೃತ್ತಿ-ಜೀವನವು ದಿನಾಲು ಸಾವು ಬದುಕಿನ ನಡುವೆ ನಡೆಯುವ ಉಯ್ಯಾಲೆಯಾಗಿರುತ್ತದೆ. ಹೇಗೆಂದರೆ ಗಣಿಯಲ್ಲಿ ಭೂಗರ್ಭದಿಂದ ಅದಿರನ್ನು ಹೊರತೆಗೆಯಲು ಸುಮಾರು ೨೦ ಅಡಿಗಳಿಂದ ೫೦ ಅಡಿಗಳಷ್ಟು ಕೊಳವೆ ಬಾವಿಯನ್ನು ಕೊರೆದು, ಆ ರಂಧ್ರಗಳ ತುಂಬಾ ಸೋಡಿಯಂ ಮತ್ತು ಡೆಟೋನೇಟರ್ಸ್‌ಗಳನ್ನು ತುಂಬಿ ಸ್ಫೋಟಿಸಬೇಕಾಗುತ್ತದೆ. ಇಂತಹ ಕಾರ್ಯವು ತುಂಬಾ ಚಾಕ ಚಾಕ್ಯತೆಯಿಂದ ಕೂಡಿರುತ್ತದೆ. ಹಾಗೂ ಅಪಾಯಕಾರಿಯು ಸಹ. ಇಂತಹ ಕಾರ್ಯವನ್ನು ನಿರ್ವಹಿಸಲು ಕಾರ್ಮಿಕನ ವಯಸ್ಸು ಮುಖ್ಯವಾಗಿರುತ್ತದೆ. ಗಣಿಗಾರಿಕೆಯು ಧೂಳು, ಮಣ್ಣು, ಗಾಳಿ, ಭಾರೀ ವಾಹನಗಳ ಸಂಚಾರ, ಚಾಲಕನ ನಿರ್ಲಕ್ಷತೆಯಿಂದಾಗಿ ಸಾವು ಸಾಮಾನ್ಯವಾಗಿವೆ. ಕೆಲವೊಮ್ಮೆ ಕಾರ್ಮಿಕರು ಕೆಲಸದಲ್ಲಿ ತೊಡಗಿದ್ದಾಗ, ಇದ್ದಕ್ಕಿದ್ದಂತೆ ಯಾವುದಾದರೂ ವಿಷಾ ಅನಿಲ ಸ್ಫೋಟಗೊಂಡಾಗ, ಕಾರ್ಮಿಕ ಸಾವನ್ನಪ್ಪಬೇಕಾದ ಸಂಗತಿಗಳು ಅಧಿಕವಾಗಿವೆ. ಇಂತಹ ಅಪಾಯಕಾರಿ ಕೆಲಸವನ್ನು ನಿರ್ವಹಿಸುವ ಸಾಮರ್ಥ್ಯ ಯುವಕರಿಗೆ ಹಾಗೂ ಮಧ್ಯ ವಯಸ್ಸಿನವರಿಗೆ ಮಾತ್ರ ಇಂತಹ ಶಕ್ತಿ-ಸಾಮರ್ಥ್ಯ, ಲವಲವಿಕೆ ಹಾಗೂ ಚಾಕ-ಚಾಕತ್ಯೆಯಿಂದ ಕಾರ್ಯನಿಭಾಯಿಸಲು ಸಾಧ್ಯವಾಗಿದೆ. ಗಣಿಗಾರಿಕೆಯಲ್ಲಿ ಶೇಕಡ ೭೭ರಷ್ಟು ಯೌವನಾಯುಕ್ತ ಕಾರ್ಮಿಕ ಸಂಪನ್ಮೂಲವು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಹಾಗೆಯೇ ೪೦ ವರ್ಷಕ್ಕೆ ಮೇಲ್ಪಟ್ಟ ಕಾರ್ಮಿಕರಲ್ಲಿ ಉತ್ಸಾಹ, ಕೆಲಸದ ಆಸಕ್ತಿ, ಲವಲವಿಕೆಯ ಪ್ರವೃತ್ತಿ ಕಡಿಮೆಯಾಗುವುದರಿಂದ ಗಣಗಾರಿಕೆಗೆ ಇಂತಹ ನಿರುತ್ಸಾಹ ಕಾರ್ಮಿಕರು ಬೇಡವಾಗುತ್ತಾರೆ. ಅನೇಕ ಖಾಸಗಿ ಗಣಿಸಂಸ್ಥೆಗಳಲ್ಲಿ ಸುಮಾರು ೨೦ ವರ್ಷಗಳಿಂದ ಸೇವೆ ಸಲ್ಲಿಸಿದ್ದ ಕಾರ್ಮಿಕರಿಗೆ ಭವಿಷ್ಯಕ್ಕಾಗಿ ಯಾವುದೇ ಕಾರ್ಯಯೋಜನೆಯನ್ನು ಕೈಗೊಂಡಿಲ್ಲ. ಅಂತಹ ಹಿರಿಯ ಕಾರ್ಮಿಕರೆಲ್ಲ ಗಣಿ ಮಾಲೀಕರ ಬಗ್ಗೆ ಅಸಂತೃಪ್ತರಾಗಿದ್ದಾರೆ. ಆದರೆ ಸಂಡೂರು ತಾಲ್ಲೂಕಿನ ದೋಣಿಮಲೈನಲ್ಲಿರುವ N.M.D.C. ಹಾಗೂ SMIOREಗಳಲ್ಲಿ ಸರ್ಕಾರದ ನಿವೃತ್ತಿ ವಯಸ್ಸಿನ ತನಕ ಕಾರ್ಮಿಕರು ಕಾರ್ಯನಿರ್ವಹಿಸುತ್ತಿರುವುದನ್ನು ನೋಡಬಹುದು. N.M.D.C. ಭಾರತ ಸರ್ಕಾರದ ಅಧೀನ ಸಂಸ್ಥೆಯಾಗಿದ್ದರಿಂದ ಇಲ್ಲಿನ ಕಾರ್ಮಿಕರಿಗೆ ವೇತನ, ತುಟ್ಟಿಭತ್ಯೆ, ಸಾಮಾಜಿಕ ಭದ್ರತಾ ಕ್ರಮಗಳು, ವೈದ್ಯಕೀಯ ಸೇವೆಗಳು ಅಚ್ಚುಕಟ್ಟಾಗಿ ದೊರೆಯುತ್ತವೆ. ಆದರೆ ಜಿಲ್ಲೆಯ ಖಾಸಗಿ ಗಣಿಸಂಸ್ಥೆಗಳಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಕಾರ್ಮಿಕರಿಗೆ ಇಂತಹ ಸೌಲಭ್ಯಗಳು ದೊರೆಯುತ್ತವೆ. ಇತ್ತೀಚೆಗೆ ಸಂಡೂರಿನ ಖಾಸಗಿ 'ಫಮೆಂಟೋ' ಕಂಪನಿಯು ಸಹ

ಸರ್ಕಾರದ ಹತ್ತಾರು ಕಾಯ್ದೆಕಾನೂನುಗಳ ಪ್ರಕಾರ ತನ್ನ ಗಣಿಸಂಸ್ಥೆಯ ಉದ್ಯೋಗಿಗಳಿಗೆ ವಿವಿಧ ಕಾರ್ಯಯೋಜನೆಗಳನ್ನು ಜಾರಿಗೊಳಿಸಿದೆ. ಭಾರತ ಸರ್ಕಾರದ ೧೯೮೬ರ ಬಾಲಾ ಕಾರ್ಮಿಕರ ನಿಷೇಧ ಮತ್ತು ನಿಯಂತ್ರಣ ಕಾಯ್ದೆಯ ಪ್ರಕಾರ ೧೪ ವರ್ಷದೊಳಗಿನ ಮಕ್ಕಳನ್ನು ಯಾವುದೇ ಅಪಾಯಕಾರಿ ಕೆಲಸಗಳಲ್ಲಿ ನೇಮಿಸಿಕೊಳ್ಳಬಾರದು ಎಂದೂ ಆದೇಶ ಹೊರಡಿಸಿದ್ದರೂ, ಗಣಿಗಾರಿಕೆಯಲ್ಲಿ ಹಲವು ಕೆಲಸ ಕಾರ್ಯಗಳಿಗೆ ಮಕ್ಕಳ ಬಳಕೆಯು ಸಹಜವಾಗಿ ಕಂಡುಬರುತ್ತದೆ.

ಕಾನೂನಿನ್ವಯ ಅಪಾಯಕಾರಿಯಲ್ಲದ ಕಾರ್ಯಾಚಟುವಟಿಕೆಗಳಲ್ಲಿಯು ಮಕ್ಕಳು ತೊಡಗಿರುವುದು ಕಾನೂನು ಬಾಹಿರವೆಂದೂ ಕೈಗಾರಿಕಾ ಕಾಯ್ದೆ ಘೋಷಿಸಿದ್ದರೂ ಅಪಾಯಕಾರಿಯಾದ ಗಣಿಗಾರಿಕೆಯಲ್ಲಿ ಇಂತಹ ಚಿಕ್ಕ ಮಕ್ಕಳ ಬಳಕೆಯಲ್ಲಿ ಹೆಚ್ಚಾಗಿ ಹೆಣ್ಣು ಮಕ್ಕಳೇ ಇರುವುದು ಸಹ ತುಂಬಾ ಕಳವಳಕಾರಿ. ಇವರು ತಮ್ಮ ತಂದೆ-ತಾಯಂದಿರು ನಿರ್ವಹಿಸುವ ಕೆಲಸಕ್ಕೆ ಸಹಾಯಕರಾಗಿ, ಇಲ್ಲವೇ ಚಿಕ್ಕ-ಪುಟ್ಟ ಮಕ್ಕಳನ್ನು ಕೆಲಸದ ಸಮಯದಲ್ಲಿ ಸಂತೈಸಲಿಕ್ಕೆ ಆರಂಭದಲ್ಲಿ ಬಳಕೆಯಾಗುತ್ತಾರೆ. ನಂತರ ಇವರು ಕಾಲಕ್ರಮೇಣ ಜರಡಿ ಹಿಡಿಯಲು, ಕಬ್ಬಿಣ ಅಂಶವಿಲ್ಲದ ಕಲ್ಲನ್ನು, ಆರಿಸುವುದು, ಕಛೇರಿಗಳಲ್ಲಿ ಕಸಗೂಡಿಸಲು ಹಾಗೂ ಟೀ-ಸಿಗರೇಟ್‌ಗಳನ್ನು ತರಲು ಬಳಸಿಕೊಳ್ಳಲಾಗುತ್ತದೆ. ಅಂತಹ ಬಾಲಕಾರ್ಮಿಕರ ಪ್ರಮಾಣವು ಶೇಕಡ ೧೨.೫ರಷ್ಟು ಇರುವುದನ್ನು ಕ್ಷೇತ್ರಕಾರ್ಯದ ಸಮೀಕ್ಷೆಯಿಂದ ತಿಳಿದುಬರುತ್ತದೆ. ಒಟ್ಟಾರೆಯಾಗಿ ಗಣಿಗಾರಿಕೆಯು ಸಾಮರ್ಥ್ಯಕ್ಕನುಸಾರವಾಗಿ, ವಯಸ್ಸಿಗನುಗುಣವಾಗಿ ಚಾಣಕ್ಷತೆ ಆಧಾರಿತ ವೃತ್ತಿಯಾಗಿದೆ ಎಂದೂ ಹೇಳಬಹುದು. ಕೋಷ್ಟಕದಲ್ಲಿಯ ಶೇಕಡ ೧೨.೫ ರಷ್ಟು ಕಾರ್ಮಿಕರು ೪೫ ವರ್ಷ ಮೇಲ್ಪಟ್ಟವರಾಗಿದ್ದು ಅವರು ಬೇರೆ ಬೇರೆ ಕಂಪನಿಗಳಲ್ಲಿ ೨೦ ರಿಂದ ೩೦ ವರ್ಷಗಳವರೆಗೆ ಪ್ರಾಮಾಣಿಕವಾಗಿ ಸೇವೆ ಸಲ್ಲಿಸಿರುವುದರಿಂದ ಕೆಲವು ಮಾಲಿಕರು ಅಥವಾ ಗಣಿ ಕಂಪನಿಯ ಅಧಿಕಾರಿಗಳು ಅನುಕಂಪದ ಮೇಲೆ ಹೆಲ್ಪರ್, ಸ್ವೀಪರ್, ವಾಚ್‌ಮನ್ ಇತ್ಯಾದಿ ತಾತ್ಕಾಲಿಕ ಕೆಲಸ ನೀಡುವ ಮೂಲಕ ಉದ್ಯೋಗವನ್ನು ಒದಗಿಸಿಕೊಡಲಾಗಿದೆ. ಆದರೆ ಇಂತಹ ಉದ್ಯೋಗ ಹಾಗೂ ವೇತನ ಮಾತ್ರ ಸ್ಥಿರವಾಗಿರದೆ ಮಾಲೀಕ ಇಲ್ಲವೇ ನೌಕರರ ಇಷ್ಟಕ್ಕನು ಗುಣವಾಗಿ ಕೆಲಸ ಕಳೆದು ಕೊಳ್ಳುವ ಸಾಧ್ಯತೆಗಳು ಸಹ ಹೆಚ್ಚಾಗಿರುವುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ.

### ೩.೭. ಆರೋಗ್ಯ

ವಿಶ್ವದ ಯಾವುದೇ ರಾಷ್ಟ್ರವನ್ನು ತೆಗೆದುಕೊಂಡರೂ ಅಥವಾ ಯಾವುದೇ ಮೂಲೆಗೂ ಹೋದರೂ ಬಹುಚರ್ಚಿತ ಹಾಗೂ ಗಂಭೀರವಾಗಿ ಪರಿಗಣಿಸಲ್ಪಡುವ ವಿಷಯವೆಂದರೆ ಜನರ ಆರೋಗ್ಯ, ಪ್ರಸ್ತುತ ಸನ್ನಿವೇಶದಲ್ಲಾದ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ನಮ್ಮ ಸುತ್ತಮುತ್ತಲಿನ

ಪ್ರಾಕೃತಿಕ ಸಂಪನ್ಮೂಲಗಳನ್ನು ಪರೀಕ್ಷಿಸುವ, ಪರಿಶೀಲಿಸುವ ಹಾಗೂ ಪ್ರಯೋಗಾತ್ಮಕವಾಗಿ ಬಳಸುವ ಕಾರ್ಯತಂತ್ರಗಳನ್ನು ಮಾನವ ಯಾವಾಗ ತನ್ನ ಕೈವಶ ಮಾಡಿಕೊಂಡನೋ, ಅಂದಿನಿಂದಲೇ "ಮಾಲಿನ್ಯ"ದ ಪರಿಕಲ್ಪನೆಯು ಅಭಿವೃದ್ಧಿಯ ಪ್ರಕ್ರಿಯೆಯೊಂದಿಗೆ ಬೆಸೆದುಕೊಂಡಂತಿದೆ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿ, ಉತ್ಪಾದನೆ, ವಿತರಣೆ, ಹಾಗೂ ಪ್ರಗತಿಯ ಬೆನ್ನುಹತ್ತಿರುವ ಮಾನವನ ಆರೋಗ್ಯದ ವಸ್ತುಸ್ಥಿತಿಯನ್ನು ಅರಿಯುವುದು ಅವಶ್ಯಕವೆನಿಸುತ್ತದೆ. ಈ ಕಾರಣದಿಂದಾಗಿ ಜಿಲ್ಲೆಯ ಪ್ರಧಾನ ಉದ್ಯೋಗವಾಗಿ ಮಾರ್ಪಡುತ್ತಿರುವ ಗಣಿಗಾರಿಕೆಯಲ್ಲಿ ಕಾರ್ಮಿಕರ ಆರೋಗ್ಯ ಹೇಗಿದೆ? ಅವರ ಆರೋಗ್ಯದ ವಿಶ್ಲೇಷಣೆಗೆ ಜಿಲ್ಲೆಯ ಪರಿಸರವನ್ನು ನಿರ್ಧರಿಸುವ ಆರೋಗ್ಯದ ಸ್ಪಷ್ಟತೆಗಾಗಿ ವಿವಿಧ ಲಭ್ಯವಿರುವ ಮಾರ್ಗಸೂಚಿಗಳ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

**ಕೋಷ್ಟಕ ೩.೯ : ಜಿಲ್ಲೆಯ ಆಸ್ಪತ್ರೆಗಳ ವಿವರ**

| ಕ್ರ. ಸಂ. | ತಾಲ್ಲೂಕುಗಳ ಹೆಸರು | ಅಲೋಪತಿ ಆಸ್ಪತ್ರೆಗಳು | ಖಾಸಗಿ / ನರ್ಸಿಂಗ್ ಹೋಂ ಆಸ್ಪತ್ರೆಗಳು | ಪ್ರಾಥಮಿಕ ಆರೋಗ್ಯ ಕೇಂದ್ರಗಳು |
|---|---|---|---|---|
| ೧. | ಬಳ್ಳಾರಿ | ೨೪(೭೮)* | ೪೧(೨೨೮) | ೧೩(೫೦) |
| ೨. | ಹೊಸಪೇಟೆ | ೧೩(೪೨) | ೨೦(೧೧೯) | ೦೭(೪೩) |
| ೩. | ಸಂಡೂರು | ೦೬(೬೦) | ೦೨(೧೮) | ೦೫(೩೦) |
| ೪. | ಹೆಚ್.ಬಿ.ಹಳ್ಳಿ | ೦೯ | ೦೭(೨೪) | ೦೭(೪೨) |
| ೫. | ಕೂಡ್ಲಿಗಿ | ೧೧(೧೨೮) | ೦೮(೪೮) | ೦೮(೪೨) |
| ೫. | ಹಡಗಲಿ | ೧೧(೯೮) | -- | ೦೮(೪೨) |
| ೬. | ಶಿರುಗುಪ್ಪ | ೧೧(೮೬) | ೦೬(೩೭) | ೦೬(೪೨) |
| | ಒಟ್ಟು | ೮೫ (೪೬೨) | ೮೪(೪೭೪)* | ೫೪(೨೯೦) |

ಆಧಾರ : ಬಳ್ಳಾರಿ ಜಿಲ್ಲಾ ಅಂಕಿಅಂಶಗಳ ನೋಟ, ೨೦೦೩-೦೪, ಪು.೨೩

*(ಹಾಸಿಗೆಯ ಸಾಮರ್ಥ್ಯವನ್ನು ತಿಳಿಸುತ್ತದೆ).*

ಪ್ರಾಚೀನ ಕಾಲದಿಂದಲೂ ಆರೋಗ್ಯವೇ ಮಹಾಭಾಗ್ಯ, ಆರೋಗ್ಯವೇ ಸಂಪತ್ತು ಅಥವಾ ಆರೋಗ್ಯವಂಥ ಮನಸ್ಸು ಹಾಗೂ ದೇಹದಲ್ಲಿ ಯಾವಾಗಲೂ ಒಳ್ಳೆಯ ಘನಕಾರ್ಯಗಳ ವಿಚಾರಗಳು ಹುಟ್ಟಿಬರುತ್ತವೆಂಬ ಲೋಕೋಕ್ತಿಯು ಬಳಕೆಯಲ್ಲಿದೆ. ಇಂತಹ ಬಹುಪಯೋಗಿ ಆರೋಗ್ಯದ ಪ್ರಕ್ರಿಯೆಯು ಗಣಿಯಲ್ಲಿರುವ ಕಾರ್ಮಿಕರ ಮೇಲೆ ಯಾವ ಪರಿಣಾಮವನ್ನು ಉಂಟುಮಾಡಿದೆ ಎಂಬುದನ್ನು ಪತ್ತೆಹಚ್ಚುವ

ಪೂರ್ವದಲ್ಲಿ ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಕಾರ್ಮಿಕರ ಅನುಪಾತವೆಷ್ಟು? ಜಿಲ್ಲೆಯಲ್ಲಿರುವ ಸರ್ಕಾರಿ ಹಾಗು ಖಾಸಗಿ ಆಸ್ಪತ್ರೆಗಳೆಷ್ಟಿವೆ? ಅವುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯರ ಪ್ರಮಾಣವನ್ನು ವಿಶ್ಲೇಷಣೆಗೊಳಪಡಿಸಿದಾಗ ಗಣಿಕಾರ್ಮಿಕರ ಆರೋಗ್ಯದ ಪ್ರಮಾಣ ಯಾವ ಮಟ್ಟದಲ್ಲಿದೆ ಎಂಬುದನ್ನು ಸರಳವಾಗಿ ಗುರುತಿಸಬಹುದಾಗಿದೆ.

ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿರುವ ಧೃಡೀಕೃತ ವೈದ್ಯಕೀಯ ಸೇವೆಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. ಯಾವುದೇ ಜಿಲ್ಲೆಯಲ್ಲಿ ಲಭ್ಯವಿರುವ ಮೂಲಭೂತ ಸೌಕರ್ಯಗಳಾದ ಪೌಷ್ಠಿಕ ಆಹಾರ, ಶುದ್ಧವಾದ ಗಾಳಿ, ಕುಡಿಯುವ ನೀರು, .ವಸತಿ, ನಿರ್ಮಲ ವಾತಾವರಣ, ವಿದ್ಯುತ್ ಮನೋರಂಜನೆಯ ಸಾಧನಗಳು, ಸಾರಿಗೆ, ಶಿಕ್ಷಣ, ಉದ್ಯೋಗ ಹಾಗೂ ಸಂಪರ್ಕ ಮಾಧ್ಯಮಗಳ ಲಭ್ಯತೆಯು ಅತ್ಯವಶ್ಯಕ. ಇಂತಹ ಪ್ರದೇಶಗಳಲ್ಲಿ ವಾಸವಾಗಿರುವ ಜನರ ಜೀವನ ಮಟ್ಟ ಹಾಗೂ ಆರೋಗ್ಯ ಪ್ರಮಾಣವು ಉತ್ತಮವಾಗಿರಲು ಸಾಧ್ಯವೆಂಬ ಕಲ್ಪನೆಯೊಂದಿಗೆ ಜಿಲ್ಲೆಯಲ್ಲಿರುವ ಒಟ್ಟು ಆಸ್ಪತ್ರೆಗಳ ಪ್ರಮಾಣವನ್ನು ಕಾರ್ಮಿಕರ ಆರೋಗ್ಯದ ದೃಷ್ಠಿಯಿಂದ ಹೋಲಿಕೆ ಮಾಡುವುದು ಸೂಕ್ತ. ಏಕೆಂದರೆ ಮೂಲತಃ ತೆರೆದ ಗಣಿಗಾರಿಕೆಯು ಧೂಳು ಹಾಗೂ ಹತ್ತಾರು ಪರಿಸರ ಮಾಲಿನ್ಯಗಳಿಂದ ತುಂಬಿದೆ. ಇಂತಹ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಅನಾರೋಗ್ಯಕ್ಕೆ ಒಳಗಾಗುವುದು ಸಹಜವಾಗಿರುತ್ತದೆ. ಅವರ ಅನಾರೋಗ್ಯಕ್ಕೆ ಸೂಕ್ತ ಚಿಕಿತ್ಸೆಗಾಗಿ ಆಯಾ ಕ್ಷೇತ್ರಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳು ಆಧಾರವಾಗಿ ನಿಲ್ಲುತ್ತವೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯು ೨೦೦೧ರ ಅಂಕಿಅಂಶಗಳ ಪ್ರಕಾರ ಬಳ್ಳಾರಿ ಜಿಲ್ಲೆಯು ಸುಮಾರು ೨೦ ಲಕ್ಷದಷ್ಟು ಜನಸಂಖ್ಯೆ ಹೊಂದಿರುವುದನ್ನು ಜಿಲ್ಲಾ ಅಂಕಿಅಂಶಗಳ ಇಲಾಖೆ ಸ್ಪಷ್ಟಪಡಿಸುತ್ತದೆ. ಅದರಲ್ಲಿ ದುಡಿಯುವ ವರ್ಗದಲ್ಲಿ ಸಂಘಟಿತ ಹಾಗೂ ಅಸಂಘಟಿತ ಕಾರ್ಮಿಕರು ಸುಮಾರು ಹತ್ತು ಲಕ್ಷಕ್ಕಿಂತಲೂ ಹೆಚ್ಚಾಗಿದ್ದಾರೆ. ಇಂಥ ಸಂದರ್ಭದಲ್ಲಿ ಜಿಲ್ಲೆಯ ಸರ್ಕಾರಿ ಒಡೆತನದಲ್ಲಿರುವ ಸಾರ್ವಜನಿಕ ಸರ್ಕಾರಿ ಆಸ್ಪತ್ರೆಗಳ ಸಂಖ್ಯೆ ಕೇವಲ ೧೦ ಆಗಿದೆ. ಅಲ್ಲದೆ, ಅವುಗಳು ಹೊಂದಿರುವ ಹೊರ ರೋಗಿಗಳ ಹಾಸಿಗೆಯ ಸಾಮರ್ಥ್ಯವು ೨೩೩೫ ಮಾತ್ರ ಎಂಬುದನ್ನು ತಿಳಿದಾಗ ಜಿಲ್ಲೆಯಲ್ಲಿ ವೈದ್ಯಕೀಯ ಸೇವೆಗಳು ಎಷ್ಟು ಹಿಂದುಳಿದಿವೆ ಎಂಬುದು ಇದರಿಂದ ತಿಳಿದುಬರುತ್ತದೆ. ಹಾಗೆಯೇ ಖಾಸಗಿ ಒಡೆತನದಲ್ಲಿ ೧೯ ಆಸ್ಪತ್ರೆಗಳು, ೧೪೫ ಹಾಸಿಗೆ ಸಾಮರ್ಥ್ಯ, ಖಾಸಗಿ ನರ್ಸಿಂಗ್ ಹೋಮ್‌ಗಳು ೩೨ ಹಾಸಿಗೆ ಸಾಮರ್ಥ್ಯ ೨೭೭, ಖಾಸಗಿ ಒಡೆತನದ ಇವುಗಳೆಲ್ಲಾ ಸೇರಿಕೊಂಡು ಒಟ್ಟು ಹೊರರೋಗಿಗಳ ಹಾಸಿಗೆಗಳು ಸಾಮರ್ಥ್ಯ ಕೇವಲ ೪೩೧ ಆಗಿದೆ. ಜೊತೆಗೆ ಆಯಾ ತಾಲೂಕು, ಹೋಬಳಿಗೆ ಸಂಬಂಧಿಸಿದಂತೆ ಅಸ್ತಿತ್ವದಲ್ಲಿರುವ ಪ್ರಾಥಮಿಕ ಆರೋಗ್ಯ ಘಟಕಗಳು ಕೇವಲ ೫೪ರಷ್ಟಿದ್ದು ಅವುಗಳ ಹಾಸಿಗೆಯ ಸಾಮರ್ಥ್ಯ ೨೯೦ರಷ್ಟಿದೆ.

ಇಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾಗಿರುವುದು ಜಿಲ್ಲೆಯ ೨೦ಲಕ್ಷ ಜನಸಂಖ್ಯೆಗೆ ಮೇಲಿನ ವೈದ್ಯಕೀಯ ಸೇವೆಗಳು ಸಾಕಾಗಬಲ್ಲವೆ? ಎಂಬ ಪ್ರಶ್ನೆ ಸಹಜವಾಗಿ ಕಾಡುತ್ತದೆ. ಈ ದೃಷ್ಟಿಯಿಂದ ಜಿಲ್ಲೆಯಲ್ಲಿರುವ ಒಟ್ಟು ಜನಸಂಖ್ಯೆಗೆ ಹೋಲಿಸಿಕೊಂಡಾಗ ಗಣಿಕಾರ್ಮಿಕರ ಆರೋಗ್ಯದ ಸ್ವರೂಪವು ಉತ್ತಮವಾಗಿಲ್ಲರಲು ಸಾಧ್ಯವಿಲ್ಲವೆಂದೂ ಹೇಳಬೇಕಾಗುತ್ತದೆ. ಇದಕ್ಕೆ ಸಂಡೂರು ಹಾಗೂ ಹೊಸಪೇಟೆ ಯಲ್ಲಿರುವ ಸರ್ಕಾರಿ ಆಸ್ಪತ್ರೆಗಳು ಕೇವಲ ೦೭ (೪೫) ಹಾಗೂ ೦೫ (೩೦) ಹೊಂದಿರುವ ಹೊರ ರೋಗಿಗಳ ಹಾಸಿಗೆಯ ಸಾಮರ್ಥ್ಯದ ಪ್ರಮಾಣ ಸಾಕ್ಷಿಯಾಗಿ ನಿಲ್ಲುತ್ತದೆ.

ಜಿಲ್ಲೆಯ ಗಣಿಯಲ್ಲಿರುವ ಕಾರ್ಮಿಕ ವರ್ಗಕ್ಕೆ ವೈದ್ಯಕೀಯ ಉಪಚಾರಕ್ಕಾಗಿ ಕೇಂದ್ರ ಸರ್ಕಾರದ ಆಧೀನದಲ್ಲಿ ಮೀಸಲಾಗಿರುವ ಕೆಲವು ಗಣಿ ಕಾರ್ಮಿಕ ಆಸ್ಪತ್ರೆಗಳ ಸೌಲಭ್ಯವಿದೆ. ಅವುಗಳಲ್ಲಿ ಕೇವಲ ಗಣಿಯಲ್ಲಿರುವ ಕಾರ್ಮಿಕ ಹಾಗೂ ಅವರ ಕುಟುಂಬದವರಿಗೆ ಮಾತ್ರ ಚಿಕಿತ್ಸೆ ನೀಡಲಾಗುತ್ತದೆ. ಅವುಗಳೆಂದರೆ ಸಂಡೂರು, ಹೊಸಪೇಟೆ ತಾಲೂಕುಗಳಲ್ಲಿ ಗಣಿ ೦೨ ಹಾಗೂ ೦೧ ಕಾರ್ಮಿಕ ಆಸ್ಪತ್ರೆಗಳನ್ನು ಸ್ಥಾಪಿಸಲಾಗಿದೆ. ಅವುಗಳನ್ನು ಕೋಷ್ಟಕ ೩.೧೦ರಿಂದ ತಿಳಿಯಬಹುದು.

**ಕೋಷ್ಟಕ ೩.೧೦ : ಗಣಿ ಕಾರ್ಮಿಕ ಆಸ್ಪತ್ರೆಗಳ ವಿವರ**

| ಕ್ರ. ಸಂ. | ಆಸ್ಪತ್ರೆಗಳಿರುವ ಪ್ರದೇಶ | ಆಸ್ಪತ್ರೆಗಳು ಸಂಖ್ಯೆ | ವೈದ್ಯರು ಪ್ರಮಾಣ | ಸಿಬ್ಬಂದಿಯ ಪ್ರಮಾಣ | ಹಾಸಿಗೆಯ ಸಾಮರ್ಥ್ಯ | ಕ್ಷಕಿರಣ ಸಾಮರ್ಥ್ಯ | ಶಸ್ತ್ರ ಚಿಕಿತ್ಸೆ ಸಂಖ್ಯೆ |
|---|---|---|---|---|---|---|---|
| ೧. | ಸಂಡೂರು | ೦೧ | ೦೧ | ೦೩ | ಇಲ್ಲ | ಇಲ್ಲ | ಇಲ್ಲ ಇಲ್ಲ |
| ೨. | ಎನ್.ಎಂ.ಡಿ.ಸಿ. | ೦೧ | ೦೯ | ೨೦ | ೩೦ | ಇದೆ | ಇದೆ (ಕೇವಲ ಎನ್.ಎಂ.ಡಿ.ಸಿ. ಸಿಬ್ಬಂದಿಯವರಿಗೆ ಅನ್ವಯಿಸುತ್ತದೆ.) |
| ೩. | ಹೊಸಪೇಟೆ (ಕಾರಿಗನೂರು) | ೦೧ | ೦೩ | ೦೯ | ೩೦ | ಇಲ್ಲ | ಇಲ್ಲ ಇಲ್ಲ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಮೇಲಿನ ಕೋಷ್ಟಕದಿಂದ ಗಣಿಗಳಲ್ಲಿ ದುಡಿಯುವ ಕಾರ್ಮಿಕರಿಗಾಗಿ ಮೀಸಲಿರುವ ವೈದ್ಯಕೀಯ ಸೌಲಭ್ಯಗಳನ್ನು ತೋರಿಸುತ್ತದೆ. ಜಿಲ್ಲೆಯ ಗಣಿಗಾರಿಕೆಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ವಿವಿಧ ವೃತ್ತಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರ ಪ್ರಮಾಣ ಸುಮಾರು ಹತ್ತು ಸಾವಿರಕ್ಕೂ ಹೆಚ್ಚಾಗಿದೆ. ಆದರೆ ಜಿಲ್ಲೆಯಲ್ಲಿ ಗಣಿಕಾರ್ಮಿಕರಿಗೆ ಮೀಸಲಾಗಿರುವ ಆಸ್ಪತ್ರೆಗಳ ಸಂಖ್ಯೆ ಕೇವಲ ಮೂರು ಗಣಿಕಾರ್ಮಿಕ ಆಸ್ಪತ್ರೆಗಳಿವೆ. ಈ ಹಿನ್ನೆಲೆಯಲ್ಲಿ ಗಣಿ ಕಾರ್ಮಿಕರ ಆರೋಗ್ಯದ ಬೇಡಿಕೆ ಹಾಗೂ

ಅನಾರೋಗ್ಯದ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಹೇಗೆ ಸಾಧ್ಯ? ಅಲ್ಲದೆ ಸಂಡೂರಲ್ಲಿರುವ ಗಣಿಕಾರ್ಮಿಕ ಆಸ್ಪತ್ರೆಯಲ್ಲಿ ಕೇವಲ ಒಬ್ಬ ವೈದ್ಯ ಹಾಗೂ ಇಬ್ಬರು ಸಹಾಯಕರನ್ನು ಬಿಟ್ಟರೇ ಬೇರೆ ಸಿಬ್ಬಂದಿಯಾಗಲೀ ಇಲ್ಲವೇ ಹೊರ ರೋಗಿಗಳಿಗೆ ಹಾಸಿಗೆ, ಕ್ಷಕಿರಣ, ಶಸ್ತ್ರಚಿಕಿತ್ಸೆ ಇತ್ಯಾದಿ ಸೌಲಭ್ಯಗಳು ಇರುವುದಿಲ್ಲ. ಆದರೆ ದೋಣಿಮಲೈಯಲ್ಲಿ (ಸಂಡೂರು ತಾಲೂಕು) ಕೇಂದ್ರ ಸರ್ಕಾರದ ನಿರ್ವಹಣೆಯಲ್ಲಿ ಸುಸಜ್ಜಿತವಾಗಿದ್ದು, ಕಾರ್ಮಿಕ ಆಸ್ಪತ್ರೆಯು ಇದರಲ್ಲಿ ೦೯ ಜನ ವೈದ್ಯರು ೨೦ ಜನ ಸಿಬ್ಬಂಧಿಗಳು, ೩೦ ಹೊರರೋಗಿಗಳ ಹಾಸಿಗೆ ಸಾಮರ್ಥ್ಯವನ್ನು ಹೊಂದಿದೆ. ಜೊತೆಗೆ ವಿವಿಧ ಹಂತಗಳ ಪರೀಕ್ಷೆ ಹಾಗೂ ಶಸ್ತ್ರಚಿಕಿತ್ಸೆಯೇ ಸೌಕರ್ಯಗಳು ಲಭ್ಯವಿದೆ. ಆದರೆ ಈ ಆಸ್ಪತ್ರೆಗಳಲ್ಲಿ ಉಚಿತ ಸೇವೆಯನ್ನು ಪಡೆಯಲು ಎನ್.ಎಂ.ಡಿ.ಸಿ.ಯ ಉದ್ಯೋಗಿಯಾಗಿರಬೇಕೆಂಬ ನಿಯಮವಿರುವುದರಿಂದ ಖಾಸಗಿ ಗಣಿಗಳಲ್ಲಿ ದುಡಿಯುವ ಕಾರ್ಮಿಕರಿಗೆ ಇದರಲ್ಲಿ ಚಿಕಿತ್ಸೆ ಪಡೆಯಲು ಅವಕಾಶವಿರುವುದಿಲ್ಲ. ಇನ್ನು ಹೊಸಪೇಟೆಯ ಕಾರಿಗನೂರು ಗ್ರಾಮದ ಬಳಿ ಕಾರ್ಮಿಕ ಆಸ್ಪತ್ರೆಯು ಕೇಂದ್ರೀಯ ಆಸ್ಪತ್ರೆಯಾಗಿದ್ದು, ವಿಸ್ತೀರ್ಣದಲ್ಲಿ ತುಂಬಾ ದೊಡ್ಡದಾಗಿದ್ದು, ಇಲ್ಲಿ ವೈದ್ಯರ ಸಂಖ್ಯೆ, ೦೫ ಇದ್ದರೆ ಕೇವಲ ೦೩ ವೈದ್ಯರಿದ್ದಾರೆ. ಆದರೆ ಇಲ್ಲಿ ಸಿಬ್ಬಂದಿಯ ಕೊರತೆ. ವಿವಿಧ ಸೌಲಭ್ಯಗಳ ಕೊರತೆಯಿಂದಾಗಿ ಗಣಿ ಕಾರ್ಮಿಕರ ಆಸ್ಪತ್ರೆಯು ಹೆಸರಿಗೆ ಮಾತ್ರ ಎಂಬಂತೆ ಅಣಕ ಮಾಡುವಂತಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಜಿಲ್ಲೆಯ ಯಾವುದೇ ಗಣಿಸಂಸ್ಥೆಯು ಕಾರ್ಮಿಕರ ಆರೋಗ್ಯದ ಪಾಲನೆಗೆ ಸಹಾಯಕವಾಗಿ ಸ್ವತಂತ್ರ್ಯ ಖಾಸಗಿ ಆಸ್ಪತ್ರೆಗಳನ್ನು ಸ್ಥಾಪಿಸಿರುವುದಿಲ್ಲ. ಆದರೆ ಕೆಲವು ಗಣಿ ಸಂಸ್ಥೆಗಳು ತಮ್ಮ ಕಾರ್ಮಿಕರ ಆರೋಗ್ಯ ತಪಾಸಣೆಗಾಗಿ ಕೆಲವು ಖಾಸಗಿ ವೈದ್ಯರ ಸೇವೆಯನ್ನು ಎರವಲು ಪಡೆದುಕೊಂಡಿವೆ. ಖಾಸಗಿ ವೈದ್ಯರಲ್ಲಿ ಹೆಚ್ಚಾಗಿ ವೈದ್ಯಕೀಯ ಅರ್ಹತೆಯನ್ನು ಹೊಂದಿಲ್ಲದವರು, ಆರ್.ಎಂ.ಪಿ. ಕಾಂಪೌಂಡರ್‌ಗಳ್ಳಾದವರು ಇದ್ದಾರೆ. ಅವರ ಸೇವೆಯು ಸಹ ನಿಶ್ಚಿತ ಹಾಗೂ ನಿರಂತರವಾಗಿರದೇ ಕೇವಲ ವಾರಕ್ಕೆ ಒಂದು ಬಾರಿ ಇಲ್ಲವೇ ಸೇವಾ ಸೌಲಭ್ಯ ಎರಡುಬಾರಿ ಲಭ್ಯವಿರುತ್ತದೆ. ಇಂತಹ ಜಿಲ್ಲೆಯಲ್ಲಿರುವ ಇಂತಹ ಎಲ್ಲಾ ಅಂಶಗಳನ್ನು ಕಾರ್ಮಿಕರ ಪ್ರಮಾಣದೊಂದಿಗೆ ಹೋಲಿಸಿದಾಗ ಕೊನೆಯದಾಗಿ ಗಣಿಕಾರ್ಮಿಕರ ವೈದ್ಯಕೀಯ ಸೌಲಭ್ಯಗಳು ಅತ್ಯಲ್ಪವೆಂದೇ ಹೇಳಬಹುದು.

## ಬ. ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿ

ಪ್ರಸ್ತುತ ಸನ್ನಿವೇಶದಲ್ಲಿ ಆರ್ಥಿಕ ಸ್ಥಾನಮಾನದ ವಿಶ್ಲೇಷಣೆಯು ತುಂಬಾ ಮಹತ್ವ ಹಾಗೂ ಪರಿಣಾಮಕಾರಿಯಾದ ಪರಿಭಾವನೆಯೆಂದೇ ಎಲ್ಲರ ಅಭಿಮತ. ಇಂತಹ ಮೌಲ್ಯಯುತ ಆರ್ಥಿಕ ಮಾನದಂಡವು ವಿಶ್ವದಾದ್ಯಂತ ಬಹಳಷ್ಟು ಚರ್ಚೆಗೆ ಒಳಗಾಗಿ, ಅನೇಕ ಆಯಾಮಗಳನ್ನು ಮೈಗೂಡಿಸಿಕೊಂಡು ಸಂಕೀರ್ಣಗೊಳ್ಳುತ್ತಿದೆ. ಪ್ರತಿಯೊಂದು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಂತಗಳಲ್ಲಿ ಅವುಗಳು

ಹೊಂದಿರುವ ಆರ್ಥಿಕ ಸ್ವರೂಪವು ಆಯಾ ವಲಯಗಳ ಗುಣಮಟ್ಟ, ಆಕರ್ಷಣೆ, ಸ್ಥಿರತೆ ಮತ್ತು ಅನುಕರಣೆಗೆ ಯೋಗ್ಯವಾಗಿ ಪರಿಗಣಿಸಲ್ಪಟ್ಟಿವೆ. ಹೀಗಾಗಿ ಆಯಾ ಸಮಾಜ ಹಾಗೂ ಸಮುದಾಯಗಳ ಆರ್ಥಿಕ ಸುಭದ್ರತೆಯುಳ್ಳ ತಳಹದಿಯ ಚಿತ್ರಣವು ಅಧ್ಯಯನಕ್ಕೆ ಯೋಗ್ಯವೆಂದೂ ಪರಿಗಣಿಸಲಾಗುತ್ತಿದೆ. ಆರ್ಥಿಕತೆಯನ್ನು ಬಿಟ್ಟು ಅಭಿವೃದ್ಧಿಯಿಲ್ಲ, ಅಭಿವೃದ್ಧಿಯನ್ನು ತೊರೆದು ಆರ್ಥಿಕತೆ ಇರಲಾರದು ಎಂಬಂತೆ ಅಭಿವೃದ್ಧಿ ಮತ್ತು ಆರ್ಥಿಕ ಪ್ರಕ್ರಿಯೆಗಳು ಒಂದಕ್ಕೊಂದು ಬೆಸೆದುಕೊಂಡಿವೆ. ಇಂತಹ ಸಂದಿಗ್ಧತೆಯಲ್ಲಿ ಸುತ್ತಲಿನ ಆರ್ಥಿಕತೆಯಲ್ಲಡಗಿರುವ 'ಅಭಿವೃದ್ಧಿ'ಯ ಛಾಪನ್ನು ಸಂಕ್ಷಿಪ್ತವಾಗಿ ಅರ್ಥೈಸಿಕೊಳ್ಳುವುದು ಅವಶ್ಯಕವೆಂದೇ ಹೇಳಬಹುದು. ''ಅಭಿವೃದ್ಧಿ' ಪರಿಕಲ್ಪನೆಯ ವಿಶ್ಲೇಷಣೆಯಲ್ಲಿ ಸಾಂಪ್ರದಾಯಿಕ ಹಾಗೂ ಆಧುನಿಕ ತಜ್ಞರ ಅಭಿಪ್ರಾಯಗಳಲ್ಲಿ ಬಹಳಷ್ಟು ವ್ಯತ್ಯಾಸಗಳಿವೆ. ಅವುಗಳಲ್ಲಿ ಸಂಪ್ರದಾಯಿಕ ತಜ್ಞರು ಅಭಿವೃದ್ಧಿಯನ್ನು ವ್ಯಾಪಕವಾಗಿ, ಸಮಗ್ರ ದೃಷ್ಟಿಕೋನದಿಂದ ವಿಶ್ಲೇಷಿಸುವ ಮೂಲಕ ಸರ್ವರ ಹಿತವನ್ನು ಬಯಸುವಂತಿದ್ದರೆ, ಮತ್ತೊಂದೆಡೆ ಸೂಕ್ಷ್ಮವಾಗಿ, ಸಂಕ್ಷಿಪ್ತತೆಯಿಂದ, ವ್ಯಕ್ತಿಗತವಾಗಿ ನೋಡುವ ಮೂಲಕ ಸಮಾಜದ ಸರ್ವತೋಮುಖ ಅಭಿವೃದ್ಧಿ ಸಾಧ್ಯವೆಂಬ ಆಶಯ ಆಧುನಿಕ ಚಿಂತಕರದ್ದಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ಸುತ್ತಲಿನ ವ್ಯವಸ್ಥೆಯಲ್ಲಿರುವ ವಿವಿಧ ಆಯಾಮಗಳಲ್ಲಿನ ಆರ್ಥಿಕತೆಯ ಅಭಿವೃದ್ಧಿಯನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದು.

ತೊಂಬತ್ತರ ದಶಕದ ತನಕ ವಿಶ್ವದ ಅನೇಕ ರಾಷ್ಟ್ರಗಳಲ್ಲಿ ವ್ಯಕ್ತಿ, ಸಮಾಜ, ಸಮುದಾಯ ಮತ್ತು ಸಂಘ ಸಂಸ್ಥೆಗಳೆಲ್ಲವೂ ಸಾಮಾಜಿಕ ಹಿನ್ನೆಲೆಯಲ್ಲಿ ಸಾಮೂಹಿಕವಾಗಿ ಸಂಘಟಿತಗೊಳ್ಳುವುದನ್ನು ಅಭಿವೃದ್ಧಿಯ ಸಂಕೇತವಾಗಿ ಪರಿಭಾವಿಸಲಾಗುತ್ತಿತ್ತು. ಹೀಗಾಗಿ ಅಂದಿನ ಚಾರಿತ್ರಿಕ ಘಟನೆಗಳೆಲ್ಲವೂ ಸಾಮೂಹಿಕ ನಿರ್ಧಾರಗಳನ್ನೊಳಗೊಂಡಿರುವುದನ್ನು ಮನಗಾಣಬಹುದು. ಇಂತಹ ಕ್ರಮದಿಂದಾಗಿ ಭಾರತ ದೇಶದಾದ್ಯಂತ ಬಹಳಷ್ಟು ಜಾತಿ, ಧರ್ಮ, ಉಪಜಾತಿ ಮತ್ತು ಪಂಗಡಗಳೆಲ್ಲವೂ ತಮ್ಮಲ್ಲಿಯೇ ಪರಸ್ಪರ ಸಂಘಟಿತಗೊಂಡು ತಮ್ಮ ತಮ್ಮ ಅಸ್ತಿತ್ವದ ನೆಲೆಯನ್ನು ಕಂಡುಕೊಂಡು, ಸಮಾಜದ ಮುಖ್ಯ ವಾಹಿನಿಗೆ ಬರಲು ಸಾಧ್ಯವಾಯಿತು. ಇಂತಹ ಬೆಳವಣಿಗೆಯು ಒಂದು ರೀತಿಯಲ್ಲಿ ಅಸದೃಷ್ಯಗೊಂಡಿದ್ದ ಅನೇಕ ಸಮುದಾಯಗಳಿಗೆ ಅನನ್ಯತೆ(Identity)ಯನ್ನು ಒದಗಿಸಿಕೊಡಲು ಸಹಕಾರಿಯಾಗಿತ್ತೆಂದು ಹೇಳಬಹುದು.

ಆದರೆ ಅಭಿವೃದ್ಧಿಯ ವ್ಯಾಖ್ಯಾನ ವಿಶ್ಲೇಷಣೆಗೊಳಪಟ್ಟಂತೆಲ್ಲಾ ಅನೇಕ ಬದಲಾವಣೆಗಳನ್ನು ಹೊಂದಿದೆ. ಇತ್ತೀಚೆಗೆ ಈ ಹಿಂದಿನ ಅಭಿವೃದ್ಧಿಯ ಮಾನದಂಡದ ವಿಚಾರಸರಣಿಯೇ ಬದಲಾಗಿದೆ. ಹೇಗೆಂದರೆ ಇಂದು ಅಭಿವೃದ್ಧಿಯೆಂಬುದು ಸಮಾಜ, ಸಮುದಾಯ, ಸಂಘಟನೆ ಅಥವಾ ವ್ಯಕ್ತಿಯು ಮೂಲತಃ ರಾಜಕೀಯವಾಗಿ ಬಲಾಢ್ಯನಾದಂತೆ ಅವನು ಅಥವಾ ಅವಳು ಬೇರೆ, ಬೇರೆ ಅಧಿಕಾರ ಹಾಗೂ ಸ್ಥಾನಮಾನಗಳನ್ನು ಪಡೆಯುತ್ತಾ ಆರ್ಥಿಕವಾಗಿ ಬಲಿಷ್ಠಗೊಳ್ಳುತ್ತಾನೆ. ಜೊತೆಗೆ ಅವರಿಗೆ ಸಂಬಂಧಿಸಿದ ಸಮಾಜ ಅಥವಾ ಸಮುದಾಯಗಳು ಸಮೃದ್ಧಿಗೊಂಡು ವ್ಯಾಪಕತೆಯನ್ನು ಪಡೆದುಕೊಳ್ಳಲು

ಸಾಧ್ಯವೆಂಬ ತಾರ್ಕಿಕತೆಗೆ ಹೆಚ್ಚುಬೆಂಬಲ ವ್ಯಕ್ತವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಅಧಿಕಾರ ಚುಕ್ಕಾಣಿ ಹಿಡಿದ ಲಿಂಗಾಯತ ಮತ್ತು ಒಕ್ಕಲಿಗ ಸಮುದಾಯದ ಸರ್ವತೋಮುಖ ಅಭಿವೃದ್ಧಿಯು ಇದಕ್ಕೆ ಒಂದು ಉತ್ತಮ ಉದಾಹರಣೆಯಾಗಬಹುದು. ಅದಕ್ಕಾಗಿ ಮಾನವ ಸಮಾಜ ಹಾಗೂ ಸಮುದಾಯಗಳ ಸರ್ವತೋಮುಖ ಬೆಳವಣಿಗೆಗೆ ರಾಜಕೀಯ ಅಧಿಕಾರವೇ ಅತ್ಯಮೂಲ್ಯವೆಂದು ವ್ಯಾಖ್ಯಾನಿಸಲಾಗುತ್ತಿದೆ.' ಇಂತಹ ತಾರ್ಕಿಕ ಕಾಲಘಟ್ಟದಲ್ಲಿ ದುಡಿಯುವ ವರ್ಗವು ಹೊಂದಿರುವ ಅಧಿಕಾರ ಹಾಗೂ ವೇತನದ ಸ್ವರೂಪ ಆಯಾ ಸಮಾಜದಲ್ಲಿ ಅವರ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಪ್ರಮುಖವೆನಿಸುತ್ತಿವೆ. ಜಾಗತೀಕರಣದ ಸಂದರ್ಭದಲ್ಲಿ ಪ್ರತಿಯೊಂದು ವಲಯಗಳಲ್ಲಿಯೂ ತಮ್ಮ ದೈಹಿಕ ಸಾಮರ್ಥ್ಯವನ್ನು ವಿನಿಯೋಗಿಸಿ, ಬದುಕನ್ನು ರೂಪಿಸಿಕೊಳ್ಳುವ ಕಾರ್ಮಿಕ ಮಾತ್ರ ತುಂಬಾ ಉದಾಸೀನತೆಗೆ ಒಳಗಾಗಿರುವುದು ಇದರಿಂದ ವೇದ್ಯವಾಗುತ್ತದೆ. ಇದಕ್ಕೆ ಪ್ರಚಲಿತದಲ್ಲಿರುವ IT & BTಯಂತಹ ಸಂಸ್ಥೆಗಳಲ್ಲಿ ಉದ್ಯೋಗನಿರತ ನೌಕರನಿಗೆ ಸಾವಿರ ರೂಪಾಯಿಗಳಿಂದ ಬಹುದೂರ ಜಿಗಿದು ಲಕ್ಷರೂಪಾಯಿಗಳಲ್ಲಿ ಲೆಕ್ಕಚಾರ ಮಾಡುವುದನ್ನು ಕಾಣಬಹುದು. ಅಲ್ಲದೇ ನಮ್ಮ ಘನ ಸರ್ಕಾರಗಳು ಅಂತಹ ಆಮೆಗಾತ್ರದ ವ್ಯಕ್ತಿಗಳನ್ನು ಗುರುತಿಸಿ, ರತ್ನಗಂಬಳಿಯನ್ನು ಹಾಸಿ, ಸನ್ಮಾನ ಸತ್ಕಾರಗಳೊಂದಿಗೆ ಅತ್ಯುನ್ನತ ಹುದ್ದೆಗಳನ್ನು ನೀಡಿ, ಗೌರವಿಸುವುದು ಸಾಮಾನ್ಯವಾಗಿದೆ. ಈ ಹಿನ್ನೆಲೆಯಲ್ಲಿ ಪ್ರೌಢ ಪ್ರಬಂಧದ ಕೇಂದ್ರಬಿಂದುವಾದ ಗಣಿ ಕಾರ್ಮಿಕರು ಹೊಂದಿರುವ ಆರ್ಥಿಕ ಸ್ಥಾನಮಾನದ ವಿಶ್ಲೇಷಣೆಗೆ ಅವರು ಪಡೆಯುತ್ತಿರುವ ಕೂಲಿ, ಉದ್ಯೋಗದ ಸ್ವರೂಪ, ಆರೋಗ್ಯ ಮತ್ತು ವಿವಿಧ ಸೌಕರ್ಯಗಳನ್ನು ಪರಿಶೀಲಿಸುವುದು ಅವಶ್ಯಕವಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಸುಮಾರು "೮೦ ಸಾವಿರಕ್ಕಿಂತಲೂ ಹೆಚ್ಚು ಕಾರ್ಮಿಕರು ಸಂಘಟಿತ ಹಾಗೂ ಅಸಂಘಟಿತ ಕ್ಷೇತ್ರಗಳಲ್ಲಿ ತೊಡಗಿಕೊಂಡಿದ್ದಾರೆ"(ಬಳ್ಳಾರಿ ಜಿಲ್ಲಾ ಅಂಕಿ-ಅಂಶಗಳ ನೋಟ ೨೦೦೧-೦೨). ಅವರಲ್ಲಿ ಸುಮಾರು ೧೦,೦೦೦ ಕ್ಕಿಂತಲೂ ಹೆಚ್ಚು ಕಾರ್ಮಿಕರು ನೇರ ಗಣಿಯನ್ನು ಆಧಾರಿಸಿ, ಇಲ್ಲವೆ ಪರೋಕ್ಷವಾಗಿ ಗಣಿಗಾರಿಕೆಯಿಂದಲೇ ತಮ್ಮ ದೈನಂದಿನ ಬದುಕನ್ನು ರೂಪಿಸಿಕೊಂಡಿದ್ದಾರೆ. ಇಂತಹ ಸಂದರ್ಭದಲ್ಲಿ ಗಣಿ ಕಾರ್ಮಿಕರ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಸ್ವರೂಪವು ಅವರ ಸ್ಥಾನಮಾನವನ್ನು ನಿರ್ಧರಿಸುವಲ್ಲಿ ಬಹುಮುಖ್ಯವೆನಿಸುತ್ತದೆ. ಆದ್ದರಿಂದ ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಗಣಿಕಾರ್ಮಿಕರ ಉದ್ಯೋಗದ ಸ್ವರೂಪವು ಈ ರೀತಿಯಾಗಿರುತ್ತದೆ.

### ೩.೮. ಉದ್ಯೋಗ

ಜಿಲ್ಲೆಯ ಗಣಿಗಾರಿಕೆಯಲ್ಲಿ ಕಂಡುಬರುವ ಉದ್ಯೋಗದ ಸ್ವರೂಪದಲ್ಲಿ ಆನೇಕ ವೈವಿಧ್ಯತೆಗಳನ್ನು ಇರುವುದನ್ನು ನೋಡಬಹುದಾಗಿದೆ. ಗಣಿಗಾರಿಕೆಯಲ್ಲಿ ಕಚ್ಚಾ ಗಣಿ ಸಂಪನ್ಮೂಲವನ್ನು ಭೂಗರ್ಭದಿಂದ ಹೊರತೆಗೆಯುವ ಕಾರ್ಯದಿಂದ ಹಿಡಿದು ಅದರ ಸಂಸ್ಕರಣೆ, ಕ್ರೋಢೀಕರಣ ಇತ್ಯಾದಿಗಳಿಗೆ ಸಂಬಂಧಿಸಿದಂತೆ

ಬೇರೆ, ಬೇರೆ ಹಂತಗಳಲ್ಲಿ ಕಾರ್ಮಿಕರು ಕೆಲಸ ಮಾಡುತ್ತಿದ್ದಾರೆ. ಕಾರ್ಮಿಕರನ್ನು ಮುಖ್ಯವಾಗಿ ಕುಶಲ, ಅರೆಕುಶಲ, ಕುಶಲರಹಿತ, ಕಾರ್ಮಿಕರೆಂದು ವರ್ಗೀಕರಿಸಬಹುದು, ಕುಶಲ, ಅರೆಕುಶಲ ಹಂತದ ಕಾರ್ಮಿಕರು ವಿದ್ಯಾವಂತರು, ತಾಂತ್ರಿಕ ಕೌಶಲ್ಯತೆಯುಳ್ಳವರು ಆಗಿರುವುದರಿಂದ ಅಂತಹ ಕಾರ್ಮಿಕರು ಹೆಚ್ಚು ಕೂಲಿ ಹಾಗು ವಿವಿಧ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿದ್ದಾರೆ. ಇಂತವರ ಪ್ರಮಾಣ ಗಣಿಯಲ್ಲಿ ಶೇಕಡ ೨೦ ರಷ್ಟಿದ್ದರೆ. ಅನಕ್ಷರಸ್ಥರು, ಯಾವುದೇ ತಾಂತ್ರಿಕ ಹಾಗೂ ವೈಜ್ಞಾನಿಕತೆಯ ಮನಸ್ಥಿತಿಯನ್ನು ಹೊಂದಿರದ ಅಶಿಕ್ಷಿತರ ಪ್ರಮಾಣ ಶೇಕಡ ೮೦ ರಷ್ಟಿರುತ್ತದೆ. ಈ ವರ್ಗದ ಕಾರ್ಮಿಕರು ಪಡೆಯುವ ಕೂಲಿಯ ದರವು ಕಡಿಮೆಯಾಗಿರುತ್ತದೆ. ಹಾಗೆಯೇ ಕೆಲಸದ ಸ್ವರೂಪವು ಪುರುಷರಿಗೆ ಒಂದು ರೀತಿಯಾಗಿದ್ದರೆ, ಮಹಿಳೆಯರಿಗೆ ಮತ್ತೊಂದು ರೀತಿ ಇರುತ್ತದೆ. ಇದನ್ನು ನೋಡಬಹುದು.







ಈ ಮೇಲಿನ ಚಿತ್ರಣವನ್ನು ಪರಿಶೀಲಿಸಿದಾಗ ಗಣಿಗಾರಿಕೆಯಲ್ಲಿ ಮಹಿಳೆಯರಿಗಿಂತಲೂ ಅತ್ಯಧಿಕ ಪ್ರಮಾಣದಲ್ಲಿ ಪುರುಷರಿಗೆ ದುಡಿಯುವ ಅವಕಾಶಗಳು ಹೆಚ್ಚು ಇರುವುದನ್ನು ಕಾಣಬಹುದು. ಹೀಗಾಗಿ

ಇದೊಂದು ರೀತಿಯ ಪುರುಷಾಧಿಪತ್ಯವನ್ನು ಪಡೆದು ಉದ್ಯಮವೆಂದೇ ಹೇಳಬಹುದು. ಏಕೆಂದರೆ ಜಿಲ್ಲೆಯಲ್ಲಿ ಸುಮಾರು ೫೦ಕ್ಕೂ ಹೆಚ್ಚು ಗಣಿ ಉದ್ಯಮ ಸಂಸ್ಥೆಗಳಿದ್ದರೂ ಅವುಗಳ ಒಡೆತನವು ಶೇಕಡ ೯೫ಕ್ಕಿಂತಲೂ ಹೆಚ್ಚು ಪುರುಷರ ಹೆಸರಿನಲ್ಲಿವೆ. ಕೇವಲ ೪ ಗಣಿ ಸಂಸ್ಥೆಗಳು ಮಾತ್ರ ಮಹಿಳೆಯರ ಹೆಸರಿನಲ್ಲಿರುವುದು ದಾಖಲೆಗಳಿಂದ ತಿಳಿದುಬರುತ್ತದೆ. ಅಲ್ಲದೆ ವಿವಿಧ ಉದ್ದೇಶಗಳಿಗಾಗಿ ಗಣಿ ಸಂಸ್ಥೆಗಳು ಮಹಿಳೆಯ ಹೆಸರಿನಲ್ಲಿವೆಯೇ ಹೊರತು ಅವುಗಳ ನಿರ್ದೇಶನ ಹಾಗೂ ನಿರ್ವಹಣೆಗಳೆಲ್ಲವೂ ಪುರುಷರಿಂದ ನಡೆಯುತ್ತದೆ. ಹೀಗಾಗಿ ಜಿಲ್ಲೆಯ ಗಣಿಯಲ್ಲಿ ಪುರುಷರಿಗೆ ಬಹಳಷ್ಟು ಅವಕಾಶಗಳಿವೆ. ಗಣಿಯಲ್ಲಿ ಮೈನ್ಸ್ ಮೇನೇಜರ್‌ಗೆ ತಿಂಗಳಿಗೆ ಸುಮಾರು ೩೦,೦೦೦ ಸಾವಿರಕ್ಕಿಂತಲೂ ಅಧಿಕ ವೇತನ ನೀಡಲಾಗುತ್ತದೆ. ಆಯಾ ಹುದ್ದೆ, ವೇತನ ಮತ್ತು ಸ್ಥಾನಮಾನವು ಸಹ ಭಾರತದ ಜಾತಿ ಸಂಕೀರ್ಣತೆಯ ಮಾದರಿಯಲ್ಲಿ ಹರಿದು ಹಂಚಿಹೋಗಿರುವುದನ್ನು ಗಣಿಗಾರಿಕೆಯಲ್ಲಿಯೂ ಕಾಣಬಹುದು. ಇದನ್ನು ಜಿಲ್ಲೆಯ ಗಣಿಗಾರಿಕೆಯಲ್ಲಿ ಅತ್ಯಧಿಕ ಉತ್ಪಾದನೆಯನ್ನು ಮಾಡಿ ಖ್ಯಾತಿ ಪಡೆದ ವಿ.ಎಸ್.ಎಲ್. ಮತ್ತು ಮಕ್ಕಳು ಸಂಸ್ಥೆಯನ್ನು ಉದಾಹರಣೆಗೆ ತೆಗೆದುಕೊಂಡಾಗ ಈ ಕೆಳಗಿನ ಚಿತ್ರಣವು ಮೂಡಿಬರುತ್ತದೆ.

| ಕ್ರ.ಸಂ. | ಉದ್ಯೋಗಗಳು | ಜಾತಿವಾರು ಹಂಚಿಕೆ |
|---|---|---|
| ೧ | ಗಣಿಸಂಸ್ಥೆಯ ಮಾಲಿಕ | ಮರಾಠ |
| ೨ | ಮೈನ್ಸ್ ಮೇನೇಜರ್ | ಬ್ರಾಹ್ಮಣ |
| ೩ | ಮೇನೇಜರ್ ೧ ಮತ್ತು ೨ | ರೆಡ್ಡೀಸ್/ಪಾಟೀಲ |
| ೪ | ಪೋರ್‌ಮೆನ್ | ಓಬಿಸಿ |
| ೫ | ಮೇಟ್ | ಓಬಿಸಿ |
| ೬ | ಬ್ಲಾಸ್ಟರ್ | ಅಲ್ಪಸಂಖ್ಯಾತ |
| ೭ | ಸ್ಯಾಂಪ್ಲರ್ | ಅಲ್ಪಸಂಖ್ಯಾತ |
| ೮ | ಸೂಪರ್‌ವೈಸರ್ | ಓಬಿಸಿ |
| ೯ | ಡ್ರೈವರ್ | ಓಬಿಸಿ |
| ೧೦ | ಕ್ಲರ್ಕ್ | ಓಬಿಸಿ |
| ೧೧ | ಆಪರೇಟರ್ಸ್ | ಓಬಿಸಿ |
| ೧೨ | ಲೇಬರ್ | ಪ.ಜಾ. ಮತ್ತು ಪ.ಪಂ. |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈಗಾಗಲೇ ತಿಳಿದಿರುವಂತೆ ಗಣಿ ಉದ್ಯಮ ಪುರುಷಾಧಿಪತ್ಯವನ್ನು ಪಡೆದುಕೊಂಡತೆಯೇ, ಇಲ್ಲಿರುವ ದುಡಿಯುವ ಅವಕಾಶಗಳು ಸಹ ಕೇಲವೇ ಜಾತಿಗಳಲ್ಲಿ ಹಂಚಿಕೆಯಾಗಿರುವುದನ್ನು ಈ ಮೇಲಿನ ಚಿತ್ರಣವು ಸ್ಪಷ್ಟಪಡಿಸುತ್ತದೆ. ಗಣಿಯಲ್ಲಿನ ಅತ್ಯಂತ ಉನ್ನತ ಹುದ್ದೆ ಹಾಗೂ ಅತ್ಯದಿಕ ವೇತನ ಪಡೆಯುವ ಸ್ಥಾನವು ಮುಂದುವರೆದ ಜಾತಿಯವರ ಹಿಡಿತದಲ್ಲಿವೆ. ಕಡಿಮೆ ವೇತನ ಹಾಗೂ ಕೆಳದರ್ಜೆಯ ಕೆಲಸಗಳಲ್ಲಿ ಬಹುಸಂಖ್ಯಾತ ಹಿಂದುಳಿದ ವರ್ಗದವರು ಕಾರ್ಯ ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಇನ್ನೂ ಮಹಿಳೆಯರಿಗೆ ಇರುವ ಅಲ್ಪಸ್ವಲ್ಪ ಅವಕಾಶಗಳೆಲ್ಲವೂ ಮಧ್ಯಮವರ್ಗ ಮತ್ತು ಕೆಳವರ್ಗದವರು ಕಾರ್ಯ ನಿರ್ವಹಿಸುತ್ತಿದ್ದಾರೆ. ಮತ್ತೊಂದು ವಿಚಿತ್ರವಾದ ಸಂಗತಿಯೆಂದರೆ ಗಣಿಯಲ್ಲಿ ಕಂಡುಬರುವ ಕೆಲವು ಮಹಿಳಾ ಉದ್ಯೋಗವಕಾಶಗಳಲ್ಲಿ ಮೇಲ್ಜಾತಿಯ ಯಾರೊಬ್ಬರು ಕ್ಷೇತ್ರಕಾರ್ಯ ದುದ್ದಕ್ಕೂ ದೊರೆಯದಿದ್ದದು ಆಶ್ಚರ್ಯ ಮೂಡಿಸುತ್ತದೆ. ಇದಕ್ಕೆ ಕಾರಣ ಸಾಮಾಜಿಕ ಹಾಗೂ ಆರ್ಥಿಕವಾಗಿ ಬಲಿಷ್ಠರಾದವರು ತಮ್ಮ ಮಕ್ಕಳಿಗೆ ತಾಂತ್ರಿಕ ಹಾಗೂ ವೈಜ್ಞಾನಿಕವಾದ ಉನ್ನತ ವ್ಯಾಸಂಗಕ್ಕೆ ಪ್ರೋತ್ಸಾಹಿಸುವುದರಿಂದ ಅವರು ಉನ್ನತ ಸ್ಥಾನಗಳನ್ನು ಅಲಂಕರಿಸಲು, ಸಾಧ್ಯವಾಗಿರಬಹುದು. ಆದರೆ ಬಡವರು, ಕೆಳ ಮತ್ತು ಮಧ್ಯಮ ವರ್ಗದವರು ಪಡೆಯುವ ಶಿಕ್ಷಣವು ಸಾಮಾನ್ಯ ಶಿಕ್ಷಣ ಹಾಗೂ ಕಡಿಮೆ ವೆಚ್ಚದಾಗಿದೆ. ಹೀಗಾಗಿ ಇವರು ಅಲಂಕರಿಸುವ ಸ್ಥಾನಮಾನಗಳು ಕೆಳಮಟ್ಟದವುಗಳಾಗಿವೆ ಎಂದೂ ಸಮೀಕರಿಸಬಹುದು. ಗಣಿಯಲ್ಲಿರುವ ಉದ್ಯೋಗಗಳ ಸ್ವರೂಪವು ಬೇರೆ, ಬೆಂಕಿ ಬೇರೆಯಾಗಿರುವುದನ್ನು ೩.೧೧ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೩.೧೧ : ಗಣಿ ಉದ್ಯೋಗದ ಸ್ವರೂಪ**

| ಕ್ರ. ಸಂ. | ವಿವರಗಳು | ಶಾಶ್ವತ | ತಾತ್ಕಾಲಿಕ ಉದ್ಯೋಗ | ಒಪ್ಪಂದದ ಉದ್ಯೋಗ | ದಿನಗೂಲಿ ಉದ್ಯೋಗ | ಋತುಮಾನದ ಉದ್ಯೋಗ | ಒಟ್ಟು |
|---|---|---|---|---|---|---|---|
| ೧. | ಕಾ.ಸಂಖ್ಯೆ | ೧೦ | ೮೦ | ೬೦ | ೩೦ | ೨೦ | ೨೦೦ |
| ೨. | ಶೇಕಡವಾರು | ೫ | ೪೦ | ೩೦ | ೧೫ | ೧೦ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈ ಮೇಲಿನ ಕೋಷ್ಟಕವು ಜಿಲ್ಲೆಯ ಗಣಿಗಾರಿಕೆಯು ಕಾರ್ಮಿಕರಿಗೆ ಯಾವ ರೀತಿಯ ಉದ್ಯೋಗವನ್ನು ಒದಗಿಸಿಕೊಟ್ಟಿದೆ ಎಂಬುದನ್ನು ತೋರಿಸುತ್ತದೆ. ಗಣಿಗಾರಿಕೆಯ ಉದ್ಯಮವು ಸುಮಾರು ಶೇಕಡ ೮೫ಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಕಾರ್ಮಿಕರಿಗೆ ನೀಡಿರುವ ಉದ್ಯೋಗದ ಸ್ವರೂಪವು ಅಶಾಶ್ವತ ಉದ್ಯೋಗವಾಗಿದೆ. ಇಂತಹ ಅಶಾಶ್ವತ ಉದ್ಯೋಗವು ಕಾಂಟ್ರಾಕ್ಟರ್‌ಗಳ ಅಧೀನದಲ್ಲಿದ್ದು, ಅವರ ನೀತಿ-ನಿರ್ದೇಶನಗಳಲ್ಲಿ ಕಾರ್ಮಿಕರು ಸೇವೆ ಸಲ್ಲಿಸುವರು. ಮತ್ತೆ ಕೆಲವರು ದಿನಗೂಲಿ ಕೆಲಸಗಾರರಾಗಿದ್ದಾರೆ.

ಕೆಲವೊಮ್ಮೆ ಖನಿಜ ಸಂಪನ್ಮೂಲಕ್ಕೆ ಹೆಚ್ಚು ಬೇಡಿಕೆ ಉಂಟಾದ ಸಂದರ್ಭದಲ್ಲಿ ಖನಿಜವನ್ನು ಬೇಗನೆ ವಿಲೇವಾರಿ ಮಾಡಲು ಯಂತ್ರಗಳಿಂದ ಸಾಲದಿದ್ದಾಗ, ಪುರುಷ ಕಾರ್ಮಿಕರು ಲಾರಿಗಳಿಗೆ ಖನಿಜವನ್ನು ಲೋಡಿಂಗ್ ಮಾಡುವ ಕಾರ್ಯವನ್ನು ನಿರ್ವಹಿಸುತ್ತಾರೆ. ಜಿಲ್ಲೆಯ ಯಾವುದೇ ಗಣಿ ಸಂಸ್ಥೆಯನ್ನು ತೆಗೆದುಕೊಂಡರೂ ಆಯಾ ಸಂಸ್ಥೆಗಳಲ್ಲಿ ಕೇವಲ ಶೇಕಡ ೫ ಕ್ಕಿಂತಲೂ ಕಡಿಮೆ ಪ್ರಮಾಣದಲ್ಲಿ ಶಾಶ್ವತ ಉದ್ಯೋಗಿಗಳನ್ನು ಕಾಣುತ್ತೇವೆ. ಇಂತಹ ಕಾರ್ಮಿಕರಿಗೆ ಗಣಿ ಸಂಸ್ಥೆಯು ನಿರ್ಧಿಷ್ಟ, ವೇತನ ಮತ್ತು ಹಲವಾರು ಸೌಲಭ್ಯಗಳನ್ನು ನೀಡಿವೆ. ಇವರನ್ನು ಹೊರತುಪಡಿಸಿ ಇನ್ನುಳಿದ ಕಾರ್ಮಿಕರ ಬಗ್ಗೆ ಕಾಳಜಿಯಾಗಲೀ, ಅನುಕಂಪವಾಗಲೀ ಗಣಿಸಂಸ್ಥೆಯಿಂದ ನಿರೀಕ್ಷಿಸುವುದು ಸಾಧ್ಯವಿಲ್ಲ. ಒಟ್ಟಾರೆಯಾಗಿ ಗಣಿಯನ್ನಾಧರಿಸಿದ ಕಾರ್ಮಿಕರ ಉದ್ಯೋಗದ ಸ್ವರೂಪವು ಅಶಾಶ್ವತ ಹಾಗೂ ಅತಂತ್ರದಿಂದ ಕೂಡಿದೆ.

## ೩.೯. ಕೂಲಿ

ಜಿಲ್ಲೆಯ ಗಣಿಕಾರ್ಮಿಕರು ಪಡೆಯುವ ಕೂಲಿಯು ನಿರ್ಧಿಷ್ಟವಾಗಿರದೇ ಹಲವಾರು ತಾರತಮ್ಯಗಳಿಂದ ಕೂಡಿದೆ. ಅದು ಆಯಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರ ಕೆಲಸವನ್ನು ಆಧರಿಸಿ ನಿಗಧಿಪಡಿಸಲಾಗುತ್ತದೆ ಇಲ್ಲವೇ ಪಾವತಿಸಲಾಗುತ್ತದೆ. ಇದನ್ನು ಕೋಷ್ಟಕ ೩.೧೨ ರಿಂದ ತಿಳಿಯಬಹುದು.

**ಕೋಷ್ಟಕ ೩.೧೨ : ಕೃಷಿ ಕಾರ್ಮಿಕರ ಕೂಲಿಯ ಸ್ವರೂಪ**

| ಕ್ರ.ಸಂ. | ವಿವರಗಳು | ನಿಗದಿತ ಕೂಲಿ | ಅನಿರ್ದಿಷ್ಟ ಕೂಲಿ | ದಿನಗೂಲಿ | ಒಪ್ಪಂದದ ಕೂಲಿ | ಒಟ್ಟು |
|---|---|---|---|---|---|---|
| ೧. | ಕಾ.ಸಂಖ್ಯೆ | ೩೦ | ೬೦ | ೨೫ | ೮೦ | ೨೦೦ |
| ೨. | ಶೇಕಡವಾರು | ೧೭.೫ | ೩೦ | ೧೨.೫ | ೪೦ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯಲ್ಲಿ ಕಂಡುಬರುತ್ತಿರುವ ವಿವಿಧ ಸ್ವರೂಪದ ಕೂಲಿಯನ್ನು ತೋರಿಸುತ್ತದೆ. ಭಾರತವು ಸ್ವಾತಂತ್ರ್ಯಕ್ಕಿಂತಲೂ ಪೂರ್ವದಿಂದಲೇ ಕಾರ್ಮಿಕರ ಕೂಲಿಗೆ ಸಂಬಂಧಿಸಿದಂತೆ ಅನೇಕ ಕಾಯ್ದೆ-ಕಾನೂನುಗಳನ್ನು ಬ್ರಿಟಿಷ ಸರ್ಕಾರ ಜಾರಿಗೊಳಿಸಿತ್ತು. ನಂತರ ಸ್ವಾತಂತ್ರ್ಯ ಭಾರತವು ೧೯೪೮ರ ಕನಿಷ್ಠ ಕೂಲಿ ಕಾಯ್ದೆಯನ್ನು ಜಾರಿಗೊಳಿಸಿತು. ಈ ನಿಯಮದ ಪ್ರಕಾರ ಯಾವುದೇ ವಲಯದಲ್ಲಿ ದುಡಿಯುತ್ತಿರುವ ಕಾರ್ಮಿಕರಿಗೆ ಅವರ ಜೀವನಾವಶ್ಯಕ ವಸ್ತುಗಳನ್ನು ಪಡೆಯುವಷ್ಟು ಕೂಲಿಯದರವನ್ನು ನಿಗಧಿಪಡಿಸಿ ಕಾನೂನು ರೂಪಿಸಿದೆ. ಆದರೆ ವಾಸ್ತವಿಕತೆಯಲ್ಲಿ ಮಾತ್ರ ಸರ್ಕಾರದ ನೀತಿ ನಿಯಮದ ಪ್ರಕಾರ ಕಾರ್ಮಿಕರಿಗೆ ಕೂಲಿ ವಿತರಿಸುವ ವಿಧಿವಿಧಾನಗಳು ಕಟ್ಟುನಿಟ್ಟಾಗಿ

ಅನುಷ್ಠಾನಗೊಂಡಿಲ್ಲ. ಇದಕ್ಕೆ ಗಣಿಗಾರಿಕೆಯಲ್ಲಿರುವ ಕಾರ್ಮಿಕರು ಪಡೆಯುತ್ತಿರುವ ಕೂಲಿಯ ಸ್ವರೂಪವನ್ನು ಅರಿತಾಗ ಸ್ಪಷ್ಟವಾಗುತ್ತದೆ. ಕ್ಷೇತ್ರಕಾರ್ಯದಲ್ಲಿ ಆಯ್ಕೆಗೆ ಪರಿಗಣಿಸಿದ್ದ ಒಟ್ಟು ಕಾರ್ಮಿಕರಲ್ಲಿ ಶೇಕಡ ៤೦ರಷ್ಟು ಕಾರ್ಮಿಕರು ಗಣಿ ಕಂಪನಿಯ ಪರಿವಾನಿಗೆಯನ್ನು ಪಡೆದ ಕಾಂಟ್ರಾಕ್ಟರ್, ಹಾಗೂ ಕೆಲವು ಮಧ್ಯವರ್ತಿಗಳ ಅಧೀನದಲ್ಲಿ ಕೆಲಸ ಮಾಡುತ್ತಿದ್ದಾರೆ. ಇಂತಹ ಕಾರ್ಮಿಕರು ಪಡೆಯುವ ಕೂಲಿಯು ಒಪ್ಪಂದದ ಆಧಾರದ ಮೇಲೆ ನಿರ್ಧಾರವಾಗುತ್ತದೆ. ಹೇಗೆಂದರೆ ಈ ಮೊದಲೇ ಕಾರ್ಮಿಕರಿಗೆ ಇಂತಿಷ್ಟು ಕೆಲಸವನ್ನು ಪೂರೈಸಿದರೆ ಇಂತಿಷ್ಟು ಕೂಲಿಯನ್ನು ಕೊಡುವ ಬಗ್ಗೆ ಒಪ್ಪಂದವಾಗಿರುತ್ತದೆ. ಇಲ್ಲವೆ ಪ್ರತಿನಿತ್ಯದ ಕೆಲಸಕ್ಕೆ ನಿರ್ಧಿಷ್ಟಪಡಿಸಿದ ಪ್ರಮಾಣದಲ್ಲಿ ಕೂಲಿ ವಿತರಿಸುವ ಒಪ್ಪಂದವಾಗಿರುತ್ತದೆ. ಇಂತಹ ವಿಧಾನದಲ್ಲಿ ಕಂಟ್ರಾಕ್ಟರ್ ಅಥವಾ ಮಧ್ಯವರ್ತಿಯು ಕಡಿಮೆ ಕೂಲಿಯನ್ನು ಕಾರ್ಮಿಕರಿಗೆ ಪಾವತಿಸಿ, ಹೆಚ್ಚೂ ಲಾಭವನ್ನು ಪಡೆಯುವ ಅವಕಾಶಗಳು ಇರುವುದರಿಂದ ಕಾರ್ಮಿಕರು ಶೋಷಣೆಗೆ ಈಡಾಗುವ ಸಾಧ್ಯತೆ ಹೆಚ್ಚಾಗಿರುತ್ತವೆ. ಇಂತಹ ಸ್ವರೂಪದ ಕೂಲಿಯನ್ನು ಪಡೆಯುವವರಲ್ಲಿ ಹೆಚ್ಚಾಗಿ ಹೆಂಗಸರು ಹಾಗೂ ಮಕ್ಕಳು ಕಂಡುಬರುತ್ತಾರೆ. ಶೇಕಡ ೩೦ರಷ್ಟಿರುವ ಕಾರ್ಮಿಕರು ತಮ್ಮ ಸೇವೆಗೆ ನಿಯಮಿತವಲ್ಲದ ರೀತಿಯಲ್ಲಿ ಅಂದರೆ ಅನಿರ್ದಿಷ್ಟ ಪ್ರಮಾಣದ ಕೂಲಿಯನ್ನು ಪಡೆಯುವವರಾಗಿದ್ದಾರೆ. ಇಂತಹ ವಿಧಾನದಲ್ಲಿ ಕಾರ್ಮಿಕನು ತನ್ನ ದಿನನಿತ್ಯ ತನ್ನ ದುಡಿಮೆಗೆ ತಕ್ಕಂತೆ ಹೆಚ್ಚೂ ಇಲ್ಲವೆ ಕಡಿಮೆ ಪ್ರಮಾಣದ ಕೂಲಿಯಲ್ಲಿ ತೃಪ್ತಿ ಹೊಂದಬೇಕಾಗುತ್ತದೆ. ಇದೊಂದು ರೀತಿಯಲ್ಲಿ ಕಾರ್ಮಿಕರ ಸಾಮರ್ಥ್ಯಕ್ಕನುಗುಣವಾಗಿ ಇಲ್ಲವೇ ಆಯಾ ಸಮಯ ಹಾಗೂ ಸಂದರ್ಭಗಳ ಆಧಾರದ ಮೇಲೆ ಕೂಲಿಯನ್ನು ನಿರ್ಧರಿಸುವ ವಿಧಾನವಾಗಿದೆ. ಇದರಲ್ಲಿ ಲೋಡಿಂಗ್ ಕಾರ್ಮಿಕರು, ಜರಡಿ ಹಿಡಿಯುವವರು, ಕಲ್ಲು ಪುಡಿ ಮಾಡುವುದು, ಗುಣಮಟ್ಟಕ್ಕನುಗುಣವಾಗಿ ಕಲ್ಲನ್ನು ಅಥವಾ ಅದಿರನ್ನು ವರ್ಗೀಕರಿಸುವವರು ಸೇರಿರುತ್ತಾರೆ. ಈ ವಿಧಾನವು ಸಹ ಕಾಂಟ್ರಾಕ್ಟರ್ ಇಲ್ಲವೆ ಮಧ್ಯವರ್ತಿಗಳ ಅಧೀನದಲ್ಲಿರುವ ಒಪ್ಪಂದದ ಕೂಲಿಯಂತಿರುತ್ತದೆ. ಹೀಗಾಗಿ ಈ ಹಂತದಲ್ಲಿಯು ಕಂಟ್ರಾಕ್ಟರ್‌ಗಳಿಗೆ ಲಾಭವೇ ಪ್ರಧಾನವಾಗಿರುವುದರಿಂದ ಕಾರ್ಮಿಕನ ಶೋಷಣೆ ಸಾಮಾನ್ಯವಾಗಿರುತ್ತದೆ. ಶೇಕಡ ೧೭.೫ ರಷ್ಟು ಕಾರ್ಮಿಕರು ಗಣಿಸಂಸ್ಥೆಗಳ ಆರಂಭದಿಂದಲೂ ನಿವೃತ್ತಿತನಕ ಪ್ರಾಮಾಣಿಕವಾಗಿ ಸೇವೆ ಸಲ್ಲಿಸಿದವರಾಗಿದ್ದಾರೆ. ಈ ವರ್ಗದಿಂದಲೇ ಬಹುತೇಕ ಕಂಪನಿಯ ಯಶಸ್ಸು ಅಥವಾ ಅಪಜಯ ನಿರ್ಧಾರವಾತ್ತದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಗಣಿ ಸಂಸ್ಥೆಯು ಕೆಲವೇ ಕೆಲವು ಬೆರಳೆಣಿಕೆಯ ನೌಕರರನ್ನು ಖಾಯಂ ಸಿಬ್ಬಂಧಿಯನ್ನಾಗಿ ನೇಮಕ ಮಾಡಿಕೊಂಡಿರುತ್ತಾರೆ. ಇವರಿಗೆ ಈ ಮೊದಲೇ ನಿರ್ಧಿಷ್ಟಪಡಿಸಿದ ಪ್ರಮಾಣದಲ್ಲಿ ಪ್ರತಿತಿಂಗಳ ನಿರ್ದಿಷ್ಟ ಮೊತ್ತದ ವೇತನವನ್ನು ಕೊಡಲಾಗುತ್ತದೆ. ಈ ಭಾಗದಲ್ಲಿ ಸೂಪರ್‌ವೈಜರ್, ಡ್ರೈವರ್, ಕ್ಲೀನರ್, ಮೇಟ್, ಕ್ಲರ್ಕ್, ಪ್ಯೂನ್ ಇತ್ಯಾದಿ ಹಂತದ ನೌಕರಸ್ಥರು ಸೇರ್ಪಡೆಯಾಗುತ್ತಾರೆ. ಈ ವರ್ಗದ ಜನರಿಗೆ ವೇತನವನ್ನು ಪಾವತಿಸುವಲ್ಲಿ ಯಾವುದೇ ರೀತಿಯ ಅವ್ಯವಹಾರಕ್ಕೆ ಅವಕಾಶಗಳು

ಇರುವುದಿಲ್ಲ. ಆದರೆ ವೇತನದ ಪ್ರಮಾಣವು ಬೇರೆ ಕೈಗಾರಿಕೆಗಳಿಗೆ ಹೋಲಿಸಿಕೊಂಡರೆ ಗಣಿಗಾರಿಕೆಯ ಕಾರ್ಮಿಕರಿಗೆ ತುಂಬಾ ಕಡಿಮೆಯೆಂದೇ ಹೇಳಬಹುದು. ಉದಾಹರಣೆಗೆ ಭಾರತ್ ಮೈನ್ಸ್ ಆಂಡ್ ಮಿನರಲ್ಸ್‌ನಲ್ಲಿ ಸುಮಾರು ೩೦ ವರ್ಷಗಳಷ್ಟು ಕಾಲ ವಾಹನ ಚಾಲಕನಾಗಿ ಕಾರ್ಯನಿರ್ವಹಿಸಿದ ಒಬ್ಬ ನೌಕರನಿಗೆ ತಿಂಗಳಿಗೆ ಕೇವಲ ೨,೨೦೦ ರೂಗಳನ್ನು ಕೊಡಲಾಗುತ್ತಿದೆ. ಆದರೆ ಅವನ ನಿವೃತ್ತಿಯ ನಂತರ ಕಂಪನಿಯು ಅವನ ಭವಿಷ್ಯಕ್ಕಾಗಿ ಯಾವುದೇ ರೀತಿಯಲ್ಲಿ ಸಾಮಾಜಿಕ ಭದ್ರತಾ ಯೋಜನೆಯನ್ನಾಗಲೀ, ಅಥವಾ ಅನುಕಂಪ ಆಧಾರಿತ ಪ್ರೋತ್ಸಾಹಕ ಹಣವನ್ನಾಗಲೀ ನೀಡಿಲ್ಲ. ಆ ಕಾರ್ಮಿಕನಿಗೆ ಕೇವಲ ೫ ರಿಂದ ೧೦ ಸಾವಿರ ರೂಗಳ ಗೌರವ ಧನವನ್ನು ನೀಡಿ ಅವನನ್ನು ಕಂಪನಿಯಿಂದ ಹೊರಹಾಕಲಾಗಿದೆ. ಹೀಗೆ ಜಿಲ್ಲೆಯ ಎಲ್ಲಾ ಗಣಿಗಾರಿಕೆಯಲ್ಲಿ ಕರ್ತವ್ಯನಿರತ ಹಿರಿಯ ಕಾರ್ಮಿಕರ ಪರಿಸ್ಥಿತಿಯು ಇಂತಹ ಘಟನೆಗಳಿಂದ ಕೂಡಿರುವುದು ಸಹಜವೆಂಬಂತೆ ಕಂಡುಬರುತ್ತದೆ.

ಈಗಾಗಲೇ ಗಣಿ ಕಾರ್ಮಿಕರು ಪಡೆಯುತ್ತಿರುವ ಕೂಲಿಯ ಸ್ವರೂಪ ಬೇರೆ, ಬೇರೆಯಾಗಿದ್ದಂತೆ, ಅವರು ಪಡೆಯುವ ಹಣದ ಪ್ರಮಾಣವು ಬಹಳಷ್ಟು ವ್ಯತ್ಯಾಸದಿಂದ ಕೂಡಿದೆ. ಆಯಾ ಸ್ವರೂಪದ ಕೂಲಿಯ ವಿಧಾನದಲ್ಲಿಯೂ ಪುರುಷ ಹಾಗೂ ಮಹಿಳೆ ಪಡೆದುಕೊಳ್ಳುವ ಕೂಲಿಯ ದರವು ಭಿನ್ನವಾಗಿರುವುದು ಗಮನಾರ್ಹ. ಇದರ ಜೊತೆಗೆ ಆಯಾ ಕಾರ್ಮಿಕರ ವಯಸ್ಸಿಗನುಗುಣವಾಗಿ ಕೂಲಿಯನ್ನು ಕಾರ್ಮಿಕರು ಪಡೆಯಲು ಸಾಧ್ಯವಿದೆ. ಇಂತಹ ಕೂಲಿಯ ವ್ಯತ್ಯಾಸವನ್ನು ಕೋಷ್ಟಕ ೩.೧೩ರಿಂದ ತಿಳಿಯಬಹುದು.

**ಕೋಷ್ಟಕ ೩.೧೩ : ಗಣಿ ಕಾರ್ಮಿಕರ ಕೂಲಿಯ ದರ**

| ಕ್ರ.ಸಂ. | ಕಾರ್ಮಿಕರ ವಯಸ್ಸು | ಕೂಲಿಯ ಸ್ವರೂಪ | ಲಿಂಗವಾರು ಹಂಚಿಕೆ | | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|---|---|---|
| | | | ಗಂಡು | ಹೆಣ್ಣು | | |
| ೧. | ೭-೧೫ | ೨೦-೪೦ | ೧೦ | ೧೫ | ೨೫ | ೧೨.೫ |
| ೨. | ೧೬-೨೪ | ೪೧-೬೦ | ೨೯ | ೪೧ | ೭೦ | ೩೫.೦ |
| ೩. | ೨೫-೩೪ | ೬೧-೯೦ | ೫೬ | ೩೯ | ೯೫ | ೪೭.೫ |
| ೪. | ೩೫ ಕ್ಕೂ | ೧೦೦ ರೂ ಹೆಚ್ಚು | ೧೦ | -- | ೧೦ | ೦೫.೦ |
| | | | | ಒಟ್ಟು | ೨೦೦ | ೧೦೦.೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಗಣಿ ಕಾರ್ಮಿಕರು ತಮ್ಮ ಸೇವೆಗೆ ಪ್ರತಿಯಾಗಿ ಮತ್ತು ಆಯಾ ವಯಸ್ಸಿಗನುಗುಣವಾಗಿ ವೇತನವನ್ನು ಪಡೆಯುವ ಕ್ರಮವನ್ನು ವಿವರಿಸುತ್ತದೆ. ಶೇಕಡ ೧೨.೫ ರಷ್ಟು ಗಣಿಯಲ್ಲಿರುವ

೭ ರಿಂದ ೧೫ ವರ್ಷಗಳ ವಯಸ್ಸಿನ ಬಾಲ ಕಾರ್ಮಿಕರು ರೂ. ೨೦ ರಿಂದ ಬಳಕೆಯನ್ನು ತೋರಿಸುತ್ತದೆ. ಅವರು ತಮ್ಮ ಸೇವೆಯ ೮ ರಿಂದ ೧೦ಗಂಟೆಗಳ ದುಡಿಮೆಗೆ ಪಡೆಯುವ ಹಣವು ೨೦ ರೂಗಳಿಂದ ೪೦ರೂಗಳ ಒಳಗೆ ಕೂಲಿಯನ್ನು ಪಡೆಯುತ್ತಾರೆ. ಇದರಲ್ಲಿ ವಿಶೇಷವಾಗಿ ಗಮನಿಸಬೇಕಾಗಿರುವ ಅಂಶವೆಂದರೆ ಒಟ್ಟು ೨೫ ಬಾಲಕರಲ್ಲಿ ೧೫ ಬಾಲಕಿಯರು ಹಾಗೂ ೧೦ ಬಾಲಕರು ಸೇರಿದ್ದಾರೆ. ಹೀಗಾಗಿ ಬಾಲಕರಿಗಿಂತ ಬಾಲಕಿಯರ ಪ್ರಮಾಣ ಹೆಚ್ಚಾಗಿರುವುದನ್ನು ತಿಳಿಯಬಹುದು. ಇದಕ್ಕೆ ಅನೇಕ ಕಾರಣಗಳು ಇವೆ. ಅವುಗಳೆಂದರೆ ಹೆಣ್ಣು ಮಕ್ಕಳು ಶಿಕ್ಷಣ ಪಡೆದು ಮಾಡುವುದಾದರೂ ಏನು? ಶಾಲೆಯಲ್ಲಿ ಪುರುಷ ಶಿಕ್ಷಕರು ಹಾಗೂ ಹುಡುಗರೊಂದಿಗಿನ ಸಂಪರ್ಕದ ಆತಂಕ? ಹೆಣ್ಣು ಋತುಮತಿಯಾದ ತಕ್ಷಣ ಮದುವೆ ಮಾಡಿಕೊಟ್ಟು ಪೋಷಕರು ತಮ್ಮ ಮೇಲಿನ ಜವಾಬ್ದಾರಿ ಕಡಿಮೆಮಾಡಿಕೊಳ್ಳುವ ಮನಸ್ಥಿತಿ ಹಾಗೂ ಹೆಣ್ಣು ಮದುವೆನಂತರ ಮತ್ತೊಬ್ಬರ ಮನೆಯ ಸ್ವತ್ತಾಗುವುದರಿಂದ ಏಕೆ ವಿದ್ಯಾಭ್ಯಾಸವನ್ನು ಕೊಡಿಸಬೇಕೆಂಬ ಉದಾಸೀನತೆ ಇತ್ಯಾದಿ ಅಂಶಗಳಿಂದ ಗಣಿಗಾರಿಕೆಯಲ್ಲಿ ಬಾಲಕರಿಗಿಂತ ಬಾಲಕಿಯರ ಪ್ರಮಾಣ ವೃದ್ಧಿಗೊಳ್ಳಲು ಕಾರಣವಾಗಿದೆ. ಹಾಗೆಯೇ ಬಾಲಕೀಯರಿಗಿಂತ ಬಾಲಕರ ಸಂಖ್ಯೆ ಕಡಿಮೆಯಾಗಲು ಕಾರಣವೇನೆಂದರೆ ೧. ಬಾಲಕ ಶಿಕ್ಷಣ ಪಡೆದು ಕುಟುಂಬದ ಆಸರೆ. ೨. ಕುಟುಂಬದ ಅಭಿವೃದ್ಧಿಗೆ ಸಹಕಾರಿಯಾಗುತ್ತಾನೆ. ೨. ಪುರುಷಾಧಿಪತ್ಯ ಕುಟುಂಬ ವ್ಯವಸ್ಥೆಯ ಆಚರಣೆ ಇತ್ಯಾದಿ ಅಂಶಗಳಿಂದಾಗಿ ಅವರ ಪ್ರಮಾಣ ಶೇಕಡ ೫ ರಷ್ಟಾಗಿದೆ. ಅಲ್ಲದೆ ಮಹಿಳೆಯರ ಬಳಕೆಯಿಂದ ಗಣಿ ಮಾಲೀಕ, ಕಾಂಟ್ರ್ಯಾಕ್ಟರ್ ಹಾಗೂ ಮಧ್ಯವರ್ತಿಗಳಿಗೆ ಕೆಲಸದ ಸಮಯದಲ್ಲಿ ಹೆಚ್ಚು ಕಿರಿ, ಕಿರಿ ಇರುವುದಿಲ್ಲ. ಅಲ್ಲದೇ ಯಾವುದೇ ರೀತಿಯ ಬೇಡಿಕೆ ಉದ್ಭವಿಸದೆ. ಕಡಿಮೆ ಕೂಲಿಯಿಂದ ಹೆಚ್ಚು ಕೆಲಸ ತೆಗೆದುಕೊಳ್ಳಲು ಸಾಧ್ಯವಿರುವುದರಿಂದ, ಬಾಲಕಾರ್ಮಿಕರ ಬಳಕೆ ಸಾಮಾನ್ಯವಾಗಿದೆ. ಗಣಿಗಾರಿಕೆ ಅವಲಂಭಿತ ಕಾರ್ಮಿಕರು ತುಂಬಾ ಬಡವರಾಗಿದ್ದು, ಅವರು ಪಡೆಯುವ ಕೂಲಿಯದರವು ಕಡಿಮೆ ಇರುವುದರಿಂದ ಕುಟುಂಬದ ನಿರ್ವಹಣೆಗಾಗಿ ಅನಿವಾರ್ಯವಾಗಿ ಮಕ್ಕಳನ್ನು ಬಳಸಿಕೊಳ್ಳಬೇಕಾಗಿದೆಂಬ ವಿಷಾದದ ಛಾಯೆ ಪೋಷಕರ ಮುಖಗಳಲ್ಲಿ ವ್ಯಕ್ತವಾಗುತ್ತದೆ. ೧೬ ರಿಂದ ೨೪ರ ವಯಸ್ಸಿನ ಗಣಿ ಕಾರ್ಮಿಕರು ೪೧ ರೂ. ಯಿಂದ ೬೦ ರೂಗಳ ವೇತನವನ್ನು ಪಡೆಯುತ್ತಾರೆ. ಈ ಭಾಗದಲ್ಲಿ ಪುರುಷರ ಪ್ರಮಾಣ ಶೇಕಡ ೧೪.೫ರಷ್ಟಿದ್ದರೆ, ಮಹಿಳೆಯರ ಪ್ರಮಾಣ ಶೇಕಡ ೨೦.೫ರಷ್ಟು ಇರುವುದನ್ನು ಕಾಣಬಹುದು. ಕಾರ್ಮಿಕರಿಗೆ ಹೆಚ್ಚು ಬೇಡಿಕೆ ಬರುವ ಕಾಲಮಾನ ೨೫ ರಿಂದ ೩೪ರ ವಯಸ್ಸಿನ ಯೌವನದ ದಿನಗಳಲ್ಲಿ. ಕಾರಣ ಇಂತಹ ಕಾಲಘಟ್ಟದಲ್ಲಿ ಕಾರ್ಮಿಕನು ಹೆಚ್ಚು ಲವಲವಿಕೆ, ಉತ್ಸಾಹ, ಹುರುಪಿನಿಂದ ಹೆಚ್ಚು ಶ್ರಮವಹಿಸಿ ಕಾರ್ಯ ನಿರ್ವಹಿಸುವ ಸಾಮರ್ಥ್ಯ ಹೊಂದಿರುತ್ತಾನೆ. ಹೀಗಾಗಿ ಹೆಚ್ಚು ಕೂಲಿಯನ್ನು ಪಡೆಯಲು ಸಾಧ್ಯವಿರುತ್ತದೆ. ಅದು ರೂ ೬೦ ರಿಂದ ೮೦ ರೂಗಳಿಗಿಂತ ಅಧಿಕವಾಗಿರುತ್ತದೆ. ಆದರೆ ಈ ಹಂತದಲ್ಲಿ ಮಹಿಳೆಯರಿಗಿಂತ

ಪುರುಷ ಕಾರ್ಮಿಕರ ಪ್ರಮಾಣ ಹೆಚ್ಚಾಗಿದೆ. ಶೇಕಡ ೫೮ರಷ್ಟು ಕಾರ್ಮಿಕರು ೩೫ ವರ್ಷಕ್ಕೂ ಮೇಲ್ಪಟ್ಟವರ ವಿಭಾಗದಲ್ಲಿ ಕಂಡುಬರುತ್ತಾರೆ. ಈ ವಿಭಾಗದ ಮತ್ತೊಂದು ವಿಶೇಷವೆಂದರೆ ಮಹಿಳೆಯರ ಸಂಖ್ಯೆ ಈ ಹಂತದಲ್ಲಿ ಕಣ್ಮರೆಯಾಗಿರುವುದು. ಏಕೆಂದರೆ ಮಹಿಳೆ ಪುರುಷನಷ್ಟು ದೈಹಿಕ ಸಾಮರ್ಥ್ಯವನ್ನು ಪಡೆದಿಲ್ಲವೆಂಬ ಗ್ರಹಿಕೆಯಿಂದ ಮಹಿಳೆಯರ ಆಯ್ಕೆಯು ಕಣ್ಮರೆಯಾಗಲು ಕಾರಣವಾಗಿದೆ. ಕಾರ್ಮಿಕರ ವಯಸ್ಸು ೩೫ಕ್ಕೂ ಮೇಲ್ಪಟ್ಟ ವಯಸ್ಸಿನ ಕಾರ್ಮಿಕರು ತಮ್ಮ ಉದ್ಯೋಗಗಳಲ್ಲಿ ನುರಿತವರು, ಬೌದ್ಧಿಕವಾಗಿ ಸೃಜನಶೀಲರು, ತಾಂತ್ರಿಕತೆಯೊಂದಿಗೆ ವ್ಯವಹರಿಸುವ ಮನಸ್ಥಿತಿಯನ್ನು ಹೊಂದಿ, ತಮ್ಮ ವೃತ್ತಿ ಮತ್ತು ಅನುಭವದಿಂದ ಚಾಣಕ್ಷತನ. ಹಾಗೂ ಶೀಘ್ರವಾಗಿ ಕಾರ್ಯ ನಿರ್ವಹಿಸುವುದರಿಂದ ೧೦೦ರೂಗಳಿಗಿಂತ ಹೆಚ್ಚು ಕೂಲಿಯನ್ನು ಪಡೆಯುವ ಅವಕಾಶ ಕೆಲವೇ ಕಾರ್ಮಿಕರಿಗಿದೆ. ಈ ಭಾಗದಲ್ಲಿ ವಾಹನ ಚಾಲಕರು, ಆಪರೇಟರ್‌ಗಳು, ಮೆಕಾನಿಕ್‌ಗಳು ಸೇರಿರುತ್ತಾರೆ. ಇಲ್ಲಿಯೂ ಮಹಿಳಾ ಕಾರ್ಮಿಕರು ಕಂಡುಬರುವುದಿಲ್ಲ. ಒಟ್ಟಾರೆಯಾಗಿ ಹೇಳುವುದಾದರೆ ಗಣಿಗಾರಿಕೆಯಲ್ಲಿ ಲಿಂಗತಾರತಮ್ಯ ಮತ್ತು ಕೂಲಿ ತಾರತಮ್ಯ ಪ್ರಧಾನವಾಗಿರುವುದನ್ನು ಗುರುತಿಸಬಹುದು.

## ೩.೧೧. ಆದಾಯ

ಪ್ರಸ್ತುತ ಸಮಾಜವು ಆಯಾ ಜಾತಿ, ಜನಾಂಗ ಹಾಗೂ ಕುಟುಂಬಗಳ ಸ್ಥಾನಮಾನಗಳ ನಿರ್ಧಾರದಲ್ಲಿ ಅವುಗಳು ಪಡೆಯುವ ಇಲ್ಲವೇ ಹೊಂದಿರುವ ಆದಾಯವನ್ನು ಪ್ರಮುಖ ಮಾನದಂಡವಾಗಿ ಬಳಸಲಾಗುತ್ತದೆ. ವಿಶ್ವದ ಅನೇಕ ರಾಷ್ಟ್ರಗಳಲ್ಲಿ ಆಯಾ ಸರ್ಕಾರಗಳ ಚಲನವಲನವು ಅಲ್ಲಿ ನೆಲಸಿರುವ ಜನರ ಹಾಗೂ ಕುಟುಂಬದ ಆದಾಯವು ಅತ್ಯಧಿಕವಾಗಿದ್ದರೆ, ಅಂತಹ ದೇಶಗಳಲ್ಲಿ ಜನರ ಜೀವನ ಮಟ್ಟ, ದೈಹಿಕ ಸಾಮರ್ಥ್ಯ, ಉತ್ಪಾದನೆಯ ತಂತ್ರ, ಆರೋಗ್ಯದ ಪ್ರಮಾಣ, ಶಿಕ್ಷಣದ ಗುಣಮಟ್ಟ ಮತ್ತು ಮೂಲಭೂತ ಸೌಕರ್ಯಗಳ ಪ್ರಮಾಣ ಶ್ರೀಮಂತವಾಗಿರುವುದನ್ನು ತಿಳಿದಿದ್ದೇವೆ. ಹಾಗೆಯೇ ಯಾವುದೇ ರಾಷ್ಟ್ರದ ಜನರ ಅಥವಾ ಕುಟುಂಬದ ಸರಾಸರಿ ಆದಾಯ ಕಡಿಮೆಯಿದ್ದರೆ, ಆ ದೇಶಗಳಲ್ಲಿ ನಿರುದ್ಯೋಗ, ಬಡತನ, ಸೋಮಾರಿತನ, ಕಳ್ಳತನ, ದರೋಡೆ ಮುಂತಾದ ಚಟುವಟಿಕೆಗಳಿಂದಾಗಿ ಸಾಮಾಜಿಕ ಶಾಂತಿ ಕದಡಿ ಅಶಾಂತಿ ಹಾಗೂ ಗೊಂದಲದ ವಾತಾವರಣವು ಸೃಷ್ಟಿಯಾಗಿ ಆ ದೇಶ ಹಾಗೂ ಸಮಾಜದಲ್ಲಿ ಕೋಲಾಹಲ, ದ್ವೇಷ, ವಂಚನೆಯ ಪ್ರಕರಣಗಳು ಮುಗಿಲು ಮುಟ್ಟಿವೆ. ಇಂತಹ ವಾತವರಣ ಹಿಂದುಳಿದ ಹಾಗೂ ಬಡರಾಷ್ಟ್ರಗಳ ಸಾಮಾಜಿಕ ಮತ್ತು ಆರ್ಥಿಕತೆಯ ಬಲಾಬಲಗಳಿಂದ ತಿಳಿಯಬಹುದು. ಈ ಹಿನ್ನೆಲೆಯಲ್ಲಿ ಗಣಿಕಾರ್ಮಿಕರು ಪಡೆಯುತ್ತಿರುವ ಕೂಲಿಯ ಪ್ರಮಾಣವು ಅವರ ಆದಾಯವನ್ನು ನಿರ್ಧರಿಸುವುದರಿಂದ ಗಣಿ ಕಾರ್ಮಿಕರ ಒಟ್ಟು ಆದಾಯವು ಮಹತ್ವವೆನಿಸುತ್ತದೆ.

ಈಗಾಗಲೇ ಗಣಿ ಕಾರ್ಮಿಕರು ಪಡೆಯುತ್ತಿರುವ ಕೂಲಿಯ ಸ್ವರೂಪವನ್ನು ತಿಳಿದನಂತರ, ಅವರ ತಿಂಗಳ ವೇತನ, ಜೀವನ ವೆಚ್ಚದ ಪ್ರಮಾಣ, ಉಳಿತಾಯದ ಸಾಮರ್ಥ್ಯ ಹಾಗೂ ಕಾರ್ಮಿಕರ ಋಣ ಭಾರವನ್ನು ತಿಳಿದಾಗ ಕಾರ್ಮಿಕರ ಜೀವನ ಮಟ್ಟದ ಸ್ಪಷ್ಟ ಚಿತ್ರಣ ಮೂಡಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯದಲ್ಲಿ ಆಯ್ಕೆಗೆ ಪರಿಗಣಿಸಿದ್ದ ಕಾರ್ಮಿಕರ ತಿಂಗಳವಾರು ಆದಾಯ ಕೋಷ್ಟಕ ೩.೧೪ರಲ್ಲಿ ಕಂಡುಬರುತ್ತದೆ.

**ಕೋಷ್ಟಕ ೩.೧೪ : ಕಾರ್ಮಿಕರ ಆದಾಯದ ಪ್ರಮಾಣ**

| ಕ್ರ.ಸಂ | ವಿವರಗಳು | ತಿಂಗಳ ಆದಾಯದ ರೂಪದಲ್ಲಿ ಗಣನೆ | | | | | | | | | | | | |
|---|---|---|---|---|---|---|---|---|---|---|---|---|---|---|
| ೧. | ಕಾ.ಆದಾಯ | ೧೦೦೦-೧೫೦೦ | | | ೧೫೦೧-೨೦೦೦ | | | ೨೦೦೧-೨೫೦೦ | | | ೨೫೦೧ ಮೇಲ್ಪಟ್ಟು | | | ಒಟ್ಟು |
| ೨. | ಲಿಂಗವಾರು ಹಂಚಿಕೆ | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | |
| ೩. | ಕಾ.ಸಂಖ್ಯೆ | ೨೦ | ೬೦ | ೮೦ | ೩೦ | ೪೦ | ೭೦ | ೪೦ | - | ೪೦ | ೧೦ | - | ೧೦ | ೨೦೦ |
| ೪. | ಶೇಕಡವಾರು | ೧೦ | ೩೦ | ೪೦ | ೧೫ | ೨೦ | ೩೫ | ೨೦ | - | ೨೦ | ೫ | - | ೫ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಒಟ್ಟಾರೆಯಾಗಿ ಶೇಕಡ ೭೫ ಕ್ಕಿಂತಲೂ ಹೆಚ್ಚು ಗಣಿಕಾರ್ಮಿಕರ ತಿಂಗಳ ವರಮಾನ ೧೦೦೦ ರೂಗಳಿಂದ ೨೦೦೦ ರೂಗಳವರೆಗೆ ಇರುವುದು ಕಂಡುಬರುತ್ತದೆ. ಇಂತಹ ಅಲ್ಪ ವರಮಾನ ಪಡೆಯುವಲ್ಲಿ ಪುರುಷರಿಗಿಂತಲೂ ಮಹಿಳೆಯರ ಪ್ರಮಾಣವು ಅತ್ಯಧಿಕವಾಗಿದೆ. ಇಂತಹ ಬೆಳವಣಿಗೆಯಿಂದ ಸ್ತ್ರೀಯರ ಆದಾಯದ ಮೂಲವು ಕಡಿಮೆಯಾಗಿರುವುದರಿಂದ ಅವಳ ಸಾಮಾಜಿಕ ಸ್ಥಾನವು ಕುಂಠಿತಗೊಳ್ಳಲು ಕಾರಣವಾಗಿದೆ. ಹೀಗಾಗಿ ಅವರ ಆರೋಗ್ಯ, ಆಹಾರ, ಉಡುಪು ಇತ್ಯಾದಿಗಳು ಕಡಿಮೆ ಗುಣಮಟ್ಟದಲ್ಲಿಯೇ ತೃಪ್ತಿಯನ್ನು ಕಾಣಬೇಕಾಗಿದೆ. ಇಂತಹ ಬೆಳವಣಿಗೆಯು ಮಹಿಳೆಯನ್ನು ಅನಾರೋಗ್ಯಕ್ಕೆ, ಕಡಿಮೆ ದಕ್ಷತೆಗೆ ಈಡುಮಾಡಿದೆ. ಇದರಿಂದಾಗಿ ಕಡಿಮೆ ಕೂಲಿ, ನಿರುದ್ಯೋಗ ಹಾಗೂ ಬಡತನಗಳಿಂದಾಗಿ ಹತ್ತಾರು ರೋಗಗಳಿಗೆ ಮಹಿಳೆ ಹಾಗೂ ಪುರುಷ ಬಲಿಯಾಗಬೇಕಾದ ಸನ್ನಿವೇಶ, ತಲೆದೂರಿದೆ, ಆದರೆ ಸರಾಸರಿ ಪುರುಷರ ಕೂಲಿಯ ಪ್ರಮಾಣವು ಹೆಚ್ಚಿರುವುದರಿಂದ ಅವರು ತಿಂಗಳಿಗೆ ಪಡೆಯುವ ವರಮಾನವು ಹೆಚ್ಚಾಗಿದೆ. ಶೇಕಡ ೧೦ ರಷ್ಟು ಪುರುಷರು ೧೦೦೦ ರೂಗಳಿಂದ ೧೫೦೦ ರವರಗೆ ವೇತನ ಪಡೆಯುವಲ್ಲಿ ಬಾಲಕಾರ್ಮಿಕರು ಹೆಚ್ಚಾಗಿದ್ದಾರೆ. ಅವರನ್ನು ಜರಡಿಹಿಡಿಯಲು, ಕಲ್ಲನ್ನು ಸಂಗ್ರಹಿಸಲು, ಸಂಸ್ಕರಣ ಮಾಡಲು, ಕಲ್ಲುಪುಡಿ ಮಾಡಲು, ಗುಣಮಟ್ಟದ ಕಲ್ಲನ್ನು ಸಂಗ್ರಹಿಸಲು ಮಹಿಳೆಯರ ಜೊತೆ ಕೆಲಸದಲ್ಲಿ ತೊಡಗಿರುವುದರಿಂದ ಅವರ ಕೂಲಿ ಪ್ರಮಾಣ ಕಡಿಮೆ ಇದೆ. ಹೀಗಾಗಿ ಅವರ ವರಮಾನ ಕಡಿಮೆಯಾಗಿದೆ. ಈ ವಿಭಾಗದಲ್ಲಿ ಮಹಿಳೆಯರ ಪ್ರಮಾಣ ಪುರುಷ

ಬಾಲಕಾರ್ಮಿಕರಿಗಿಂತ ದ್ವಿಗುಣಗೊಂಡಿದೆ ಅದು ಶೇಕಡ ೩೦ ರಷ್ಟಿರುವುದು ಕಾರ್ಮಿಕ ಸಮುದಾಯವು ಮಹಿಳೆಯ ಬಗ್ಗೆ ಕುಟುಂಬವು ಹೊಂದಿರುವ ಬಡತನ, ನಿಷ್ಕಾಳಜಿ, ತಿರಸ್ಕಾರ ಹಾಗೂ ತಾತ್ಸಾರ ಮನೋಭಾವನೆಗಳು ಅವಳ ದುಡಿಮೆಯ ಅವಲಂಬನೆಯನ್ನು ಧೃಡಪಡಿಸುತ್ತದೆ. ಹಾಗೆಯೇ ರೂ. ೧೫೦೦ ಗಳಿಂದ ೨೦೦೦ ರೂ.ಗಳವರೆಗಿನ ಆದಾಯದ ವಿಭಾಗದಲ್ಲಿ ಶೇಕಡ ೨೦ ರಷ್ಟು ಮಹಿಳೆಯು ಕಂಡುಬರುತ್ತಾಳೆ. ಇಲ್ಲಿ ದಿನಕ್ಕೆ ಒಬ್ಬ ಮಹಿಳೆ ೫೦ ರೂ ರಿಂದ ೬೦ ರೂಗಳವರೆಗೆ ಕೂಲಿಯನ್ನು ಪಡೆಯಲು ಶಕ್ತಳಾಗಿರುವುದನ್ನು ನೋಡಬಹುದು. ಗೋಚರಿಸುತ್ತದೆ. ಇಲ್ಲಿಯು ಪುರುಷರಿಗಿಂತ ಮಹಿಳೆಯರ ಸಂಖ್ಯೆ ದ್ವಿಗುಣಗೊಂಡಿದೆ. ಆದರೆ ೨೦೦೧ ರಿಂದ ೨೫೦೦ ರೂ. ಹಾಗೂ ೨೫೦೦ಕ್ಕೆ ಮೇಲ್ಪಟ್ಟು ಆದಾಯದ ವ್ಯಾಪ್ತಿಯಲ್ಲಿ ಮಹಿಳಾ ಕಾರ್ಮಿಕರನ್ನು ಕಾಣಲು ಸಾಧ್ಯವಾಗಿಲ್ಲ. ಇದಕ್ಕೆ ಕೆಲವು ಕಂಪನಿಗಳಲ್ಲಿ ಪುರುಷರು ಖಾಯಂ ನೌಕರಸ್ಥರು, ಡ್ರೈವರ್, ಆಪರೇಟರ್ ಹಾಗೂ ಸೂಪರ್‌ವೈಜರ್ ಸೇರಿದ್ದಾರೆ. ಅವರ ವೇತನದ ಪ್ರಮಾಣ ಹೆಚ್ಚಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ ನಮ್ಮ ಸುತ್ತಲಿನ ವ್ಯವಸ್ಥೆಯಲ್ಲಿರುವ ಬೇರೆ ಬೇರೆ ಉತ್ಪಾದನಾ ವಲಯಗಳಲ್ಲಿನ ಕೆಲಸದ ಸ್ವರೂಪ, ಕಾರ್ಮಿಕರ ಕೂಲಿ ಹಾಗು ತಿಂಗಳ ವರಮಾನಕ್ಕೆ ಹೋಲಿಕೆ ಮಾಡಿದಾಗ, ಗಣಿ ಕಾರ್ಮಿಕರು ಪಡೆಯುತ್ತಿರುವ ಹಾಗೆಯೇ ಗಣಿಕಾರ್ಮಿಕರು ತಮ್ಮ ಆದಾಯವನ್ನು ಹೇಗೆ ಖರ್ಚು ಮಾಡುತ್ತಾರೆ ಎಂಬುದನ್ನು ಕೋಷ್ಟಕ ೩.೧೫ ರಿಂದ ತಿಳಿಯಬಹುದು.

### ೩.೧೧. ವೆಚ್ಚದ ಪ್ರಮಾಣ

**ಕೋಷ್ಟಕ ೩.೧೫ : ಕಾರ್ಮಿಕರ ವೆಚ್ಚದ ವಿವರ**

| ಕ್ರ.ಸಂ | ಒಟ್ಟು ಆದಾಯ | ೧೦೦೦-೧೫೦೦ | | | ೨೦೧-೩೦೦ | | | ೩೦೧-೪೦೦ | | | ೨೫೦೧ ಮೇಲ್ಪಟ್ಟು | | | |
|---|---|---|---|---|---|---|---|---|---|---|---|---|---|---|
| ೧. | ವೆಚ್ಚದ ಹಣ | ೧೦೦-೨೦೦ | | | ೧೫೦೧-೨೦೦೦ | | | ೨೦೦೧-೨೫೦೦ | | | ೨೫೦೧ ಮೇಲ್ಪಟ್ಟು | | | ಒಟ್ಟು |
| ೨. | ಲಿಂಗವಾರು ಹಂಚಿಕೆ | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | |
| ೩. | ಕಾ.ಸಂಖ್ಯೆ | ೨೦ | ೬೦ | ೮೦ | ೩೦ | ೪೦ | ೭೦ | ೪೦ | - | ೪೦ | ೧೦ | - | ೧೦ | ೨೦೦ |
| ೪. | ಶೇಕಡವಾರು | ೧೦ | ೩೦ | ೪೦ | ೧೫ | ೨೦ | ೩೫ | ೨೦ | - | ೨೦ | ೧೦ | - | ೧೦ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಗಣಿಕಾರ್ಮಿಕರು ತಮ್ಮ ದಿನನಿತ್ಯದ ಕೂಲಿಯಿಂದ ಬಂದ ವರಮಾನದಲ್ಲಿ ತಮ್ಮ ಕುಟುಂಬದ ನಿರ್ವಹಣೆಯ ಜೊತೆಗೆ ದೈನಂದಿನ ಕಾರ್ಯ ಚಟುವಟಿಕೆಗಳಿಗೆ ಯಾರು ಮತ್ತು ಹೇಗೆ ವೆಚ್ಚವನ್ನು ಮಾಡಲಾಗುತ್ತದೆ ಹಾಗೂ ಹಣವನ್ನು ವೆಚ್ಚಮಾಡುವ ಅಧಿಕಾರ ಪುರುಷ ಮತ್ತು ಮಹಿಳಾ ಕಾರ್ಮಿಕರಿಗೆ ಯಾವ ಪ್ರಮಾಣದಲ್ಲಿದೆ ಎಂಬುದನ್ನು ಕೋಷ್ಟಕದಿಂದ ತಿಳಿಯಬಹುದು ದಿನಗೂಲಿ ೪೦ ರೂಪಾಯಿಯಿಂದ

೬೦ ರೂಗಳವರೆಗೆ ದುಡಿಯುವ ಶೇಕಡ ೪೦ರಷ್ಟು ಮಹಿಳೆಯರು ತಮ್ಮ ತಿಂಗಳ ವರಮಾನದಲ್ಲಿ ಅವರ ವೈಯಕ್ತಿಕ ಅಭಿಲಾಷೆಗಿಂತ ಮಕ್ಕಳ ಪಾಲನೆ-ಪೋಷಣೆ, ಮನೆ, ಸಂಸಾರಕ್ಕಾಗಿ ಕೇವಲ ೧೦೦ ರೂ.ಗಳಿಂದ ೨೦೦ ರೂ.ಗಳವರೆಗೆ ಅವಳು ದುಡಿದ ಹಣದಲ್ಲಿ ಖರ್ಚುಮಾಡುವ ಅಧಿಕಾರವನ್ನು ಪಡೆದಿದ್ದಾಳೆ. ಹಾಗೆಯೇ ಕೆಲವು ಕಾರ್ಮಿಕ ಕುಟುಂಬಗಳು ಮಹಿಳಾ ಹಿರಿತನ ಹೊಂದಿರುವುದರಿಂದ ಮಹಿಳೆ ತಾನು ದುಡಿದ ಹಣದಲ್ಲಿ ಕೆಲವು ವೈಯಕ್ತಿಕ ಅಹವಾಲುಗಳಾದ ಸರಾಯಿ, ಟಿಫಿನ್, ನಶ್ಯ, ಟೀ ಇತ್ಯಾದಿಗಳ ಈಡೇರಿಕೆಗಾಗಿ ಪ್ರತಿ ತಿಂಗಳು ೨೦೧ ರಿಂದ ೩೦೦ ರೂಗಳವರೆಗೆ ಖರ್ಚು ಮಾಡುವ ಅಧಿಕಾರವನ್ನು ಪಡೆದಿದ್ದಾಳೆ. ಆದರೆ ಪುರುಷ ಮಾತ್ರ ತಾನು ದುಡಿದ ಹಣದಲ್ಲಿ ಕುಟುಂಬದ ಸಾಮೂಹಿಕ ಹಿತಾಸಕ್ತಿಗಿಂತಲೂ ತನ್ನ ದೈನಂದಿನ ಆಸೆ ಆಕಾಂಕ್ಷೆಗಳಿಗೆ ಶೇಕಡ ೪೨.೫ ರಷ್ಟು ಕಾರ್ಮಿಕರು ೨೦೦ ರೂ.ಗಳಿಂದ ೫೦೦ ಕ್ಕೂ ಮೇಲ್ಪಟ್ಟು ಖರ್ಚುಮಾಡುವ ಪುರುಷ ಕಾರ್ಮಿಕರನ್ನು ಕಾಣಬಹುದು. ಆದರೆ ಮಹಿಳಾ ಕಾರ್ಮಿಕರ ಬದುಕು, ದುಡಿಮೆ ಹಾಗೂ ಗಳಿಕೆಗಳೆಲ್ಲವೂ ಕುಟುಂಬಕ್ಕಾಗಿಯೇ ಸೀಮಿತವಾಗಿರುವುದನ್ನು ಅತ್ಯಧಿಕ ಪ್ರಮಾಣದಲ್ಲಿ ನೋಡಬಹುದು ಕೆಲವು ಗಣಿಕಾರ್ಮಿಕರ ಕುಟುಂಬಗಳು ಪುರುಷಾಧಿಪತ್ಯದ ನೆಲೆಯಲ್ಲಿಯೇ ತಮ್ಮ ಕಾರ್ಯಚಟುವಟಿಕೆಗಳನ್ನು ರೂಪಿಸಿಕೊಳ್ಳುತ್ತಿರುವುದರಿಂದ ಪುರುಷ ಕಾರ್ಮಿಕನು ದುಡಿದ ಹಣದಲ್ಲಿ ಶೇಕಡ ೨೫ ರಷ್ಟು ಅವನ ವೈಯಕ್ತಿಕ ಆಶೋತ್ತರಗಳಿಗೆ ಬಳಕೆ ಮಾಡಲು ಸ್ವಾತಂತ್ರ್ಯನಾಗಿರುವುದು. ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

ಕಾರ್ಮಿಕ ಕುಟುಂಬದ ಉಳಿತಾಯ ಹಾಗೂ ಸಾಲದ ಪ್ರಮಾಣವು ಯಾವ ರೀತಿ ನಿರ್ಧಾರವಾಗುತ್ತದೆ ಎಂಬುದನ್ನು ಕೋಷ್ಟಕ ೩.೧೬ ರಿಂದ ತಿಳಿಯಬಹುದು.

**ಕೋಷ್ಟಕ ೩.೧೬ : ಕಾರ್ಮಿಕ ಉಳಿತಾಯ ಮತ್ತು ಸಾಲದ ವಿವರ**

| ಕ್ರ.ಸಂ | ವಿವರಗಳು | ಉಳಿತಾಯ | | | ಸಾಲ | | | ಒಟ್ಟು |
|---|---|---|---|---|---|---|---|---|
| ೧. | ಲಿಂಗವಾರು ಹಂಚಿಕೆ | ಗ | ಹೆ | ಒಟ್ಟು | ಗ | ಹೆ | ಒಟ್ಟು | -- |
| ೨. | ಕಾ. ಸಂಖ್ಯೆ | ೨೫ | ೯೦ | ೧೧೫ | ೭೫ | ೧೦ | ೮೫ | ೨೦೦ |
| ೩. | ಶೇಕಡವಾರು | ೧೨.೫ | ೪೫ | ೫೭.೫ | ೩೭.೫ | ೫ | ೪೨.೫ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈ ಮೇಲಿನ ೩.೧೬ ಕೋಷ್ಟಕವು ಗಣಿಕಾರ್ಮಿಕರು ವಾರ ಅಥವಾ ತಿಂಗಳಾಂತ್ಯ ತಾವು ದುಡಿದು ಗಳಿಸಿದ ವರಮಾನದಲ್ಲಿ ಪುರುಷರು ಹಾಗು ಮಹಿಳೆಯರು ಹೇಗೆ ಉಳಿತಾಯ ಮಾಡುತ್ತಾರೆ. ಹಾಗೂ ತಮ್ಮ ಕುಟುಂಬದ ನಿರ್ವಹಣೆಗೆ ಇಲ್ಲವೆ ದಿನನಿತ್ಯದ ಕಾರ್ಯ ಚಟುವಟಿಕೆಗೆ ತಮ್ಮ ವರಮಾನ ಸಾಲದಿದ್ದರೆ ಮತ್ತೊಬ್ಬರಿಂದ ಯಾರು ಹೇಗೆ ಸಾಲವನ್ನು ಪಡೆಯುತ್ತಾರೆ ಎಂಬುದನ್ನು ತೋರಿಸುತ್ತದೆ.

ಗಣಿ ಕಾರ್ಮಿಕರ ಕುಟುಂಬ ವ್ಯವಸ್ಥೆಯು ಪುರುಷಾಧಿಪತ್ಯದ ಮೌಲ್ಯಗಳನ್ನು ಮೈಗೂಡಿಸಿಕೊಂಡರೂ ಕುಟುಂಬದ ನಿರ್ವಹಣೆಗಾಗಿ ಪುರುಷ ಮತ್ತು ಮಹಿಳೆ ಸರಿಸಮವಾಗಿ ದುಡಿಮೆಯಲ್ಲಿ ಪಾಲ್ಗೊಳ್ಳುತ್ತಾರೆ. ಆದರೆ ಅವರ ಆದಾಯದಲ್ಲಿ ಉಳಿತಾಯ ಮಾಡುವ ಕ್ರಮದಲ್ಲಿ ವ್ಯತ್ಯಾಸವಿರುವುದನ್ನು ಈ ಮೇಲಿನ ಕೋಷ್ಟಕದಿಂದ ಸ್ಪಷ್ಟವಾಗುತ್ತದೆ. ಶೇಕಡ ೪೫ ರಷ್ಟು ಮಹಿಳೆಯರು ತಾವೂ ದುಡಿದ ಹಣದಲ್ಲಿ ಕುಟುಂಬದ ಪ್ರಗತಿಗಾಗಿ, ಇಲ್ಲವೇ ಸದಸ್ಯರ ಶ್ರೇಯೋಭಿವೃದ್ಧಿಗಾಗಿ ಖರ್ಚು ಮಾಡುತ್ತಾರೆ. ಕುಟುಂಬದ ಭದ್ರತೆ, ಮುನ್ನೆಚ್ಚರಿಕೆಗಾಗಿ ಹಾಗೂ ಕುಟುಂಬದ ಎಲ್ಲಾ ಜವಾಬ್ದಾರಿಗಳನ್ನು ನಿಭಾಯಿಸಲು ಮಹಿಳೆ ಉಳಿತಾಯ ಮಾಡುವ ಪ್ರವೃತ್ತಿಯನ್ನು ಹೊಂದಿದ್ದಾಳೆ. ಆದರೆ ಪುರುಷನಲ್ಲಿ ಕುಟುಂಬಕ್ಕಾಗಿ ಕಡಿಮೆ ಪ್ರಮಾಣದಲ್ಲಿ ಉಳಿತಾಯದ ಪ್ರವೃತ್ತಿ ಕಂಡುಬರುತ್ತದೆ. ಈಗಾಗಲೇ ಮಹಿಳೆ ತಾನು ದುಡಿದ ಸಂಪತ್ತಿನಲ್ಲಿ ಅತ್ಯಂತ ಕನಿಷ್ಠ ಪ್ರಮಾಣದಲ್ಲಿ ಖರ್ಚು ಮಾಡುವುದನ್ನು ಈಗಾಗಲೇ ಅರಿತಿದ್ದೇವೆ. ಅವಳು ತನ್ನ ಕುಟುಂಬದ ನಿರ್ವಹಣೆಗಾಗಿ ಅಥವಾ ವ್ಯಕ್ತಿಗತ ಬೇಡಿಕೆಗಳ ಈಡೇರಿಕೆಗೆ ಸಾಲ ಮಾಡುವ ಪ್ರಮಾಣವು ಸಹ ಕೇವಲ ಶೇ. ೫ ರಷ್ಟು ಮಾತ್ರ ಇದೆ. ಆದರೆ ಪುರುಷ ಮಾತ್ರ ತಾನುದುಡಿದು ಗಳಿಸಿದ ಸಂಪತ್ತಿನಲ್ಲಿ ಬಹಳಷ್ಟು ವೆಚ್ಚಮಾಡುವ ಅಧಿಕಾರವನ್ನು ಪಡೆದಿದ್ದಲ್ಲದೇ, ಒಂದು ವೇಳೆ ಅವನ ದಿನನಿತ್ಯದ ದುಡಿಮೆಯು ಅವನ ಆಶೋತ್ತರಗಳನ್ನು ಈಡೇರಿಸಲು ವಿಫಲವಾದರೆ ಅವನು ಬೇರೆ, ಬೇರೆ ಮೂಲಗಳಿಂದ ಶೇಕಡ ೩೭.೫ ರಷ್ಟು ಸಾಲವನ್ನು ಪಡೆದು ತನ್ನೆಲ್ಲಾ ಕೆಲಸಕಾರ್ಯಗಳನ್ನು ಈಡೇರಿಸಿಕೊಳ್ಳುತ್ತಾನೆ. ಇಂತಹ ಪ್ರವೃತ್ತಿ ಅವನಲ್ಲಿ ತನ್ನ ಕುಟುಂಬದ ಬಗ್ಗೆ ಪ್ರೀತಿ, ಮಮತೆ, ಅನುಕಂಪ ಹಾಗು ಅನ್ಯೋನ್ಯತೆಯ ಭಾವನೆಗಳು ಕಡಿಮೆಯೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಹೇಳಬಹುದು, ಇದಕ್ಕೆ ಗಣಿ ಕಾರ್ಮಿಕ ತನ್ನ ಕುಟುಂಬದ ಸರ್ವಾಂಗೀಣ ಪ್ರಗತಿಗಾಗಿ ಇಲ್ಲವೇ ಮುನ್ನೆಚ್ಚರಿಕೆಗಾಗಿ ತಾನು ಗಳಿಸಿದ ಸಂಪತ್ತಿನಲ್ಲಿ ಉಳಿತಾಯ ಮಾಡುವ ಪ್ರಮಾಣ ಕೇವಲ ಶೇಕಡ ೧೨.೫ ರಷ್ಟು ಇರುವುದನ್ನು ಗಮನಿಸಿದಾಗ, ಪುರುಷ ಕಾರ್ಮಿಕನು ತನ್ನ ಕುಟುಂಬಕ್ಕಾಗಿ ನಿರ್ವಹಿಸುವ ಅಧಿಪತ್ಯ, ಕರ್ತವ್ಯ ಮತ್ತು ಜವಾಬ್ದಾರಿಗಳು ಸ್ಪಷ್ಟಗೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ಭಾರತೀಯ ಮಹಿಳೆಗೆ ಇರುವ ಅಧಿಕಾರ, ಹಕ್ಕು, ಜವಾಬ್ದಾರಿ ಹಾಗೂ ಪ್ರಾತಿನಿಧ್ಯತೆಗಳಿಗೂ ಜಿಲ್ಲೆಯ ಗಣಿಗಾರಿಕೆಯಲ್ಲಿರುವ ಮಹಿಳೆಯ ಸ್ಥಾನಮಾನ ಅಥವಾ ಕಾರ್ಯ ಚಟುವಟಿಕೆಗಳಿಗೂ ಪರಸ್ಪರ ಹೋಲಿಕೆ ಮಾಡಿದಾಗ, ನಮಗೆ ಭಾರತೀಯ ಸಮಾಜದ ಎಲ್ಲಾ ಜನಸಮುದಾಯಗಳಲ್ಲಿರುವಂತೆ ಬುಡಕಟ್ಟು ಮಹಿಳೆಯು ಈ ಸಹ ಕುಟುಂಬದಲ್ಲಿ ಅಧಿಕ ಜವಾಬ್ದಾರಿ ಹಾಗೂ ಕರ್ತವ್ಯ ಪಾಲನೆ ಒಂದೇ ರೀತಿಯಾಗಿ ಕಂಡುಬರುತ್ತವೆ.

### ೩.೧೧. ಸಾಲದ ಸೌಕರ್ಯ

ಆರ್ಥಿಕ ವಿಶ್ಲೇಷಣಾಕಾರರ ಪ್ರಕಾರ ಯಾವುದೇ ಪ್ರದೇಶದ ಸರ್ವತೋಮುಖ ಅಭಿವೃದ್ಧಿಗೆ ಅಥವಾ ವ್ಯಕ್ತಿಯ ಸರ್ವಾಂಗೀಣಾ ಬೆಳವಣಿಗೆಗೆ ಆಯಾ ಪ್ರದೇಶದಲ್ಲಿ ಲಭ್ಯವಿರುವ ಬ್ಯಾಂಕ್

ವ್ಯವಸ್ಥೆ ಮತ್ತು ಅವುಗಳು ಸಮಾಜದೊಂದಿಗೆ ಹೊಂದಿರುವ ಸಂಬಂಧ ಮತ್ತು ಜನರಿಗೆ ನೀಡಿರುವ ಸಾಲದ ಪ್ರಮಾಣವನ್ನು ಅವಲಂಭಿಸಿದೆ ಎಂಬ ವ್ಯಾಖ್ಯಾನಕ್ಕೆ ಸಾರ್ವತ್ರಿಕ ಮನ್ನಣೆ ಲಭಿಸಿದೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿರುವ ಬ್ಯಾಂಕುಗಳ ಸಂಖ್ಯೆ ಹಾಗೂ ಸಾಲದ ಪ್ರಮಾಣವನ್ನು ತಿಳಿಯುವುದು ಅವಶ್ಯಕವಾಗಿದೆ. ಜಿಲ್ಲೆಯಲ್ಲಿರುವ ಉತ್ಕೃಷ್ಟ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರಿಗೆ ದೇಶೀಯ ಹಾಗು ಅಂತರಾಷ್ಟ್ರೀಯ ಮಟ್ಟದಲ್ಲಿ ಬೇಡಿಕೆ ಉಂಟಾದ ನಂತರ ಜಿಲ್ಲೆಯಾದ್ಯಂತ ವ್ಯಾಪಾರ ವಹಿವಾಟುಗಳು ಭರದಿಂದ ನಡೆದಿವೆ. ಇವುಗಳಿಗೆ ಪ್ರೋತ್ಸಾಹಕವಾಗಿ ಅಥವಾ ಪೂರಕವಾಗಿ ಜಿಲ್ಲೆಯಾದ್ಯಂತ ಅನೇಕ ಬ್ಯಾಂಕುಗಳು ಸಹ ಬೆಳೆದು ಬಂದಿವೆ. ಅವುಗಳ ಪ್ರಮಾಣವನ್ನು ಕೆಳಗಿನ ೩.೧೭ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೩.೧೭ : ಜಿಲ್ಲೆಯ ಬ್ಯಾಂಕುಗಳ ಚಿತ್ರಣ**

| ಕ್ರ. ಸಂ. | ತಾಲ್ಲೂಕಿನ ಹೆಸರು | ವಾಣಿಜ್ಯ ಬ್ಯಾಂಕು | ಗ್ರಾಮೀಣ ಬ್ಯಾಂಕು | ಇತರೆ ಬ್ಯಾಂಕು | ನಗರ ಬ್ಯಾಂಕು | ಪ್ರಾಥಮಿಕ ಭೂಅಭಿವೃದ್ಧಿ ಬ್ಯಾಂಕು | ಒಟ್ಟು |
|---|---|---|---|---|---|---|---|
| ೧. | ಬಳ್ಳಾರಿ | ೩೩ | ೨೦ | ೨೪ | ೦೧ | ೦೧ | ೭೯ |
| ೨. | ಹೊಸಪೇಟೆ | ೨೪ | ೦೮ | ೨೩ | ೦೧ | ೦೧ | ೫೭ |
| ೩. | ಶಿರಗುಪ್ಪ | ೦೮ | ೦೮ | ೨೮ | -- | -- | ೪೩ |
| ೪. | ಕೂಡ್ಲಿಗಿ | ೦೯ | ೦೭ | ೨೧ | -- | ೦೧ | ೩೮ |
| ೫. | ಹಡಗಲಿ | ೦೫ | ೦೯ | ೧೯ | ೦೧ | ೦೧ | ೩೫ |
| ೬. | ಹಗರಿಬೊಮ್ಮನಹಳ್ಳಿ | ೦೫ | ೦೭ | ೧೬ | -- | ೦೧ | ೨೯ |
| ೭. | ಸಂಡೂರು | ೦೯ | ೦೫ | ೧೩ | ೦೧ | -- | ೨೮ |

ಆಧಾರ : ಬಳ್ಳಾರಿ ಜಿಲ್ಲೆಯ ಅಂಕಿ-ಅಂಶಗಳ ನೋಟ, ೨೦೦೩-೦೪

೩.೧೭ರ ಕೋಷ್ಟಕವು ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಅಸ್ತಿತ್ವದಲ್ಲಿರುವ ಬ್ಯಾಂಕುಗಳ ಒಟ್ಟು ಪ್ರಮಾಣವನ್ನು ತೋರಿಸುತ್ತದೆ. ಬಳ್ಳಾರಿ ತಾಲ್ಲೂಕು ಜಿಲ್ಲಾ ಕೇಂದ್ರವಾಗಿರುವುದರಿಂದ ವಾಣಿಜ್ಯ, ವ್ಯಾಪಾರ ಮತ್ತು ವ್ಯವಹಾರಗಳೆಲ್ಲವೂ ಜಿಲ್ಲಾ ಕೇಂದ್ರಗಳಲ್ಲಿ ನೆಲೆಸಿವೆ. ಹೀಗಾಗಿ ಅನೇಕ ಶಾಖೆಗಳು ಈ ಭಾಗದಲ್ಲಿ ೭೯ ರಷ್ಟಿವೆ. ಹೊಸಪೇಟೆ ತಾಲ್ಲೂಕನ್ನು ಜಿಲ್ಲೆಯ ಮತ್ತೊಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿ ಪರಿಗಣಿಸಲ್ಪಡುವುದರಿಂದ ಈ ಪ್ರದೇಶದಲ್ಲಿ ೫೭ ಬ್ಯಾಂಕುಗಳಿವೆ. ಆದರೆ ಜಿಲ್ಲೆಯ ಗಣಗಾರಿಕೆಯಲ್ಲಿ ಶೇಕಡ ೭೦ ರಷ್ಟು ಸಂಪನ್ಮೂಲವನ್ನು ಹೊಂದಿರುವ ಸಂಡೂರು ತಾಲ್ಲೂಕು ಮಾತ್ರ ಇನ್ನುಳಿದ ಎಲ್ಲಾ ತಾಲ್ಲೂಕುಗಳಿಗಿಂತ ಕೇವಲ ೨೮ ಸಂಖ್ಯೆಯ ಬ್ಯಾಂಕುಗಳನ್ನು

ಹೊಂದಿದೆ. ಹಾಗೆಯೇ ಜಿಲ್ಲೆಯಾದ್ಯಂತ ನೆಲೆಸಿರುವ ಬ್ಯಾಂಕುಗಳು ಗಣಿಯಲ್ಲಿರುವ ಕಾರ್ಮಿಕರಿಗೆ ಯಾವ ಪ್ರಮಾಣದಲ್ಲಿ ಸಾಲದ ಸೌಕರ್ಯವನ್ನು ಒದಗಿಸಿವೆ ಎಂಬುದನ್ನು ನೋಡಿದಾಗ ತಿಳಿದುಬರುತ್ತದೆ.

**ಕೋಷ್ಟಕ ೩.೧೮ : ಕಾರ್ಮಿಕರ ಸಾಲ ಸೌಲಭ್ಯದ ವಿವರ**

| ಕ್ರ.ಸಂ. | ವಿವರಗಳು | ಬ್ಯಾಂಕುನಿಂದ ಸಾಲ | ಬ್ಯಾಂಕೇತರ ಸಾಲ | ಸಾಲ ಪಡೆಯದವರು | ಒಟ್ಟು |
|---|---|---|---|---|---|
| ೧. | ಕಾ. ಸಂಖ್ಯೆ | ೨೪ | ೧೧೬ | ೬೦ | ೨೦೦ |
| ೨. | ಶೇಕಡವಾರು | ೧೨% | ೫೮% | ೩೦% | ೧೦೦% |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈ ಮೇಲಿನ ೩.೧೮ರ ಕೋಷ್ಟಕವು ಜಿಲ್ಲೆಯಲ್ಲಿರುವ ರಾಷ್ಟ್ರೀಕೃತ ಬ್ಯಾಂಕುಗಳು ವಾಣಿಜ್ಯ ಬ್ಯಾಂಕ್ ಹಾಗು ಬ್ಯಾಂಕೇತರ ಸಂಸ್ಥೆಗಳಿಂದ ಗಣಿಕಾರ್ಮಿಕರು ಪಡೆದುಕೊಂಡ ಸಾಲದ ವಿವರಗಳನ್ನು ತಿಳಿಸುತ್ತದೆ. ಬಳ್ಳಾರಿ ಜಿಲ್ಲೆಯಾದ್ಯಂತ ಬೇರೆ ಬೇರೆ ಎಲ್ಲಾ ಬ್ಯಾಂಕುಗಳು ಸೇರಿ ಒಟ್ಟು ೩೯೮ರಷ್ಟಿದ್ದರೂ ಅವುಗಳಲ್ಲಿ ಕೇವಲ ಶೇಕಡ ೧೨ ರಷ್ಟು ಮಾತ್ರ ಗಣಿಕಾರ್ಮಿಕರು ಬ್ಯಾಂಕುಗಳಿಂದ ಸಾಲವನ್ನು ಪಡೆದುಕೊಂಡಿರುವುದಾಗಿ ತಿಳಿದುಬರುತ್ತದೆ. ಕ್ಷೇತ್ರಕಾರ್ಯದಲ್ಲಿ ಗಣಿಕಾರ್ಮಿಕರೊಂದಿಗೆ ಬ್ಯಾಂಕೋದ್ಯಮಗಳ ವಹಿವಾಟುಗಳನ್ನು ಚರ್ಚಿಸಿದಾಗ ತುಂಬಾ ನಿರಾಶದಾಯಕವಾದ ಫಲಿತಾಂಶವು ಕಂಡುಬರುತ್ತದೆ. ಹಾಗೆಯೇ ಗಣಿಕಾರ್ಮಿಕರು ಅದೇ ವೇಳೆಗೆ ಬ್ಯಾಂಕೇತರ ಸಂಸ್ಥೆಗಳಿಂದ, ಹಣಕಾಸಿನ ಲೇವಾದೇವಿಗಾರರು ವ್ಯಾಪಾರಸ್ಥರು, ಮಧ್ಯಸ್ಥರಗಾರರು, ಸೂಪರ್‌ವೈಜರ್ ಇತ್ಯಾದಿ ಮೂಲಗಳಿಂದ ಹಾಗೂ ಖಾಸಗಿ ವ್ಯಕ್ತಿಗಳಿಂದ ತಮ್ಮ ದೈನಂದಿನ ವ್ಯವಹಾರ ಹಾಗೂ ಜೀವನದ ನಿರ್ವಹಣೆಗಾಗಿ ಶೇಕಡ ೫೮ ರಷ್ಟು ಪ್ರಮಾಣದ ಕಾರ್ಮಿಕರು ಹೆಚ್ಚಿನ ಬಡ್ಡಿ ದರದಲ್ಲಿ ಸಾಲವನ್ನು ಪಡೆದುಕೊಂಡಿದ್ದಾರೆ. ಹಾಗೆಯೇ ಶೇಕಡ ೩೦ರಷ್ಟು ಕಾರ್ಮಿಕರು ಯಾವುದೇ ರೀತಿಯ ಹಣಕಾಸಿನ ವ್ಯವಹಾರದಲ್ಲಿ ತಲೆಹಾಕಿರುವುದಿಲ್ಲ. ಇದಕ್ಕೆ ಕಾರಣ ಈ ಭಾಗದಲ್ಲಿ ಕೆಲವು ಮಹಿಳಾ ಕಾರ್ಮಿಕರು ಹಾಗೂ ಬಾಲಕಾರ್ಮಿಕರು ಸೇರಿದ್ದಾರೆ. ಸಾಂಸ್ಥಿಕ ಬ್ಯಾಂಕುಗಳಿಂದ ಕಾರ್ಮಿಕರಿಗೆ ಸಾಲ ದೊರೆಯದಿರಲು ಕಾರ್ಮಿಕರಲ್ಲಿರುವ ವಲಸೆಯ ಪ್ರವೃತ್ತಿ, ಆಡಳಿತಾತ್ಮಕ ನೀತಿ-ನಿಯಮಗಳು, ಸ್ಥಿರವಾದ ಆಸ್ತಿಗಳ ಆಧಾರದ ಸಮಸ್ಯೆ ಇತ್ಯಾದಿ ಅಂಶಗಳಿಂದ ಕಾರ್ಮಿಕರಿಗೆ ಸಾಂಸ್ಥಿಕ ಬ್ಯಾಂಕುಗಳಿಂದ ನಿರೀಕ್ಷಿತ ಪ್ರಮಾಣದಲ್ಲಿ ಸಾಲವು ದೊರೆತಿಲ್ಲ. ಆದರೆ ಬ್ಯಾಂಕೇತರ ಸಂಸ್ಥೆಗಳ ಚಟುವಟಿಕೆಯಲ್ಲಿ ಸಾಂಸ್ಥಿಕ ಬ್ಯಾಂಕುಗಳು ವಿಧಿಸುವ ಯಾವುದೆ ನಿರ್ಭಂಧನೆಗಳಿಲ್ಲದೆ ಕಾರ್ಮಿಕರಿಗೆ ಅಧಿಕ ಬಡ್ಡಿದರದಲ್ಲಿ ಅತ್ಯಂತ ಸರಳವಾಗಿ, ಸುಲಭವಾಗಿ ಹಣವು ಸಿಗುವುದರಿಂದ ಸಾಂಸ್ಥಿಕ ಸಂಸ್ಥೆಗಳಿಗಿಂತಲೂ ಹೆಚ್ಚಾಗಿ ಗಣಿ ಕಾರ್ಮಿಕರಿಗೆ ಬ್ಯಾಂಕೇತರ ಹಣಕಾಸಿನ ಮೂಲಗಳಿಂದ ಅತ್ಯಧಿಕ ಪ್ರಮಾಣದಲ್ಲಿ ಸಾಲವನ್ನು ಪಡೆದಿದ್ದಾರೆ.

ಇದಕ್ಕೆ ಗಣಿ ಕಾರ್ಮಿಕರಿಗೆ ಸಾಂಸ್ಥಿಕ ಸಂಸ್ಥೆಗಳಿಂದ ದೊರೆಯುವ ಸಾಲವು ಅಪರೂಪವಾಗಿರುತ್ತದೆ. ಆದರೆ ಸಾಂಸ್ಥಿಕೇತರ ಸಂಸ್ಥೆಗಳು ವಿಧಿಸುವ ಬಡ್ಡಿದರ ಹೆಚ್ಚಾಗಿದ್ದು ಅವುಗಳ ವ್ಯವಹಾರದಲ್ಲಿ ಮೋಸ, ವಂಚನೆಗಳ ಹೆಚ್ಚಾಗಿವೆ. ಇಂತಹ ಮೂಲಗಳಿಂದ ಸಾಲವನ್ನು ಪಡೆದ ಕಾರ್ಮಿಕರು ಋಣಮುಕ್ತರಾಗದೇ, ತಮ್ಮ ಮುಂದಿನ ಪೀಳಿಗೆಗೆ ಸಾಲವನ್ನು ವರ್ಗಾವಣೆ ಮಾಡುವ ಮೂಲಕ ತಮ್ಮ ಜೀವನವನ್ನು ಕೊನೆಗಾಣಿಸಬೇಕಾಗಿದೆ. ಕಾರ್ಮಿಕರ ಶ್ರೇಯೋಭಿವೃದ್ಧಿಗಾಗಿ ಚರ್ಚಿಸುವುದಾದರೆ ಸಾಂಸ್ಥಿಕ ಸಂಸ್ಥೆಗಳು ತಮ್ಮ ಸಾಲ ನೀಡಿಕೆಯಲ್ಲಿ ಕೆಲವು ಬದಲಾವಣೆಗಳು ಅಳವಡಿಸಿಕೊಳ್ಳುವುದು ಅತ್ಯವಶ್ಯಕ. ಈ ಮೇಲಿನ ಎಲ್ಲಾ ಮೂಲಗಳಿಂದ ಗಣಿ ಕಾರ್ಮಿಕನು ತಾನು ಪಡೆದ ಸಾಲವನ್ನು ಯಾವ ಯಾವ ಉದ್ದೇಶಕ್ಕೆ ವೆಚ್ಚ ಮಾಡುತ್ತಾನೆಂಬುದನ್ನು ಕೋಷ್ಟಕ ೩.೧೯ರಿಂದ ತಿಳಿಯಬಹುದು.

**ಕೋಷ್ಟಕ ೩.೧೯ : ಕಾರ್ಮಿಕರ ಸಾಲದ ಬಳಕೆ**

| ಕ್ರ. ಸಂ. | ವಿವರಗಳು | ಮದುವೆ ಕಾರ್ಯ | ಹಬ್ಬ ಹರಿದಿನ | ಹಳೆ ಸಾಲ | ಮನೆ ಕಟ್ಟಲು | ಅನಾರೋಗ್ಯ | ಹುಟ್ಟು ಸಾವು | ಇತರೆ | ಗೊತ್ತಿಲ್ಲ | ಒಟ್ಟು |
|---|---|---|---|---|---|---|---|---|---|---|
| ೧. | ಕಾ. ಸಂಖ್ಯೆ | ೬೮ | ೨೦ | ೧೮ | ೨೨ | ೨೫ | ೧೪ | ೧೦ | ೨೩ | ೨೦೦ |
| ೨. | ಶೇಕಡವಾರು | ೩೪% | ೧೦% | ೯% | ೧೨% | ೧೨.೫% | ೭% | ೫% | ೧೧.೫% | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಗಣಿಕಾರ್ಮಿಕರು ತಾವು ಪಡೆದ ಸಾಂಸ್ಥಿಕ ಹಾಗೂ ಸಾಂಸ್ಥಿಕೇತರ ಹಣಕಾಸಿನ ಮೂಲವನ್ನು ಹೇಗೆ ಸದುಪಯೋಗಪಡಿಸಿಕೊಳ್ಳುತ್ತಾರೆಂಬುದನ್ನು ತಿಳಿಯಬಹುದು.

ಗಣಿ ಕಾರ್ಮಿಕರು ಹೆಚ್ಚಾಗಿ ಅಶಾಶ್ವತ ಹಾಗೂ ಕಾಂಟ್ರಾಕ್ಟ್‌ರ ಹತ್ತಿರ ಗುತ್ತಿಗೆ ಆಧಾರದ ಮೇಲೆ ಕೆಲಸ ಮಾಡುವವರಾಗಿದ್ದು, ಅವರು ಪಡೆಯುವ ಕೂಲಿಯು ತುಂಬಾ ಕಡಿಮೆ ಹಾಗೂ ಅನಿರ್ಧಿಷ್ಟವಾಗಿದೆ. ಕಾರ್ಮಿಕರು ತಮ್ಮ ಅನಿರ್ದಿಷ್ಟ ದುಡಿಮೆ ಹಾಗೂ ಕಡಿಮೆ ಆದಾಯದಲ್ಲಿ ಕುಟುಂಬದ ಹಾಗೂ ಮನೆಯ ಕೆಲಸ ಕಾರ್ಯಗಳೆಲ್ಲವು ನಿರ್ವಹಿಸಲು ಅಸಾಧ್ಯವಾಗಿದೆ. ಶೇಕಡ ೭೦ ರಷ್ಟು ಕಾರ್ಮಿಕರು ವಿವಿಧ ಹಣಕಾಸಿನ ಮೂಲಗಳಿಂದ ಸಾಲವನ್ನು ಪಡೆದು, ತಮ್ಮ ಕುಟುಂಬದ ತೊಂದರೆಗಳನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಅದರಲ್ಲಿ ಶೇಕಡ ೩೪ ರಷ್ಟು ಕಾರ್ಮಿಕರು ಅನಕ್ಷರಸ್ಥರಾಗಿರುವುದರಿಂದ ಹೆಚ್ಚು ಮಕ್ಕಳನ್ನು ಹೊಂದಿದ್ದಾರೆ. ಹೀಗಾಗಿ ಅವರೆಲ್ಲಾ ತಮ್ಮ ಮಕ್ಕಳ ಲಾಲನೆ ಪಾಲನೆಯ ಜೊತೆಗೆ ಅವರವರ ವಿವಾಹ ಕಾರ್ಯವನ್ನು ಅತ್ಯಂತ ಜವಾಬ್ದಾರಿಯಿಂದ ಹಾಗೂ ಕಡ್ಡಾಯವಾಗಿ ಮಾಡಲೇಬೇಕಾಗಿದೆ. ಶೇಕಡ ೩೪ರಷ್ಟು ಗಣಿ ಕಾರ್ಮಿಕರು ತಮ್ಮ ಮಕ್ಕಳ ಮದುವೆ, ಮುಂಜಿ ಕಾರ್ಯಗಳಿಗೆ ಸಾಂಸ್ಥಿಕ ಅಥವಾ ಅಸಾಂಸ್ಥಿಕ ಮೂಲದಿಂದ ಪಡೆದ ಹಣವನ್ನು ವೆಚ್ಚ ಮಾಡಿದ್ದಾರೆ. ಶೇಕಡ ೯ ರಷ್ಟು ಕಾರ್ಮಿಕರು ತಮ್ಮ ತಂದೆ ತಾಯಿ, ಮಾಡಿದ ಹಳೆಯ

ಸಾಲವನ್ನು ತೀರಿಸಲು ಖರ್ಚುಮಾಡುತ್ತಾರೆ. ಶೇಕಡ ೧೨.೫ ರಷ್ಟು ಕಾರ್ಮಿಕರು ದಿನನಿತ್ಯ ಅನೇಕ ಮಾಲಿನ್ಯಗಳ ನಡುವೆ ಕೆಲಸ ಮಾಡುವುದರಿಂದ ಹತ್ತಾರು ಕಾಯಿಲೆಗಳಿಗೆ ಒಳಗಾಗುವುದು ಸಾಮಾನ್ಯವಾಗಿದೆ. ಅವುಗಳಿಂದ ಮುಕ್ತಿಹೊಂದಲು ತಾವು ಪಡೆದ ಸಾಲವನ್ನು ಖರ್ಚುಮಾಡುತ್ತಾರೆ. ಶೇಕಡ ೦೫ ರಷ್ಟು ಜನರು ಕುಡಿತ ಮಧ್ಯಪಾನ ಧೂಮಪಾನ, ಇಸ್ಪೀಟ್, ಓಸಿ, ಇತ್ಯಾದಿಗಳಿಗಾಗಿ ಸಾಲದ ಹಣವನ್ನು ಖರ್ಚುಮಾಡುತ್ತಾರೆ. ಕೆಲವು ಹತ್ತಾರು ಕುಟುಂಬಗಳು ಆಯಾ ಭಾಗದಲ್ಲಿಯೇ ವರ್ಷಗಳಿಂದ ಹತ್ತಾರು ಸಮೀಪದ ಊರುಗಳಲ್ಲಿ ನೆಲೆನಿಂತಿರುವುದರಿಂದ ತಮ್ಮ ವಸತಿಗಳ ನಿರ್ಮಾಣ ಅಥವಾ ರಿಪೇರಿಗಾಗಿ ಶೇಕಡ ೧೨ ರಷ್ಟು ಖರ್ಚು ಮಾಡುತ್ತಾರೆ. ಇನ್ನೂ ಕೆಲವು ಕಾರ್ಮಿಕರ ಸಾಲವನ್ನು ಮಾಡಿರದ ಅಥವಾ ಸಾಲ ಸಿಗದಿರುವ ಇಲ್ಲವೆ ಸಾಲ ಮಾಡಲು ಅರ್ಹತೆ ಹೊಂದಿರದ ಶೇಕಡ ೩೦ರಷ್ಟು ಹೆಂಗಸರು ಹಾಗೂ ಬಾಲ ಕಾರ್ಮಿಕರು ಸಾಲದ ಬಗ್ಗೆ ಗೊತ್ತಿಲ್ಲವೆಂಬ ಉತ್ತರವನ್ನು ನೀಡಿದ್ದಾರೆ. ಆದರೆ ಪ್ರತಿಯೊಬ್ಬ ಕಾರ್ಮಿಕನು ತಮ್ಮ ಮನೆಯ ಬಡತನ ಹಾಗೂ ಹಿರಿಯರು ಮಾಡಿರುವ ಸಾಲ ಸ್ವರೂಪದ ಬಗ್ಗೆ ಸವಿಸ್ತಾರವಾಗಿ ತಿಳಿದವರಾಗಿದ್ದಾರೆ ಕಡಿಮೆ ಕೂಲಿ, ಕಡಿಮೆ ಆದಾಯ, ದೊಡ್ಡ ಕುಟುಂಬ, ಅನೇಕ ಸಾಮಾಜಿಕ ವಿಧಿ-ವಿಧಾನಗಳನ್ನು ಪೂರೈಸಲು ಹೆಚ್ಚು ಹಣದ ಅವಶ್ಯಕತೆ ಇರುವದರಿಂದ, ಅವರೆಲ್ಲರೂ ಸಾಂಸ್ಥಿಕ ಮೂಲಗಳಿಗಿಂತಲೂ ಸಾಂಸ್ಥಿಕೇತರ ಮೂಲಗಳಿಂದ ಸಾಲವನ್ನು ಪಡೆದು ವೆಚ್ಚಮಾಡುತ್ತಾರೆ. ಈ ಹಿನ್ನೆಲೆಯಲ್ಲಿ ಕಾರ್ಮಿಕರ ಆರ್ಥಿಕ ಸಂಕಟಕ್ಕೆ ನೆರವಾಗುವ, ಇಲ್ಲವೆ ಪೂರಕ ಉದ್ಯೋಗಗಳಿಗೆ ಸಹಕರಿಸಲು ಸಾಂಸ್ಥಿಕ ಮೂಲಗಳಿಂದಾಗಲೀ ಅಥವಾ ಗಣಿ ಸಂಸ್ಥೆಗಳಿಂದಾಗಲೀ ಆರ್ಥಿಕ ಸಹಾಯವಿಲ್ಲದಿರುವುದು ಗಣಿ ಕಾರ್ಮಿಕರ ಆರ್ಥಿಕ ಪರಿಸ್ಥಿತಿ ಹದಗೆಡಲು ಪ್ರಬಲ ಕಾರಣವಾಗಿದೆ.

### ೩.೧೨. ರಾಜಕೀಯ ಪ್ರಜ್ಞೆ ಮತ್ತು ಪಾಲ್ಗೊಳ್ಳುವಿಕೆ

ವಿಶ್ವದಾದ್ಯಂತ ಪ್ರತಿಯೊಂದು ಸಮಾಜ, ಸಮುದಾಯ, ಸಂಘ, ಸಂಸ್ಥೆಗಳೆಲ್ಲವೂ ರಾಜಕೀಯವಾಗಿ ಅಧಿಕಾರವನ್ನು ಪಡೆಯುವ ಇಲ್ಲವೇ ತಮ್ಮ ತಮ್ಮಲ್ಲಿಯ ರಾಜಕೀಯ ಪ್ರಜ್ಞೆಯನ್ನು ಘಟ್ಟಿಗೊಳಿಸುವ ಕಾರ್ಯಯೋಜನೆಗೆ ಸಾರ್ವತ್ರಿಕತೆ ದೊರಕುತ್ತಿದೆ. ಇತ್ತೀಚೆಗೆ ಸಮಗ್ರವಾಗಿ ರಾಜಕೀಯದಲ್ಲಿ ಪಾಲ್ಗೊಳ್ಳುವ ಮತ್ತು ರಾಜಕೀಯ ಅಧಿಕಾರಗಳನ್ನು ಪಡೆಯುವ ಕಾರ್ಯತಂತ್ರಗಳಿಗೆ ಜನಮನ್ನಣೆ ಹಾಗೂ ಪ್ರೋತ್ಸಾಹ ವ್ಯಕ್ತವಾಗುತ್ತಿದೆ. ಇದಕ್ಕಾಗಿ ವಿದ್ವಾಂಸರಲ್ಲಿ, ರಾಜಕೀಯ ಪಂಡಿತರಲ್ಲಿ, ಸಮಾಜ ಚಿಂತಕರಲ್ಲಿ ಹಾಗೂ ಮಠಮಾನ್ಯಗಳಲ್ಲಿ ರಾಜಕೀಯ ಅಧಿಕಾರವನ್ನು ಮಹತ್ವಪೂರ್ಣ ಅಂಗವಾಗಿ ಪರಿಭಾವಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ "೧೯೯೩ರಲ್ಲಿ ಜಾರಿಗೆ ಬಂದ, ಕರ್ನಾಟಕ ರಾಜ್ಯ ಪಂಚಾಯತ್ ರಾಜ್ ಕಾಯ್ದೆಯ ಅನ್ವಯ, ಭಾರತ ಸಂವಿಧಾನದ ವಿಧಿ ೭೩ ಮತ್ತು ೭೪ನೇ ನಿಯಮದ ಆಧಾರದ ಮೇಲೆ ತಿದ್ದುಪಡಿಗೊಳಪಟ್ಟಿತು".[೮] ಕರ್ನಾಟಕ ರಾಜ್ಯದಲ್ಲಿ ಅಸ್ಥಿತ್ವಕ್ಕೆ ಬಂದ ಹೊಸ ಪಂಚಾಯತ್

ರಾಜ್ಯ ಕಾಯ್ದೆಯ ಮೀಸಲಾತಿ ಅನ್ವಯ, ಸಮಾಜದಲ್ಲಿರುವ ಬೆರಳೆಣಿಕೆಯ ಅನೇಕ ಅಲ್ಪಸಂಖ್ಯಾತ ಜಾತಿ ಹಾಗೂ ಸಮುದಾಯಗಳು ಪ್ರಸ್ತುತ ಕಾಯ್ದೆ ಕಾನೂನಿನ್ವಯ ಅಧಿಕಾರ ಪಡೆದುಕೊಂಡು ಸಮಾಜದ ಮುಖ್ಯವಾಹಿನಿಗೆ ಸೇರಿದ ಇತಿಹಾಸವು ನಮ್ಮ ಕಣ್ಣ ಮುಂದೆ ಇದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಜಾತಿ, ಸಮುದಾಯಗಳು ರಾಜಕೀಯ ಅಧಿಕಾರವನ್ನು ಪಡೆಯುವ ಮೂಲಕ, ಸಾಮಾಜಿಕ ಮತ್ತು ಆರ್ಥಿಕವಾಗಿ ಬಲಿಷ್ಠಗೊಂಡಿವೆ. ಜೊತೆಗೆ ತಮ್ಮ ಸುತ್ತಲಿನ ವ್ಯವಸ್ಥೆಯಲ್ಲಿ ಸಮಾನ ಹಕ್ಕು ಹಾಗೂ ಅವಕಾಶಗಳನ್ನು ಪಡೆಯಲು ಸಾಧ್ಯವಾಗಿದೆ. ಆದಕಾರಣ ಜಿಲ್ಲೆಯ ಗಣಿಕಾರ್ಮಿಕರಲ್ಲಿ ರಾಜಕೀಯ ಪ್ರಜ್ಞೆ ಮತ್ತು ರಾಜಕೀಯ ಪಾಲ್ಗೊಳ್ಳುವಿಕೆಯ ಅಧಿಕಾರ, ಯಾವ ಸ್ವರೂಪದಲ್ಲಿದೆ ಎಂಬುದನ್ನು ಪತ್ತೆ ಹಚ್ಚುವುದು ಅವಶ್ಯಕ. ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯದಲ್ಲಿ ದೊರೆತ ಉತ್ತರಗಳನ್ನು ತಿಳಿಯಬಹುದು.

**ಕೋಷ್ಟಕ ೩.೨೦ : ಕಾರ್ಮಿಕರ ಮತಾಧಿಕಾರ ಹಾಗೂ ಮತ ಚಲಾವಣೆ**

| ಕ್ರ. ಸಂ. | ವಿವರಗಳು | ಮತಾಧಿಕಾರದ ಹಕ್ಕು | | | ಮತ ಚಲಾವಣೆಯ ವಿವರ | | | | |
|---|---|---|---|---|---|---|---|---|---|
| | | ಇದೆ | ಇಲ್ಲ | ಒಟ್ಟು | ಎಂ.ಪಿ. | ಎಂ.ಎಲ್.ಎ. | ಜಿ.ಪಂ. | ತಾ.ಪಂ. | ಗ್ರಾ.ಪಂ. |
| ೧. | ಕಾ.ಸಂಖ್ಯೆ | ೧೨೦ | ೮೦ | ೨೦೦ | ಹೌದು | ಹೌದು | ಹೌದು | ಇಲ್ಲ | ಇಲ್ಲ |
| ೨. | ಶೇಕಡವಾರು | ೬೦ | ೪೦ | ೧೦೦ | | | | | |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈ ಮೇಲಿನ ೩.೨೦ರ ಕೋಷ್ಟಕವು ಜಿಲ್ಲೆಯಲ್ಲಿರುವ ಗಣಿಕಾರ್ಮಿಕರ ಮತಾಧಿಕಾರದ ಹಕ್ಕನ್ನು ತೋರಿಸುತ್ತದೆ. ಗಣಿ ಕಾರ್ಮಿಕರು ವಲಸೆ ಪ್ರವೃತ್ತಿಯುಳ್ಳವರಾಗಿದ್ದು, ಇವರು ಚುನಾವಣೆಯ ಮಹತ್ವದ ಬಗ್ಗೆಯಾಗಲೀ ಅಥವಾ ಅಧಿಕಾರದ ಬಗ್ಗೆಯಾಗಲೀ ಪ್ರಜ್ಞಾವಂತರಾಗಿಲ್ಲ. ಹೀಗಾಗಿ ಜಿಲ್ಲೆಯಲ್ಲಿ ಸತತವಾಗಿ ಹತ್ತು, ಹನ್ನೆರಡು ವರ್ಷಗಳಿಂದ ವಾಸವಾಗಿದ್ದರೂ ಪ್ರತಿಯೊಬ್ಬರಿಗೂ ಚುನಾವಣೆಯಲ್ಲಿ ಮತದಾನ ಮಾಡುವ ಹಕ್ಕು ದೊರೆತಿಲ್ಲ. ಆದರೆ ಮತದಾನದ ಹಕ್ಕನ್ನು ಕೇವಲ ೬೦ರಷ್ಟು ಮಾತ್ರ ಪಡೆದಿದ್ದಾರೆ. ಉಳಿದ ಶೇಕಡ ೪೦ರಷ್ಟು ಕಾರ್ಮಿಕರು ವ್ಯವಸ್ಥಿತ ರೀತಿಯಲ್ಲಿ ಮತದಾನದ ಹಕ್ಕನ್ನು ಪಡೆಯಲು ಸಾಧ್ಯವಾಗಿಲ್ಲ.

ಇದರಿಂದಾಗಿ ಸ್ಥಳೀಯ ಸರ್ಕಾರಗಳಿಂದ ದೊರೆಯುವ ಸೌಲಭ್ಯಗಳನ್ನು ಪಡೆದುಕೊಳ್ಳಲು ಕಾರ್ಮಿಕರು ವಿಫಲರಾಗಿದ್ದಾರೆ. ಪಡಿತರ ಚೀಟಿ, ವಸತಿ, ಮತ್ತಿತರ ಮತಧಾರಿಕಾರದ ಹಕ್ಕ ಪಡೆದ ಕಾರ್ಮಿಕರ ಮತ ಚಲಾವಣೆಯ ಅಧಿಕಾರವು ಸಹ ಕೆಲವೇ ಹಂತಗಳಿಗೆ ಮಾತ್ರ ಸೀಮಿತವಾಗಿದೆ. ಬಹುಮುಖ್ಯ ಹಂತದ ಚುನಾವಣೆಯಿಂದ ಪರಿಭಾವಿಸುವ ಸ್ಥಳೀಯ ಸಂಸ್ಥೆಗಳ ಚುನಾವಣೆಯಿಂದ

ಅವರನ್ನು ಹೊರಗಿಡಲಾಗಿದೆ. ಕ್ಷೇತ್ರಕಾರ್ಯದಲ್ಲಿ ಕಾರ್ಮಿಕರೊಂದಿಗೆ ಚರ್ಚಿಸುವಾಗ, ಕಾರ್ಮಿಕರ ಮತಾಧಿಕಾರವು ಜಿಲ್ಲೆಯಲ್ಲಿ ನಡೆಯುವ ಲೋಕಸಭೆ, ವಿಧಾನಸಭೆ ಮತ್ತು ಜಿಲ್ಲಾ ಪಂಚಾಯಿತಿ ಹಂತಗಳಲ್ಲಿ ಕಾರ್ಮಿಕರು ಸರಳವಾಗಿ ಮತದಾನ ಮಾಡುವ ಅವಕಾಶ ಮಾಡಿಕೊಡಲಾಗುತ್ತದೆ. ಆದರೆ ಸ್ಥಳೀಯ ಸಂಸ್ಥೆಗಳಿಗೆ ನಡೆಯುವ ಚುನಾವಣೆಯಲ್ಲಿ ಮತದಾನದ ಹಕ್ಕನ್ನು ನಿರಾಕರಿಸಲಾಗುತ್ತದೆ. ಏಕೆಂದರೆ ಇದಕ್ಕೆ ಆಯಾ ರಾಜಕೀಯ ಪಕ್ಷಗಳ ಚುನಾವಣಾ ಅಭ್ಯರ್ಥಿಪರ ಇರುವ ಕಾರ್ಯಕರ್ತರಲ್ಲಿ. ಗಣಿ ಕಾರ್ಮಿಕರು ಮತದಾನದ ಕುರಿತು ಪರಸ್ಪರ ವಾಗ್ವಾದಗಳಿವೆ. ಇತ್ತೀಚೆಗೆ ಕೆಲವೇ ಕಾರ್ಮಿಕರಿಗೆ ತಾಲ್ಲೂಕು, ಪುರಸಭೆ, ಪಟ್ಟಣ ಮತ್ತು ಗ್ರಾಮ ಪಂಚಾಯಿತಿಗಳಲ್ಲಿ ಮತದಾನ ಮಾಡಲು ಅವಕಾಶ ಮಾಡಿಕೊಡಲಾಗಿದೆ ಎಂಬುದಾಗಿ ಗಣಿಕಾರ್ಮಿಕರಿಂದ ಕೇಳಿಬರುತ್ತದೆ. ಇಂತಹ ಮತದಾನ ಹಕ್ಕುಗಳಿಲ್ಲದ ಕ್ರಮದಿಂದಾಗಿ, ಸ್ಥಳೀಯ ಸಂಸ್ಥೆಗಳಿಂದ ಜಯ ಸಾಧಿಸಿದ ಅಭ್ಯರ್ಥಿಗಳು ಈ ಗಣಿ ಕಾರ್ಮಿಕರನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ. ಜೊತೆಗೆ ಸ್ಥಳೀಯ ಸರ್ಕಾರದ ಯಾವುದೇ ಸೌಲಭ್ಯಗಳನ್ನು ಇವರಿಗೆ ವಿತರಿಸುವ ಪ್ರಯತ್ನವು ಅತ್ಯಲ್ಪವೆಂದೇ ಹೇಳಬೇಕಾಗಿದೆ.

ಮುಂದಿನ ೩.೨೧ರ ಕೋಷ್ಟಕವು ಸ್ಥಳೀಯ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳಿಂದ ಕಾರ್ಮಿಕರಿಗೆ ದೊರೆತ ಸೌಲಭ್ಯಗಳನ್ನು ವಿಶ್ಲೇಷಿಸುತ್ತದೆ. ಕೆಲವು ಕಾರ್ಮಿಕ ಕುಟುಂಬಗಳು ೧೦ ರಿಂದ ೨೦ ವರ್ಷಗಳವರೆಗೆ ಆಯಾ ಗಣಿ ಪ್ರದೇಶಗಳಲ್ಲಿ ವಾಸಿಸುತ್ತಿರುವುದರಿಂದ ಶೇಕಡ ೨೦ರಷ್ಟು ಜನರಿಗೆ ಸರ್ಕಾರದ ಬೇರೆ ಬೇರೆ ಸ್ಕೀಮ್‌ನಲ್ಲಿ ಮನೆಗಳನ್ನು ಪಡೆದಿದ್ದಾರೆ. ವಿಶೇಷವಾಗಿ ಇವರೆಲ್ಲಾ ಸ್ಥಳೀಯ ಮೂಲದವರು ಇಲ್ಲವೇ ಸ್ಥಳೀಯರೊಂದಿಗೆ ರಕ್ತ ಸಂಬಂಧವನ್ನು ಹೊಂದಿದವರಾಗಿದ್ದಾರೆ. ಶೇಕಡ ೩೦ ರಷ್ಟು ಕಾರ್ಮಿಕರಿಗೆ ಕ್ಯಾಂಪ್‌ಗಳಲ್ಲಿ ನೆಲಸಲು ಖಾಲಿ ನಿವೇಶನಗಳನ್ನು ನೀಡಲಾಗಿದೆ. ಶೇಕಡ ೨೨ ರಷ್ಟು ಕಾರ್ಮಿಕರು ವಾಸಿಸುವ ಪ್ರದೇಶಗಳ ಸಮೀಪ ಬೋರ್‌ವೆಲ್‌ಗಳನ್ನು ಕೊರೆಸಲಾಗಿದೆ. ಹಾಗೆಯೇ ಶೇಕಡ ೩೦ ರಷ್ಟು ಅಂಗನವಾಡಿ, ಶೇಕಡ ೩೧ ರಷ್ಟು ಪ್ರಾಥಮಿಕ ಶಾಲೆಗಳನ್ನು ಆರಂಭಿಸಲಾಗಿದೆ. ಆದರೆ ಇವುಗಳು ನಿಗದಿತವಾಗಿ ಕಾರ್ಮಿಕರು ನೆಲೆಸಿರುವ ಕ್ಯಾಂಪ್‌ಗಳಲ್ಲಿಯೇ ಇರದೇ ಸ್ವಲ್ಪ ದೂರದಲ್ಲಿ ಕಂಡುಬರುತ್ತವೆ. ಕಾರ್ಮಿಕರು ನೆಲೆಸಿರುವ ವಸತಿ ಪ್ರದೇಶಗಳ ಸುತ್ತಮುತ್ತಲಿನಲ್ಲಿ ಸ್ಥಳೀಯ ಗಣಿಕಾರ್ಮಿಕರು ಈ ಭಾಗದ ಜನರೊಂದಿಗೆ ಸಂಬಂಧವನ್ನು ಬೆಳೆಸಿಕೊಂಡಿರುವ ಶೇಕಡ ೧೦ ರಷ್ಟು ಕಾರ್ಮಿಕರಿಗೆ ಕೃಷಿ ಅಥವಾ ಗೃಹ ಕೈಗಾರಿಕೆಗಳಿಗಾಗಿ ನೀಡುವ ಐ.ಆರ್.ಡಿ.ಪಿ. ಸಾಲವನ್ನು ಪಡೆದಿದ್ದಾರೆ. ಗಣಿ ಪ್ರದೇಶಗಳ ಸುತ್ತಮುತ್ತ ನೆಲೆಸಿರುವ ಶೇಕಡ ೧೫ ರಷ್ಟು ಕಾರ್ಮಿಕ ವಸತಿಗಳಿಗೆ ಭಾಗ್ಯಜ್ಯೋತಿ ಯೋಜನೆಯಲ್ಲಿ ಉಚಿತ ವಿದ್ಯುತ್‌ನ್ನು ಒದಗಿಸಲಾಗಿದೆ. ಇತ್ತೀಚಿನ ದಿನಗಳಲ್ಲಿ ಹೆಚ್ಚು ಚರ್ಚೆಗೆ ಗ್ರಾಸವಾಗುತ್ತಿರುವ ಪಡಿತರ ಕಾರ್ಡ್‌ಗಳನ್ನು ಶೇಕಡ ೨೫ ರಷ್ಟು ಕಾರ್ಮಿಕರಿಗೆ

## ಕೋಷ್ಟಕ ೨೧

## ಗಣಿಕಾರ್ಮಿಕರಿಗೆ ದೊರೆತ ಸೌಲಭ್ಯಗಳ ವಿವರ

| ಕ್ರ.ಸಂ | ಸೌಲಭ್ಯಗಳು | ಮನೆ | | | ಕುಡಿಯುವ ನೀರು | | | ಹ್ಯಾಂಡ್‌ಪಂಪ್ | | | ಪ್ರಾಥಮಿಕ ಶಾಲೆ | | | ಅಂಗನವಾಡಿ | | | ರೇಷನ್‌ಕಾರ್ಡ್ | | | ವಿದ್ಯುತ್‌ಚ್ಛಕ್ತಿ | | | ಐಆರ್‌ಡಿಪಿ ಸಾಲ | | | ಖಾಲಿ ನಿವೇಶನ | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ೧. | ಹೇಳಿಕೆಗಳು | ಹೌ | ಇ | ಒ | ಹೌ | ಇ | ಒ | ಹೌ | ಇ | ಒ | ಹೌ | ಇ | ಒ | ಹೌ | ಇ | ಒ | ಹೌ | ಇ | ಒ | ಹೌ | ಇ | ಒ | ಹೌ | ಇ | ಒ | ಹೌ | ಇ | ಒ |
| ೨. | ಕಾ. ಸಂಖ್ಯೆ | ೪೦ | ೧೬೦ | ೨೦೦ | ೩೦ | ೧೭೦ | ೨೦೦ | ೫೦ | ೧೫೦ | ೨೦೦ | ೬೦ | ೧೪೦ | ೨೦೦ | ೫೦ | ೧೫೦ | ೨೦೦ | ೫೦ | ೧೫೦ | ೨೦೦ | ೩೦ | ೧೭೦ | ೨೦೦ | ೨೦ | ೧೮೦ | ೨೦೦ | ೬೦ | ೧೪೦ | ೨೦೦ |
| ೩. | ಶೇಕಡವಾರು | ೨೦ | ೮೦ | ೧೦೦ | ೧೫ | ೮೫ | ೧೦೦ | ೨೫ | ೭೫ | ೧೦೦ | ೩೦ | ೭೦ | ೧೦೦ | ೨೫ | ೭೫ | ೧೦೦ | ೩೦ | ೭೦ | ೧೦೦ | ೧೫ | ೮೫ | ೧೦೦ | ೧೦ | ೯೦ | ೧೦೦ | ೩೦ | ೭೦ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಹೌ = ಹೌದು, ಇ = ಇಲ್ಲ, ಒ = ಒಟ್ಟು

ಲಭ್ಯವಾಗಿದೆ. ಕಾರ್ಮಿಕರ ವಸತಿಯ ಸುತ್ತಮುತ್ತ ವೈದ್ಯಕೀಯ ಸಲಹೆಗಾಗಿ ಆಸ್ಪತ್ರೆಗಳ ಸೌಕರ್ಯವಾಗಲಿ. ಯುವಕ ಯುವತಿಯರ ಸಂಘಟನೆಗಳಾಗಲೀ ಕಂಡುಬರುತ್ತಿಲ್ಲ. ಕಾರ್ಮಿಕರು ಬಡವರು, ಅನಕ್ಷರಸ್ಥರಾಗಿರುವುದರಿಂದ ರಾಜಕೀಯ ಪಾಲ್ಗೊಳ್ಳುವಿಕೆ ಹಾಗೂ ರಾಜಕೀಯ ಅಧಿಕಾರ ಪಡೆದುಕೊಳ್ಳುವಲ್ಲಿ ಅತ್ಯಂತ ಹಿಂದುಳಿದಿದ್ದಾರೆ.

ನಮ್ಮ ರಾಜ್ಯದಲ್ಲಿ ಪಂಚಾಯತ್‌ರಾಜ್ಯ ಕಾಯ್ದೆ ಜಾರಿಗೆ ಬಂದು ಸುಮಾರು ೩೦ ವರ್ಷಗಳೇ ಕಳೆದಿವೆ. ಪಂಚಾಯತ್‌ರಾಜ್ಯಗಳ ಮುಖ್ಯ ಕನಸಾದ ಗ್ರಾಮಸ್ವರಾಜ್ಯ ಯೋಜನೆಯ ಅನ್ವಯ ಹಲವಾರು ಯೋಜನೆಗಳನ್ನು ರಾಜ್ಯ ಸರ್ಕಾರವು ಗ್ರಾಮಗಳ ಸರ್ವಾಂಗೀಣ ಅಭಿವೃದ್ಧಿಗೆ ಜಾರಿಗೊಳಿಸಿದೆ. ಈ ನಿಟ್ಟಿನಲ್ಲಿ ಬಡತನ ರೇಖೆಯ ಕೆಳಗೆ ಬರುವ ಪ್ರತಿಯೊಂದು ಕುಟುಂಬಕ್ಕೂ ವಸತಿ, ಪಡಿತರ ಚೀಟಿ ಕುಡಿಯುವ ನೀರು, ಆರೋಗ್ಯ, ಉದ್ಯೋಗ ಇತ್ಯಾದಿ ಸೌಕರ್ಯಗಳನ್ನು ಒದಗಿಸುವುದು ಕಡ್ಡಾಯ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಗಣಿಗಾರಿಕೆಯಲ್ಲಿರುವ ಕಾರ್ಮಿಕರಿಗೆ ಸರ್ಕಾರದಿಂದ ದೊರೆತ ಸೌಲಭ್ಯಗಳು ಅತ್ಯಲ್ಪವೆಂದೇ ಹೇಳಬೇಕಾಗಿದೆ.

ಹಾಗೆಯೇ ಜಿಲ್ಲೆಯ ಗಣಿ ಸಂಸ್ಥೆಗಳ ಮಾಲೀಕರು ವಿವಿಧ ರಾಜಕೀಯ ಪಕ್ಷಗಳ ಬೆಂಬಲಿತರಾಗಿ ರುವುದರಿಂದ ಆಯಾ ಪಕ್ಷಗಳ ಬಗ್ಗೆ ಸದಾಭಿಪ್ರಾಯ ಹೊಂದಿದ್ದಾರೆ. ಹೀಗಾಗಿ ಗಣಿ ಕಾರ್ಮಿಕರು ಸಹ ತಮ್ಮ ಗಣಿ ಮಾಲೀಕನನ್ನು ಬೆಂಬಲಿಸುವುದರಿಂದ ಕೆಲವು ಪಕ್ಷಗಳೊಂದಿಗೆ ಖಾಯಂ ಆಗಿ ಗುರ್ತಿಸಿಕೊಳ್ಳಬೇಕಾಗಿದೆ. ಈ ಕಾರಣದಿಂದಾಗಿ ಸರ್ಕಾರದ ಅನೇಕ ಸೌಲಭ್ಯಗಳಿಂದ ವಂಚಿತರಾಗಲು ಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಕಾರ್ಮಿಕರು ಹತ್ತಾರು ವರ್ಷಗಳಿಂದ ಬೆಂಬಲಿಸುತ್ತಾ ಬಂದ ರಾಜಕೀಯ ಪಕ್ಷಗಳ ವಿವರ ಈ ಕೆಳಗಿನ ೩.೨೨ ರಂತೆ ಕಂಡುಬರುತ್ತದೆ.

**ಕೋಷ್ಟಕ ೩.೨೨ : ಕಾರ್ಮಿಕರು ಬೆಂಬಲಿಸುವ ಪಕ್ಷಗಳ ವಿವರ**

| ಕ್ರ.ಸಂ. | ವಿವರಗಳು | ರಾ.ಕಾಂಗ್ರೆಸ್ | ಜೆ.ಡಿ.ಎಸ್. | ಕಮುನಿಷ್ಟ್ | ಬಿ.ಜೆ.ಪಿ. | S.U.S.I. | ಒಟ್ಟು |
|---|---|---|---|---|---|---|---|
| ೧. | ಕಾ.ಸಂಖ್ಯೆ | ೯೦ | ೬೫ | ೨೦ | ೧೫ | ೧೦ | ೨೦೦ |
| ೨. | ಶೇಕಡವಾರು | ೪೫ | ೩೨.೫ | ೧೦ | ೭.೫ | ೫ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಗಣಿ ಕಾರ್ಮಿಕರು ಹತ್ತಾರು ವರ್ಷಗಳಿಂದ ಬೆಂಬಲಿಸುತ್ತಾ ಬಂದ ವಿವಿಧ ರಾಜಕೀಯ ಪಕ್ಷಗಳ ಮೇಲಿನ ಒಲವು ಕಂಡುಬರುತ್ತದೆ. ಈ ಮೇಲಿನ ಕಾರ್ಮಿಕರು ಅಭಿಲಾಷೆಗೆ ಮತದಾನದ ಹಕ್ಕು ಪಡೆದವರನ್ನು ಮಾತ್ರ ಗಣನೆಗೆ ಪರಿಗಣಿಸಲಾಗಿದೆ. ಅದರಲ್ಲಿ ಶೇಕಡ ೪೫ರಷ್ಟು ಕಾರ್ಮಿಕರು ರಾಷ್ಟ್ರೀಯ ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸುವುದಾಗಿ ಹೇಳುತ್ತಾರೆ. ಆದರೆ ಏಕೆ ಎಂಬ ಪ್ರಶ್ನೆಗೆ

ಅವರಲ್ಲಿ ನಿಖರವಾದ ಉತ್ತರವಿಲ್ಲ. ಅದಕ್ಕೆ ತಮ್ಮ ಗಣಿಮಾಲೀಕರು ಕಾಂಗ್ರೇಸ್ ಪಕ್ಷವನ್ನು ಬೆಂಬಲಿಸುವುದರಿಂದ ತಾವುಗಳು ಆ ಪಕ್ಷವನ್ನು ಬೆಂಬಲಿಸುವುದಾಗಿ ಹೇಳುತ್ತಾರೆ. ಶೇಕಡ ೩೨.೫ರಷ್ಟು ಕಾರ್ಮಿಕರು ಜಾತ್ಯಾತೀತ ಜನತಾದಳ ಪಕ್ಷವನ್ನು ಬೆಂಬಲಿಸುವುದಾಗಿ ಹೇಳುತ್ತಾರೆ. ಇದಕ್ಕೆ ಕಾರಣವೇನೆಂದರೆ ಜಿಲ್ಲೆಯ ಕೆಲವು ಗಣಿ ಮಾಲೀಕರು ಜನತಾದಳ ಪಕ್ಷದವರಾಗಿದ್ದರಿಂದ ತಾವು ಸಹ ಆ ಪಕ್ಷವನ್ನು ಬೆಂಬಲಿಸುವುದಾಗಿ ನುಡಿಯುತ್ತಾರೆ. ಶೇಕಡ ೧೦ ರಷ್ಟು ಕಾರ್ಮಿಕರು ಬಡವರ ಬಗ್ಗೆ, ದುಡಿಯುವರ ಬಗ್ಗೆ, ಕಾಳಜಿ ವಹಿಸುತ್ತಿರುವ ಕಮ್ಯುನಿಷ್ಟ ಪಕ್ಷವನ್ನು ಬೆಂಬಲಿಸುತ್ತಾರೆ. ಶೇಕಡ ೭.೫ರಷ್ಟು, ಇತ್ತೀಚೆಗೆ ಗ್ರಾಮೀಣ ಮಟ್ಟಗಳಲ್ಲಿ ವ್ಯಾಪಿಸುತ್ತಿರುವ ಬಿ.ಜೆ.ಪಿ.ಯನ್ನು, ಶೇಕಡ ೫ರಷ್ಟು, ಬಳ್ಳಾರಿ ಜಿಲ್ಲೆಯ ಕೆಲವು ಭಾಗಗಳಲ್ಲಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುತ್ತಿರುವ ಎಸ್.ಯು.ಸಿ.ಎಸ್. ಪಕ್ಷದ ಬಗ್ಗೆ ಆಸಕ್ತಿಯಿರುವ ಕಾರ್ಮಿಕರನ್ನು ಕಾಣಬಹುದು. ಗಣಿ ಕಾರ್ಮಿಕರಲ್ಲಿ ರಾಜಕೀಯ ಪ್ರಜ್ಞೆ ಹಾಗು ಪಾಲ್ಗೊಳ್ಳುವಿಕೆಯ ಬಗ್ಗೆ ಯಾವುದೇ ಸ್ವರೂಪದ ದೂರದೃಷ್ಟಿತ್ವವಾಗಲೀ ಇಲ್ಲವೇ ಮುಂದಾಲೋಚನೆಯ ಕ್ರಮಗಳು ಇಲ್ಲವೆಂದೇ ತಿಳಿದುಬರುತ್ತದೆ. ಈ ಹಿಂದೆ ಸಂಡೂರು ತಾಲೂಕಿನ ತೋರಣಗಲ್ಲು ಗ್ರಾಮವಾಸಿಯಾದ ಚೆನ್ನಬಸಪ್ಪ ಎಂಬುವನು ಮೂಲತಃ ಗಣಿ ಕಾರ್ಮಿಕನಾಗಿದ್ದು, ರಾಜಕೀಯವನ್ನು ಪ್ರವೇಶಿಸಿ, ಸಂಡೂರು ತಾಲ್ಲೂಕು ಪಂಚಾಯತಿಯ ಅಧ್ಯಕ್ಷನಾದರೂ ಗಣಿ ಕಾರ್ಮಿಕರಿಗೆ ಯಾವುದೇ ರೀತಿಯ ಪ್ರಯೋಜನವಾಗಿಲ್ಲವೆಂದೂ ರಾಜಕೀಯ ಕ್ಷೇತ್ರದ ಬಗ್ಗೆ ನಿರಾಸಕ್ತಿಯನ್ನು ಪ್ರದರ್ಶಿಸುತ್ತಾರೆ.

ಗಣಿ ಕಾರ್ಮಿಕರಲ್ಲಿ ರಾಜಕೀಯ ಪ್ರಜ್ಞೆ ಹಾಗೂ ರಾಜಕೀಯ ಪಾಲ್ಗೊಳ್ಳುವಿಕೆಯ ಕೊರತೆಯಿಂದಾಗಿ ಬಳ್ಳಾರಿ, ಹೊಸಪೇಟೆ ಮತ್ತು ಸಂಡೂರು ತಾಲ್ಲೂಕುಗಳ ಸ್ಥಳೀಯ ಸರ್ಕಾರಗಳಾಗಲೀ ಇಲ್ಲವೇ ಖಾಸಗಿ ಸಂಸ್ಥೆಗಳಾಗಲೀ ಜಾರಿಯಲ್ಲಿರುವ ಸರ್ಕಾರದ ಅಥವಾ ಸರ್ಕಾರೇತರ ಯಾವುದೇ ಯೋಜನೆಗಳನ್ನು ಕಾರ್ಮಿಕರು ವಾಸಿಸುವ ಕ್ಯಾಂಪ್‌ಗಳಿಗೆ ತೆಗೆದುಕೊಂಡು ಹೋಗಿಲ್ಲ. ಇದಕ್ಕೆ ಆಯಾ ತಾಲ್ಲೂಕುಗಳಲ್ಲಿರುವ ಸ್ಥಳೀಯ ಸಂಸ್ಥೆಗಳಿಗೆ ಆಯ್ಕೆಯಾದ ಕೆಲವು ಜನಪ್ರತಿನಿಧಿಗಳನ್ನು ಸಂಪರ್ಕಿಸಿದಾಗ, ಅವರಿಂದ ದೊರೆತ ಉತ್ತರವು ಈ ಕೆಳಗಿನಂತಿದೆ. "ಗಣಿಗಳಲ್ಲಿ ದುಡಿಯುವ ಕಾರ್ಮಿಕರು ಹೆಚ್ಚಾಗಿ ವಲಸೆಗಾರರಾಗಿದ್ದು, ಅವರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚಾರಿಸುವವರಾಗಿದ್ದಾರೆ. ಅವರು ಯಾವುದೇ ಒಂದು ನಿರ್ಧಿಷ್ಟವಾದ ಪ್ರದೇಶದಲ್ಲಿ ನಿರಂತರವಾಗಿ ವಾಸಿಸುವವರ ಪ್ರಮಾಣ ತುಂಬಾ ಕಡಿಮೆ. ಈ ಕಾರಣದಿಂದಾಗಿ ಸರ್ಕಾರ ಹಾಗೂ ಸರ್ಕಾರೇತರ ಸೌಲಭ್ಯಗಳನ್ನು ಗಣಿಕಾರ್ಮಿಕರಿಗೆ ಹಂಚುವುದು ಕಷ್ಟಕರ. ಹೇಗೆಂದರೆ ತಮ್ಮನ್ನು ಆಯ್ಕೆ ಮಾಡಿದ ಸ್ಥಳೀಯ ಮತದಾರರ ಬೇಡಿಕೆಗಳೇ ಅಧಿಕವಾಗಿರುವುದರಿಂದ ಕಾರ್ಮಿಕರು ವಾಸಿಸುವ ಕ್ಯಾಂಪ್‌ಗಳಿಗೆ ಸರ್ಕಾರದ ಸೌಲಭ್ಯಗಳನ್ನು ಜಾರಿಗೊಳಿಸುವುದು ಅಸಾಧ್ಯವೆಂದೇ ಅಭಿಪ್ರಾಯಪಡುತ್ತಾರೆ.

ಅಡಿ ಟಿಪ್ಪಣಿಗಳು

೧. A Marshall, 1961, **Principals of Economics,** Oxford University Press, Pp.54

೨. Marx and Engels, **Wage, Labour and Capital in their Collections Work,** Vol-9, Progress Publishers, Mascow, Pp.220-221

೩. K.P.M.Sundaram and Rudrdath, Indian Economy, Pp.680

೪. ಚಂದ್ರಶೇಖರ ಟಿ.ಆರ್., ೧೯೯೯, ಅಮರ್ತ್ಯಸೇನ್ ಅಭಿವೃದ್ಧಿ ಕಥನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೮

೫. ಅದೇ, ಪು.೨೩

೬. ಅದೇ, ಪು.೨೫

೭. ಅದೇ, ಪು.೨೫

೮. Subash Kashyap- Our Constution an Introduction to India's Constution Law, National Book Trust of India, New Delhi, 1994, Pp.72-85

# ಅಧ್ಯಾಯ ೪

## ಗಣಿಕಾರ್ಮಿಕರ ಸಮಸ್ಯೆಗಳು ಮತ್ತು ಸವಾಲುಗಳು

೪.೧. ಪರಿಸರ

೪.೨ ವಸತಿ

೪.೩ ಉದ್ಯೋಗ

೪.೪. ಆರೋಗ್ಯ

೪.೫. ವಲಸೆ

೪.೬. ಭಾಷೆ

೪.೭ ಶಿಕ್ಷಣ

೪.೮. ಸಂಘಟನೆ

# ಗಣಿಕಾರ್ಮಿಕರ ಸಮಸ್ಯೆಗಳು ಮತ್ತು ಸವಾಲುಗಳು

ಇಂದು ವಿಶ್ವದ ಆರ್ಥಿಕತೆಯನ್ನೊಳಗೊಂಡ ವಿಶ್ಲೇಷಣೆಯ ಸಂದರ್ಭದಲ್ಲಿ ಆಯಾ ರಾಷ್ಟ್ರಗಳಲ್ಲಿ ಲಭ್ಯವಿದ್ದ ಸಂಪನ್ಮೂಲಗಳಿಗಿಂತಲೂ ಆಯಾ ದೇಶಗಳ ಆರ್ಥಿಕತೆಯನ್ನು ಕಾಡುವ ಅಲ್ಲಿನ ಉತ್ಪಾದನೆ ಮತ್ತು ವಿತರಣೆಯ ಚಟುವಟಿಕೆಗಳನ್ನು ಅಸ್ತವ್ಯಸ್ತಗೊಳಿಸಲು ಕಾರಣವಾಗುವ ಅಂಶಗಳನ್ನು ಪ್ರಧಾನವಾಗಿ ಪರಿಭಾವಿಸಲಾಗುತ್ತಿದೆ. ಇಂತಹ ಧೋರಣೆಯು ವಿಶ್ವದ ಅಗ್ರಮಾನ್ಯ ಸ್ಥಾನದಲ್ಲಿರುವ ಹಾಗೂ ಯಜಮಾನಿಕೆಯ ಗತ್ತಿನಲ್ಲಿರುವ ಕೆಲವು ರಾಷ್ಟ್ರಗಳ ಕುತಂತ್ರಗಳಿಂದಾಗಿ, ಇಡೀ ಜಗತ್ತಿನ ವಿವಿಧ ರಾಷ್ಟ್ರಗಳ ಸ್ಥಾನ-ಮಾನಗಳನ್ನು ನಿರ್ಣಯಿಸಲು, ಅವುಗಳ ಆರ್ಥಿಕತೆಯನ್ನೇ ಮಾನದಂಡವಾಗಿ ಪರಿಗಣಿಸಿ ಅಭಿವೃದ್ಧಿ, ಅಭಿವೃದ್ಧಿಶೀಲ, ಹಿಂದುಳಿದ ಮತ್ತು ಬಡರಾಷ್ಟ್ರಗಳೆಂಬ ಹಣೆಪಟ್ಟಿಯನ್ನು ಅಂಟಿಸಲಾಗುತ್ತಿದೆ. ಇಂತಹ ಮಾನದಂಡದ ಕ್ರಮವು ಒಂದು ರೀತಿಯಲ್ಲಿ ಆಯಾ ರಾಷ್ಟ್ರಗಳಲ್ಲಿರುವ ಸಾಮಾಜಿಕ, ಆರ್ಥಿಕ, ತಾಂತ್ರಿಕ ಹಾಗೂ ವಿಜ್ಞಾನ ಕ್ಷೇತ್ರಗಳ ಬಲವರ್ಧನೆಯ ಜೊತೆಗೆ ಮಹತ್ತರವಾದ ಬದಲಾವಣೆಗಳಿಗೆ ಕಾರಣವಾದರೂ, ಆಯಾ ದೇಶಗಳಲ್ಲಿನ ಪ್ರಕೃತಿದತ್ತವಾದ ಸಂಪನ್ಮೂಲಗಳನ್ನು ಮತ್ತು ಸಾಂಸ್ಕೃತಿಕ ವೈವಿಧ್ಯತೆಗಳನ್ನು ಕೆಲವು ಮಹತ್ವಾಕಾಂಕ್ಷೆಯುಳ್ಳ ಬಂಡವಾಳಶಾಹಿ ರಾಷ್ಟ್ರಗಳು ಅವುಗಳನ್ನು ನಾಶಮಾಡುವ, ಆಕ್ರಮಿಸುವ, ಕೊಳ್ಳೆಹೊಡೆಯುವ ಇಲ್ಲವೆ ಅವುಗಳ ಮೇಲೆ ಸವಾರಿ ಮಾಡುವ ದುರಾಲೋಚನೆಯು ಅಡಗಿದೆ ಎಂದೂ ಹೇಳಬಹುದು. ಹೇಗೆಂದರೆ ಭಾರತದಲ್ಲಿ ಅನೇಕ ನೈಸರ್ಗಿಕ ಸಂಪನ್ಮೂಲಗಳ ಜೊತೆಗೆ ವಿಜ್ಞಾನ, ತಂತ್ರಜ್ಞಾನವು ಪ್ರಗತಿಯ ಪಥದಲ್ಲಿ ಸಾಗುತ್ತಿದ್ದರೂ, ಕೇವಲ ಜನಸಂಖ್ಯೆ ಬೆಳವಣಿಗೆಯ ದರವನ್ನು ಆಧರಿಸಿ ಭಾರತದ ಆರ್ಥಿಕತೆಯ ಸಾಮರ್ಥ್ಯವನ್ನು ನಿರ್ಧರಿಸುತ್ತಿರುವುದು ಎಷ್ಟು ಸರಿಯಾದ ಕ್ರಮ? ಪ್ರಪಂಚದ ಬಹಳಷ್ಟು ರಾಷ್ಟ್ರಗಳು ಅತ್ಯಂತ ವಿರಳವಾದ ಜನಸಂಖ್ಯೆಯನ್ನು ಹೊಂದಿದ್ದರೂ ಇಲ್ಲಿಯತನಕ ಏಕೆ ಅಭಿವೃದ್ಧಿಯನ್ನು ಸಾಧಿಸಿಲ್ಲ? ಹಾಗೆಯೇ ಅಮೇರಿಕಾ, ಇಂಗ್ಲೆಂಡ್ ಮತ್ತು ಯುರೋಪ್ ರಾಷ್ಟ್ರಗಳಲ್ಲಿನ ಬಹುಮುಖ್ಯವಾದ ಕ್ಷೇತ್ರಗಳಲ್ಲಿ ಭಾರತೀಯ ಸಂಜಾತರೇ ಹಕ್ಕುದಾರಿಕೆಯನ್ನು ಹೊಂದಿ, ಅಭಿವೃದ್ಧಿಗೆ ಶ್ರಮಿಸುತ್ತಿರುವಾಗ ಜನಸಂಖ್ಯೆಯೊಂದೇ ಅಭಿವೃದ್ಧಿಗೆ ಕಂಟಕವೆಂದು ಏಕೆ ಪರಿಭಾವಿಸಲಾಗುತ್ತಿದೆ? ಸತತವಾಗಿ ಬೆಳೆಯುತ್ತಿರುವ ಜನಸಂಖ್ಯೆಗೆ ಉದ್ಯೋಗವನ್ನು ಒದಗಿಸಿಕೊಡಲು ಸರ್ಕಾರಕ್ಕೆ ಸೂಕ್ತ ಕಾರ್ಯಯೋಜನೆಗಳನ್ನು ರೂಪಿಸಲು ಅಡ್ಡಿಯಾಗಿರುವ ಕಾಣದ

ಕೈಗಳಾವುವು? ಸ್ವಾತಂತ್ರ್ಯ ದೊರೆತು ಐವತ್ತೈದು ವರ್ಷಗಳೇ ಕಳೆದುಹೋಗಿದ್ದರೂ ಸರ್ವರಿಗೂ ಶಿಕ್ಷಣ, ಆರೋಗ್ಯ, ಆಹಾರ, ವಸತಿ, ಸಾರಿಗೆ ಹಾಗೂ ಉಡುಪು ಇತ್ಯಾದಿ ಸೌಲಭ್ಯಗಳನ್ನು ಒದಗಿಸಲು ಸಾಧ್ಯವಾಗದಿರುವ ಅಂಶಗಳನ್ನು ಪರೀಕ್ಷಿಸುವ, ಅವುಗಳನ್ನು ಪರಿಶೀಲಿಸುವ ಹಾಗೂ ಪರಾಮರ್ಶೆಗೊಳಪಡಿಸುವ ಕಾಲಘಟ್ಟದಲ್ಲಿರುವುದರಿಂದ ಪ್ರಚಲಿತ ಸನ್ನಿವೇಶದಲ್ಲಿ ಕಂಡುಬರುತ್ತಿರುವ ಪ್ರತಿಯೊಂದು ಬದಲಾವಣೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಅವುಗಳನ್ನು ಪರಾಮರ್ಶಿಸುವ ವಿಧಿ ವಿಧಾನಗಳನ್ನು ರೂಪಿಸಲು ಸಮರ್ಥವಾದಾಗ ಮಾತ್ರ ಸುಭದ್ರ ಆರ್ಥಿಕತೆ ಮತ್ತು ಪರಿಪೂರ್ಣತೆಯುಳ್ಳ ಸಮಾಜದ ನಿರ್ಮಾಣ ಮಾಡಲು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಈಗಾಗಲೇ ಯಾವುದೋ ಬಂಡವಾಳಿಗನ ಆದೇಶ ಮತ್ತು ಅಣತೆಯಂತೆ ಭಾರತದ ನೀತಿ-ನಿಯಮಗಳು ರೂಪಿಸಲ್ಪಡುತ್ತಿರುವುದರಿಂದ ನಿರುದ್ಯೋಗ, ಬಡತನ, ಅಸಮಾನತೆ, ಕನಿಷ್ಠ ಜೀವನಮಟ್ಟ ಹಾಗೂ ಉತ್ಪಾದನೆ-ವಿತರಣೆಯು ಅಸ್ತವ್ಯಸ್ತಗೊಂಡಿರುವುದು ಜಗಜ್ಜಾಹಿರಗೊಂಡಿದೆ. ಈ ಹಿನ್ನೆಲೆಯಲ್ಲಿ ಯೋಜನೆಗಳನ್ನು ರೂಪಿಸುವವರು, ಮೂಲತಃ ಸಮಸ್ಯೆಗಳನ್ನು ಎದುರಿಸುತ್ತಿರುವ ವಿವಿಧ ಕ್ಷೇತ್ರಗಳನ್ನು ಗುರುತಿಸಿ, ಅವುಗಳನ್ನು ಕಟ್ಟುನಿಟ್ಟಾಗಿ ಹೋಗಲಾಡಿಸುವ ಕ್ರಮಗಳನ್ನು ಕೈಗೊಂಡಾಗ ಮಾತ್ರ ಸಮಸ್ಯೆಯ ಪರಿಹಾರ ಸಾಧ್ಯವಾಗುತ್ತದೆ. ಇಲ್ಲವಾದಲ್ಲಿ ಪ್ರಸ್ತುತ ಸಮಸ್ಯೆಗಳ ಜೊತೆಗೆ ಹೊಸ-ಹೊಸ ಸಮಸ್ಯೆಗಳ ಸೃಷ್ಟಿಗೆ ಅಂಕಣವನ್ನು ಒದಗಿಸಿಕೊಟ್ಟಂತಾಗುತ್ತದೆ. ಇಂತಹ ದೂರದೃಷ್ಟಿತ್ವ ಮತ್ತು ಆಲೋಚನೆಯ ಸಾಮರ್ಥ್ಯ ಯೋಜನೆಯ ಹರಿಕಾರರಲ್ಲಿದ್ದಾಗ ಮಾತ್ರ, ಆಯಾ ಯೋಜನೆಯ ಆಶಯಗಳನ್ನು ಸಾಕಾರಗೊಳಿಸಲು ಸಾಧ್ಯವಾಗುತ್ತದೆ. ಆದರೆ ಅತ್ಯಾಧಿಕ ಮಾನವ ಸಂಪನ್ಮೂಲದ ಆರ್ಥಿಕತೆಯನ್ನು ಹೊಂದಿರುವ ಭಾರತ ಸರ್ಕಾರವು ರೂಪಿಸುತ್ತಿರುವ ಎಲ್ಲಾ ಕಾರ್ಯತಂತ್ರಗಳು ಯಾಂತ್ರೀಕೃತಗೊಳ್ಳುತ್ತಿರುವುದನ್ನು ಮನಗಂಡಾಗ, ನಮ್ಮ ದೇಶದ ಯೋಜನಾಕಾರರು, ಜನನಾಯಕರು ಎತ್ತ ನಡೆದಿದ್ದಾರೆಂದು ಕಂಡುಹಿಡಿಯುವುದೇ ದುಸ್ತರವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಗಣಿ ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತದ್ದಾಗಿದೆ.

ಪ್ರಸ್ತುತ ಸನ್ನಿವೇಶದಲ್ಲಿ ಚಿನ್ನದ ಮೊಟ್ಟೆಯನ್ನಿಡುವ ಕ್ಷೇತ್ರವೆಂದೇ ಪರಿಗಣಿಸಲ್ಪಡುತ್ತಿರುವ ಕಬ್ಬಿಣ ಮತ್ತು ಮ್ಯಾಂಗನೀಜ್ ಉತ್ಪಾದನೆಯು ತೆರೆದ ಗಣಿಗಾರಿಕೆಯ ಉತ್ಪಾದನೆಯಾಗಿದೆ. ಅಲ್ಲದೆ ಈಗಾಗಲೇ ಸಂಪೂರ್ಣ ಯಾಂತ್ರೀಕೃತಗೊಳ್ಳಲು ಸಿದ್ಧವಾಗಿದೆ. ಅದು ತನ್ನ ಉತ್ಪಾದನೆಯ ಹಲವು ಹಂತಗಳನ್ನು ಯಾಂತ್ರಿಕರಣಕ್ಕೆ ಒಳಪಡಿಸುತ್ತಿದೆ. ಈ ಮೂಲಕ ಸರ್ಕಾರದ ಬೊಕ್ಕಸಕ್ಕೆ ಬಹಳಷ್ಟು ಆದಾಯವನ್ನು ಹಾಗೂ ಗಣಿ ಮಾಲೀಕರ ಅಂತಸ್ತನ್ನು ದ್ವಿಗುಣಗೊಳಿಸುವ ಕ್ಷೇತ್ರವಾಗಿ ಕಂಡುಬರುತ್ತಿದೆ. ಅವುಗಳ ಒಡೆತನವನ್ನು ಹೊಂದಲು ತಾಲೂಕು, ಜಿಲ್ಲಾ, ರಾಜ್ಯ ಹಾಗೂ ಕೇಂದ್ರ ಸರ್ಕಾರದ

ಹಂತಗಳಲ್ಲಿ ಬಲವಾದ ಪೈಪೋಟಿ ತೆರೆ ಮರೆಯಲ್ಲಿ ನಡೆದಿದೆ. ಇಂತಹ ಉತ್ಪಾದನಾ ಕ್ಷೇತ್ರದ ವಿವಿಧ ಆಯಾಮಗಳನ್ನು ಸಂಕ್ಷಿಪ್ತವಾಗಿ ಈ ಕೆಳಗಿನ ವಿಶ್ಲೇಷಣೆಯಿಂದ ತಿಳಿಯಬಹುದು.

ಜಿಲ್ಲೆಯಲ್ಲಿರುವ ಕಬ್ಬಿಣ ಹಾಗೂ ಮ್ಯಾಂಗನೀಜ್ ಅದಿರಿನ ಒಡೆತನವನ್ನು ಪಡೆದುಕೊಳ್ಳಲು ವಿವಿಧ ಇಲಾಖೆಗಳ ಪರವಾನಿಗೆಯನ್ನು ಪಡೆಯಬೇಕಾಗುತ್ತದೆ. ಅವುಗಳೆಂದರೆ ೧.ಕಂದಾಯ ಇಲಾಖೆ, ೨. ಅರಣ್ಯ ಇಲಾಖೆ, ೩. ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ೪. ಪರಿಸರ ಇಲಾಖೆ, ೫. ನೀರಾವರಿ ಇಲಾಖೆ, ೬. ಕೃಷಿ ಇಲಾಖೆ, ೭. ಪೋಲೀಸ್ ಇಲಾಖೆ, ೮. ವಿದ್ಯುತ್ ಇಲಾಖೆ, ೯. ವೈದ್ಯಕೀಯ ಇಲಾಖೆ, ೧೦. ಶಿಕ್ಷಣ ಇಲಾಖೆ, ೧೧. ಸಾರಿಗೆ ಇಲಾಖೆ, ೧೨. ರೈಲ್ವೇ ಇಲಾಖೆ, ೧೩. ಕಾರ್ಮಿಕ ಇಲಾಖೆ ೧೪. ಆಯಾ ಸ್ಥಳೀಯ ಆಡಳಿತ ಸಂಸ್ಥೆಗಳು, ೧೫. ಕೇಂದ್ರ ಗಣಿ ಇಲಾಖೆ ೧೬. ಆದಾಯ ತೆರಿಗೆ ಇಲಾಖೆ ೧೭. ಚೆಂಬರ್ ಆಫ್ ಕಾಮರ್ಸ್, ೧೮. ಸಾರ್ವಜನಿಕ ಹಾಗೂ ಸಾಮಾಜಿಕ ಸಂಘ ಸಂಸ್ಥೆಗಳ ಪರವಾನಿಗೆ ಇತ್ಯಾದಿ ಇಲಾಖೆಗಳ ಪರಿಶೀಲನೆಗೊಳಪಟ್ಟು ಮಂಜೂರಾತಿ ದೊರೆತಾಗ ಮಾತ್ರ ಯಾವುದೇ ವ್ಯಕ್ತಿ ಅಥವಾ ಸಂಸ್ಥೆಗಳು ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರಿನ ಒಡೆತನವನ್ನು ಹೊಂದಲು ಸಾಧ್ಯವಾಗುತ್ತದೆ. ಗಣಿ ಒಡೆತನದ ಹಕ್ಕುದಾರಿಕೆಯ ಅನುಮತಿಯನ್ನು ನೀಡುವ ವಿಷಯಕ್ಕೆ ಸಂಬಂಧಿಸಿದಂತೆ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳ ಅನುಮತಿಯನ್ನು ಪಡೆಯಬೇಕಾಗುತ್ತದೆ. ಅಂದರೆ ಯಾವುದೇ ವ್ಯಕ್ತಿ ಅಥವಾ ಸಂಸ್ಥೆಯು ೧೫ ಎಕರೆ ವ್ಯಾಪ್ತಿಯ ವಿಸ್ತೀರ್ಣದ ಒಳಗಡೆ ಗಣಿ ಪ್ರದೇಶದ ಹಕ್ಕುದಾರಿಕೆಯನ್ನು ಪಡೆದುಕೊಳ್ಳಲು ಕೇವಲ ರಾಜ್ಯ ಸರ್ಕಾರದ ಪರವಾನಿಗೆಯನ್ನು ಪಡೆಯಬೇಕಾಗುತ್ತದೆ. ಆದರೆ ೧೫ ಎಕರೆ ಮೇಲ್ಪಟ್ಟ ವಿಸ್ತೀರ್ಣತೆವುಳ್ಳ ಗಣಿ ಪ್ರದೇಶದ ಪರವಾನಿಗೆಗೆ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರದ ಗಣಿ ಇಲಾಖೆಯ ಆದೇಶವನ್ನು ಪಾಲನೆ ಮಾಡಬೇಕಾಗುತ್ತದೆ. ಹೀಗೆ ಗಣಿ ಉದ್ಯಮದ ಒಡೆತನವನ್ನು ಮೇಲಿನ ಎರಡು ಮೂಲಗಳಿಂದ ಪಡೆಯಲು ಸಾಧ್ಯವಿದೆ.

ಯಾವುದೇ ಗಣಿ ಉತ್ಪಾದನಾ ಸಂಸ್ಥೆಯು ತನ್ನ ಉತ್ಪಾದನಾ ಚಟುವಟಿಕೆಯನ್ನು ವ್ಯವಸ್ಥಿತವಾಗಿ ಕಾರ್ಯಗತಗೊಳಿಸಲು ಈ ಕೆಳಗಿನ ವಿವಿಧ ಉತ್ಪಾದನೆಯ ಹಂತಗಳಲ್ಲಿ ಕಾರ್ಯನಿರ್ವಹಿಸುವುದು ಕಂಡುಬರುತ್ತದೆ.

೧. ಗಣಿ ಮಾಲೀಕ ೨. ಮೈನ್ಸ್ ಮೇನೇಜರ್, ೩. ಸಹಾಯಕ ಮೇನೇಜರ್ಸ್, ೪. ಫೋರ್‌ಮೆನ್, ೫. ಮೇಟ್, ೬. ಸ್ಟಾರ್ಟರ್ಸ್ ೭. ಬ್ಲಾಸ್ಟರ್ಸ್, ೮. ಕ್ವಾಲಿಟಿ ಕಂಟ್ರೋಲರ್, ೯. ಸೂಪರ್‌ವೈಜರ್ಸ್, ೧೦. ಆಪರೇಟರ್ಸ್, ೧೧. ಡ್ರೈವರ್ಸ್, ೧೨. ಹೆಲ್ಪರ್ಸ್, ೧೩. ಕಾಂಟ್ರಾಕ್ಟರ್ಸ್ ಮತ್ತು ಲೇಬರ್ಸ್.

ಮೇಲಿನ ಹಂತಗಳಲ್ಲಿಯೇ ಪ್ರತಿಯೊಂದು ಗಣಿ ಸಂಸ್ಥೆ ಉತ್ಪಾದನಾ ಚಟುವಟಿಕೆಯನ್ನು ಕೈಗೊಳ್ಳುವುದು ಕಡ್ಡಾಯವಾಗಿರುತ್ತದೆ. ಆದರೆ ಜಿಲ್ಲೆಯ ಎಲ್ಲಾ ಮೈನ್ಸ್‌ಗಳಲ್ಲಿ ಪ್ರಥಮ ದರ್ಜೆಯ ವ್ಯವಸ್ಥಾಪಕರನ್ನು ಕಾಣುವುದು ಅಪರೂಪವೆಂದೇ ಹೇಳಬಹುದು. ಕೆಲವೊಬ್ಬ ಪ್ರಥಮ ದರ್ಜೆ ಮೇನೇಜರ್‌ಗಳು ೨ ಅಥವಾ ೩ ಮೈನ್ಸ್‌ಗಳ ಉಸ್ತುವಾರಿಯನ್ನು ನಿರ್ವಹಿಸುತ್ತಿದ್ದಾರೆ. ಆದರೆ ಪ್ರತಿಯೊಂದು ಮೈನ್ಸ್‌ನಲ್ಲಿರುವ ಸಹಾಯಕ ಮೇನೇಜರ್‌ಗಳೇ ಗಣಿ ಉತ್ಪಾದನೆಯ ಮೇಲ್ವಿಚಾರಣೆಯನ್ನು ನಿರ್ವಹಿಸಿಕೊಂಡು ಹೋಗುತ್ತಾರೆ. ಒಂದು ವೇಳೆ ಮೈನ್ಸ್‌ಗಳಲ್ಲಿ ಏನಾದರೂ ಆಕಸ್ಮಿಕ ಗಂಡಾಂತರಗಳು ಸಂಭವಿಸಿದರೆ ಮಾತ್ರ ಅವುಗಳ ಜವಾಬ್ದಾರಿಯನ್ನು ಪ್ರಥಮ ಶ್ರೇಣಿ ಮೇನೇಜರ್‌ಗಳು ವಹಿಸಿಕೊಳ್ಳಬೇಕಾಗುತ್ತದೆ. ಹೀಗೆ ಬೇರೆ, ಬೇರೆ ಹಂತಗಳಲ್ಲಿರುವ ಉತ್ಪಾದನೆಯ ಜವಾಬ್ದಾರಿಯು ಆಯಾ ಹುದ್ದೆಗಳ ಅಧಿಕಾರಿಗಳ ಅಧೀನಕ್ಕೆ ಸಂಬಂಧಿಸಿರುತ್ತದೆ.

**ಗಣಿಯ ವಿತರಣೆ**

ಮೇಲಿನ ಹಂತಗಳಿಂದ ಉತ್ಪಾದನೆಯಾದ ಕಚ್ಚಾ ಅದಿರನ್ನು ವಿತರಣೆಮಾಡುವ ವಿಧಾನವು ವೈವಿಧ್ಯತೆಯಿಂದ ಕೂಡಿದೆ. ಅವುಗಳೆಂದರೆ ೧. ಗಣಿ ಪ್ರದೇಶದ ಒಡೆಯ, ೨. ಕ್ವಾಲಿಟಿ ಕಂಟ್ರೋಲರ್, ೩. ಸ್ಯಾಂಪ್ಲರ್, ೪. ಸೂಪರ್‌ವೈಜರ್ಸ್, ೫. ಲೇಬರ್ ಕಾಂಟ್ರಾಕ್ಟರ್ಸ್, ೬. ಟ್ರಾನ್ಸ್ ಪೋರ್ಟರ್ಸ್, ೭. ತೂಕ ಮಾಡುವುದು (Wighments). ೮. ಮಾರುಕಟ್ಟೆಯ ಮಧ್ಯವರ್ತಿಗಳು (Market Mediaters) ೯. ಕೊಳ್ಳುವವರು ೧೦. ಕಾರ್ಖಾನೆ, ಇತ್ಯಾದಿ ಹಂತಗಳಲ್ಲಿ ಅದಿರಿನ ಉತ್ಪಾದನೆಯನ್ನು ವಿತರಿಸಲಾಗುತ್ತದೆ. ಇಂತಹ ವೈವಿಧ್ಯತೆಯುಳ್ಳ ಗಣಿಗಾರಿಕೆಯ ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗಳು ಈ ಕೆಳಗಿನಂತೆ ಕಂಡುಬರುತ್ತವೆ.

**೪.೧. ಪರಿಸರ**

ಉತ್ತಮ ಪರಿಸರ ಹಾಗೂ ಆಹ್ಲಾದಕರ ವಾತಾವರಣವು ಆಯಾ ದೇಶದ ಅಥವಾ ಸಮಾಜದ ಅಭಿವೃದ್ಧಿ ಹಾಗೂ ಆಧುನಿಕತೆಯ ಮುಖ್ಯ ಸೂಚಿಗಳಲ್ಲೊಂದು ಎಂದೂ ಭಾವಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಆರೋಗ್ಯವಂಥ ಹಾಗೂ ಸದೃಡ ಮಾನವ ಸಂಪನ್ಮೂಲಕ್ಕೆ ಒಳ್ಳೆಯ ವಾತಾವರಣ, ಶುದ್ಧಗಾಳಿ, ಕುಡಿಯುವ ನೀರು, ಪೌಷ್ಠಿಕ ಆಹಾರ ಹಾಗೂ ಶಾಂತಿಸಹಬಾಳ್ವೆಯ ನೆಮ್ಮದಿಯ ಜೀವನವು ಅತ್ಯುತ್ತಮ ಪರಿಸರಕ್ಕೆ ಅಡಿಪಾಯವೆಂದೇ ಹೇಳಬೇಕಾಗುತ್ತದೆ. ಸದೃಢ ಮಾನವ ಸಂಪನ್ಮೂಲವು ಆಯಾ ಪ್ರದೇಶ, ಉತ್ಪಾದನೆ ಹಾಗೂ ವಿತರಣೆಗೆ ಸಹಕರಿಸುವಂತೆ. ತನ್ನ ಸುತ್ತಮುತ್ತಲಿನ ಸಮಾಜದಲ್ಲಿ ಶಾಂತಿ ಸಹಬಾಳ್ವೆಯ ಬೆಳವಣಿಗೆಗೆ ಬೆನ್ನೆಲುಬಾಗಲು ಸಾಧ್ಯವೆಂದು ಅನೇಕ ಸಾಮಾಜಿಕ, ಆರ್ಥಿಕ ಹಾಗೂ ಮನಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಹೀಗಾಗಿ ನಮ್ಮ ಸುತ್ತಮುತ್ತ ಲಭ್ಯವಿರುವ ದಟ್ಟವಾದ

ಅರಣ್ಯ ಸಂಪತ್ತು, ಪರಿಶುದ್ಧ ಗಾಳಿ, ಉತ್ತಮವಾದ ಮಳೆ ಇತ್ಯಾದಿ ಆರೋಗ್ಯವಂತ ಹಾಗೂ ದೀರ್ಘಾಯುಷಿ ಮಾನವ ಸಂಪನ್ಮೂಲಕ್ಕೆ ಸ್ಫೂರ್ತಿಯಾಗಲು ಸಾಧ್ಯ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ನಿರ್ವಿಘ್ನವಾಗಿ, ಸಾಗರೋಪಾದಿಯಲ್ಲಿ ನಡೆದಿರುವ ಗಣಿಗಾರಿಕೆಯಿಂದಾಗಿ ಕೃಷಿ ಹಾಗೂ ಸಂಬಂಧಿತ ಕ್ಷೇತ್ರಗಳಲ್ಲಿ ಯಾವ ಪರಿಣಾಮಗಳನ್ನುಂಟುಮಾಡಿದೆ, ಈ ಭಾಗದ ಜನ ಸಮುದಾಯಗಳಲ್ಲಿ ಬುಡಕಟ್ಟು ಕಾರ್ಮಿಕರು ಸೇರ್ಪಡೆಯಾಗುವುದರಿಂದ ಅವರ ಆರೋಗ್ಯ ಹೇಗಿದೆ? ಎಂಬುದನ್ನು ಕೂಲಂಕುಶವಾಗಿ ಪರಿಶೀಲಿಸಿದಾಗ ಅನೇಕ ವೈಪರಿತ್ಯಗಳು ಜಿಲ್ಲೆಯಲ್ಲಿ ಕಂಡುಬರುತ್ತವೆ.

ಬಳ್ಳಾರಿ ಜಿಲ್ಲೆಗೆ ಅನೇಕ ಐತಿಹಾಸಿಕ ಪರಂಪರೆಯ ಇತಿಹಾಸ ಉಂಟು. ಹಿಂದೆ ಈ ಭಾಗದ ಸಂಡೂರು ಹಾಗೂ ಹೊಸಪೇಟೆ ತಾಲೂಕಿನಲ್ಲಿದ್ದ ದಟ್ಟವಾದ ಅರಣ್ಯ ಸಂಪತ್ತಿನಿಂದಾಗಿ ಶ್ರೀಗಂಧ, ತೇಗ, ಬೀಟೆ, ಹೊನ್ನೆಯಂಥ ಅತ್ಯಂತ ಹೆಚ್ಚು ಬೆಲೆ ಬಾಳುವ ದಟ್ಟ ವನ ಸಂಪತ್ತಿನಿಂದಾಗಿ ಹುಲಿ, ಸಿಂಹ, ಚಿರತೆ, ಕರಡಿ ಹಾಗೂ ಕಾಡುಕೋಣಗಳಂತಹ ಕಾಡುಪ್ರಾಣಿಗಳು ವಾಸವಾಗಿದ್ದ ಇತಿಹಾಸವನ್ನು ಸರ್ಕಾರಿ ದಾಖಲೆಗಳ ಪ್ರಕಾರ ಹಾಗೂ ಹಿರಿಯ ತಲೆಮಾರಿನ ಅನುಭವಗಳ ಮೂಲಕ ತಿಳಿದುಬರುತ್ತದೆ. ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಪಾದಯಾತ್ರೆಯ ಮೂಲಕ ಇಡೀ ಅಖಂಡ ಭಾರತದ ಪ್ರವಾಸ ಕೈಗೊಂಡಿದ್ದ ಗಾಂಧೀಜಿಯವರು ಸಂಡೂರು ಪ್ರದೇಶಕ್ಕೆ ಭೇಟಿ ನೀಡಿ, ಈ ಭಾಗದಲ್ಲಿದ್ದ ವನಸಿರಿಯನ್ನು ಕಂಡು 'ದಕ್ಷಿಣ ಕಾಶಿ' ಎಂಬುದಾಗಿ ತಮ್ಮ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ, ಈ ಭಾಗದಲ್ಲಿದ್ದ ಪ್ರಾಕೃತಿಕ ಸಂಪತ್ತನ್ನು ಕೊಂಡಾಡುತ್ತಾ 'See September in Sandur' ಎಂಬುದಾಗಿ ತಮ್ಮ ಅನುಭವಗಳನ್ನು ತೋಡಿಕೊಂಡಿದ್ದರು. ಅಲ್ಲದೆ ಸಂಡೂರು ಭಾಗದ ಜನಪದರಲ್ಲಿ ಕಂಡುಬರುವ ಅನುಭಾವಾತ್ಮಕ ವ್ಯಾಖ್ಯೆಯೊಂದು ಮೌಖಿಕವಾಗಿ ಈಗಲೂ ಈ ಕೆಳಗಿನಂತೆ ಕೇಳಿ ಬರುತ್ತದೆ. "ಕುಮಾರಸ್ವಾಮಿಯ ವರವು, ದಿನಕ್ಕೊಂದು ಸರುವು" ಎಂಬ ಆಡುಭಾಷೆಯಿಂದ ಸಂಡೂರು ಸುತ್ತಮುತ್ತ ಈ ಹಿಂದೆ ಸುರಿಯುತ್ತಿದ್ದ ಮಳೆ ಹಾಗೂ ನಿಸರ್ಗದ ಸ್ವರೂಪವನ್ನು ದೃಢೀಕರಿಸುತ್ತದೆ. ಇಲ್ಲಿಯತನಕ ಈ ಭಾಗದಲ್ಲಿದ್ದ ಸಸ್ಯಸಂಪತ್ತಿನ ವಿವರಗಳನ್ನಾಗಲೀ ಇಲ್ಲವೇ ಜೀವ ವೈವಿಧ್ಯತೆಗಳ ಬಗ್ಗೆ ಯಾವುದೇ ಸಂಶೋಧನೆಗಳಾಗಲೀ ಅಥವಾ ಸರಿಯಾದ ದಾಖಲೆಗಳಿಲ್ಲದ ಕಾರಣ ಜಿಲ್ಲೆಯಲ್ಲಿ ಕಂಡುಬರುತ್ತಿರುವ ಅವೈಜ್ಞಾನಿಕ ಗಣಿಗಾರಿಕೆಗೆ ನಮ್ಮ ಘನ ಸರ್ಕಾರಗಳು ಅನುಸರಿಸುತ್ತಿರುವ ಜನವಿರೋಧಿ ನೀತಿಗಳಿಗೆ ಮುಖ್ಯ ಕಾರಣವಾಗಿದೆ. ಬಳ್ಳಾರಿ ಜಿಲ್ಲೆಯ ಪೂರ್ವ ತಾಲೂಕುಗಳಾದ ಸಂಡೂರು, ಹೊಸಪೇಟೆ ಹಾಗೂ ಬಳ್ಳಾರಿ ತಾಲೂಕುಗಳಲ್ಲಿ ಕಂಡುಬರುತ್ತಿರುವ ಗಣಿಗಾರಿಕೆಯ ಪ್ರಮಾಣವು ಶೇಕಡ ೭೦ಕ್ಕಿಂತಲೂ ಹೆಚ್ಚು ಅರಣ್ಯ ಪ್ರದೇಶಗಳಲ್ಲಿ ಹಲವಾರು ಗಣಿ ಸಂಸ್ಥೆಗಳು ತಮ್ಮ ಉತ್ಪಾದನ ಚಟುವಟಿಕೆಗಳನ್ನು ಪ್ರಾರಂಭಿಸಿವೆ. ಇದರಿಂದಾಗಿ ಬಳ್ಳಾರಿ

ಜಿಲ್ಲೆಯ ಒಟ್ಟು ಅರಣ್ಯ ಪ್ರದೇಶವು ೯೭೦೧೭ ಹೆಕ್ಟೇರ್ ಇದ್ದು, ಅದರಲ್ಲಿ ಸಂಡೂರು ತಾಲೂಕಿನ ವ್ಯಾಪ್ತಿಯಲ್ಲಿ ೨೪೧೧೮ ಹೆಕ್ಟೇರ್‌ಗಳಷ್ಟಿರುವ ದಟ್ಟವಾದ ಅರಣ್ಯ ಪ್ರದೇಶವು ಗಣಿಗಾರಿಕೆಯಿಂದಾಗಿ ಶೇಕಡ ಐವತ್ತಕ್ಕಿಂತಲೂ ಅಧಿಕ ಪ್ರಮಾಣದ ಅರಣ್ಯ ಪ್ರಧೇಶವು ನಾಶಗೊಂಡಿರುವುದರಿಂದ ಜಿಲ್ಲೆಯಲ್ಲಿ ಸರಾಸರಿ ಮಳೆಯ ಪ್ರಮಾಣವು ಕುಂಠಿತಗೊಂಡಿರುವುದನ್ನು ಕಳೆದ ೧೦ ವರ್ಷಗಳ ದಾಖಲೆಗಳಿಂದ ತಿಳಿಯಬಹುದು.

**ಕೋಷ್ಟಕ ೪.೧ : ಸರಾಸರಿ ಮಳೆಯ ಪ್ರಮಾಣ**

| ಕ್ರ.ಸಂ. | ತಾಲೂಕಿನ ಹೆಸರು | ೧೯೯೨ | ೧೯೯೫ | ೧೯೯೮ | ೨೦೦೦ | ೨೦೦೩ |
|---|---|---|---|---|---|---|
| ೧. | ಬಳ್ಳಾರಿ | ೭೨೧.೦ | ೪೨೯.೦ | ೫೭೧.೦ | ೩೬೧.೪ | ೨೫೪.೨ |
| ೨. | ಹೊಸಪೇಟೆ | ೧೦೪೨.೧ | ೫೭೩.೧ | ೮೪೫.೦ | ೬೭೨.೪ | ೬೬೭.೧ |
| ೩. | ಸಂಡೂರು | ೯೦೬.೦ | ೬೦೫.೯ | ೭೪೭.೬ | ೮೧೨.೧ | ೪೪೩.೮ |
| ೪. | ಹಡಗಲಿ | ೫೩೮.೦ | ೬೫೪.೩ | ೬೦೮.೮ | ೮೪೯.೪ | ೩೬೬.೭ |
| ೫. | ಹ.ಬೊ.ಹಳ್ಳಿ | ೫೨೯.೩ | ೫೦೦.೭ | ೫೬೨.೦ | ೪೬೨.೧ | ೪೦೨.೨ |
| ೬. | ಕೂಡ್ಲಿಗಿ | ೪೮೯.೩ | ೫೦೬.೫ | ೮೩೪.೨ | ೫೭೯.೨ | ೩೬೮.೮ |
| ೭. | ಶಿರುಗುಪ್ಪ | ೬೩೭.೨ | ೪೮೫.೯ | ೯೩೨.೨ | ೬೪೫.೪ | ೩೭೫.೦ |

ಮೂಲ : ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ಸಂಗ್ರಹ ೨೦೦೦-೦೩

ಈ ಮೇಲಿನ ೪.೧ರ ಕೋಷ್ಟಕವು ಜಿಲ್ಲೆಯಲ್ಲಿ ಬೀಳುತ್ತಿರುವ ಸರಾಸರಿ ಮಳೆಯ ಪ್ರಮಾಣವನ್ನು ತಿಳಿಸಿಕೊಡುತ್ತದೆ. ಮುಖ್ಯವಾಗಿ ಗಣಿಗಾರಿಕೆಯ ಚಟುವಟಿಕೆಗಳು ನಡೆಯುತ್ತಿರುವ ಬಳ್ಳಾರಿ, ಹೊಸಪೇಟೆ ಹಾಗೂ ಸಂಡೂರು ತಾಲೂಕುಗಳ ವ್ಯಾಪ್ತಿಯಲ್ಲಿ ಕಳೆದ ೧೯೯೨ರಲ್ಲಿ ಕಂಡುಬರುತ್ತಿದ್ದ ಮಳೆಯ ಪ್ರಮಾಣವು ಅನುಕ್ರಮವಾಗಿ ೭೨೧.೦ ಮಿ.ಮೀಟರ್, ೧೦೪೨.೧ ಮಿ.ಮೀ. ಹಾಗೂ ೯೦೬.೪ ಮಿ.ಮೀ.ಗಳಿದದ್ದೂ ೨೦೦೩ರ ಹೊತ್ತಿಗೆ ಮಳೆಯ ಪ್ರಮಾಣ ೨೫೪.೨, ೬೬೭.೧ ಹಾಗೂ ೪೪೩.೮ರಷ್ಟು ಕಡಿಮೆಯಾಗಿರುವುದನ್ನು ಕಾಣ ಬಹುದಾಗಿದೆ. ಆದರೆ ಗಣಿಗಾರಿಕೆ ಚಟುವಟಿಕೆಗಳಿಲ್ಲದ ಹಡಗಲಿ, ಹಗರಿಬೊಮ್ಮನಹಳ್ಳಿ ಕೂಡ್ಲಿಗಿ ಮತ್ತು ಶಿರಗುಪ್ಪ ತಾಲೂಕುಗಳ ೧೯೯೨ ರಿಂದ ಸರಾಸರಿ ಮಳೆಯ ಪ್ರಮಾಣವು ಅನುಕ್ರಮವಾಗಿ ೫೩೮.೦, ೫೨೯.೩, ೪೮೯.೩ ಹಾಗೂ ೬೩೭.೨ರಷ್ಟು ಇದ್ದದ್ದು, ಕಾಲಕ್ರಮೇಣ ಹೆಚ್ಚಾಗುತ್ತಾ ೨೦೦೩ರ ಹೊತ್ತಿಗೆ ಅನುಕ್ರಮವಾಗಿ ೩೬೬.೭, ೪೦೨.೨ ಹಾಗೂ ೩೬೮.೮ ಮಿ.ಮೀ ಕುಂಠಿತಗೊಂಡಿರುವುದು ತಿಳಿದುಬರುತ್ತದೆ. ಇಂತಹ ಕಾರ್ಯವೈಖರಿಯಿಂದ

ಮನದಟ್ಟಾಗುವುದೇನೆಂದರೆ ಗಣಿಗಾರಿಕೆ ನಡೆಯುತ್ತಿರುವ ತಾಲೂಕುಗಳಲ್ಲಿ ಕಂಡುಬರುತ್ತಿರುವ ಅರಣ್ಯ ಸಂಪತ್ತಿನ ನಾಶದಿಂದಾಗಿ ಸರಾಸರಿ ಮಳೆಯ ಪ್ರಮಾಣ ಕಡಿಮೆಯಾಗಿದೆ. ಈ ಹಿನ್ನೆಲೆಯಲ್ಲಿ ಪ್ರಕೃತಿಯಲ್ಲಿ ಕಂಡುಬರುತ್ತಿರುವ ವೈಪರಿತ್ಯಗಳಿಂದಾಗಿ ಜಿಲ್ಲೆಯ ಸರಾಸರಿ ಮಳೆಯ ಪ್ರಮಾಣದಲ್ಲಿ ವ್ಯತ್ಯಾಸವನ್ನು ಸ್ಪಷ್ಟವಾಗಿ ಗುರುತಿಸಬಹುದು. ಇದರಿಂದಾಗಿ ಜಿಲ್ಲೆಯಲ್ಲಿ ಕುಡಿಯುವ ನೀರಿನ ಸಮಸ್ಯೆ ಬೃಹದಾಕಾರವಾಗಿ ತಲೆದೂರಿದೆ. ಜಿಲ್ಲೆಯಲ್ಲಿದ್ದ ನೂರಾರು ಕೆರೆ, ಬಾವಿಗಳು ಈಗಾಗಲೇ ಬತ್ತಿಹೋಗಿವೆ. ಜಿಲ್ಲೆಯ ಎಲ್ಲಾ ತಾಲೂಕುಗಳ ಸ್ಥಳೀಯ ಆಡಳಿತ ವ್ಯವಸ್ಥೆಗಳು ತುಂಗಭದ್ರಾ ಆಣೆಕಟ್ಟಿನಿಂದ ಕುಡಿಯುವ ನೀರಿಗಾಗಿ ಬೇಡಿಕೆಯನ್ನು ಸರ್ಕಾರದ ಮುಂದಿಟ್ಟಿವೆ. ಅಲ್ಲದೆ ತಮ್ಮ ಬೇಡಿಕೆಯ ಈಡೇರಿಕೆಗಾಗಿ ಧರಣಿ, ಸತ್ಯಾಗ್ರಹ, ಘೇರಾವ್ ರೂಪಗಳಲ್ಲಿ ಆಂದೋಲನವನ್ನೇ ಆರಂಭಿಸಿವೆ.

ಇಂತಹ ಪ್ರಕರಣಗಳನ್ನು ಗಂಭೀರವಾಗಿ ಪರಿಗಣಿಸುವುದಾದರೆ ಅನೇಕ ಪರಿಸರ ಸಂಬಂಧಿ ಆಂಧೋಲನಗಳಿಗೆ ಸ್ಫೂರ್ತಿ ನೀಡಿದ್ದ ಜಾಗತೀಕ ಪರಿಸರವಾದಿ 'ಸೀಟ್ಲ್' ಅವರ ಒಂದು ಪತ್ರವನ್ನು ನೆನಪಿಸಿಕೊಳ್ಳುವುದು ಸೂಕ್ತವೆನಿಸುತ್ತದೆ. "ನಮಗೆ ಗೊತ್ತಿರುವಂತೆ ಈ ಭೂಮಿ ಮನುಷ್ಯನಿಗೆ ಸೇರಿದ್ದಲ್ಲ. ಆದರೆ ಮನುಷ್ಯ ಭೂಮಿಗೆ ಸೇರಿದವನು. ಮಾನವ ಕುಟಂಬಗಳನ್ನು ಒಂದು ಗುಡಿಸುವ ರಕ್ತದಂತೆ, ಪ್ರಕೃತಿಯಲ್ಲಿಯು ಈ ರೀತಿಯಾದ ಸಂಬಂಧವುಂಟು, ಹೀಗಾಗಿ ಭೂಮಿಯ ಮೇಲಾಗುವ ಆಘಾತ, ಭೂಮಿಯ ಮಕ್ಕಳ ಮೇಲು ಆಗುತ್ತದೆ. ಬದುಕಿನ ದಾಳಗಳನ್ನು ಹೆಣೆದವ ಮನುಷ್ಯ ಅಲ್ಲ. ಆತ ಕೇವಲ ಒಂದು ಎಳೆ ಮಾತ್ರ. ಆತ ಪ್ರಕೃತಿಯ ಮೇಲೆ ಮಾಡುವ ಪ್ರಯೋಗಗಳೆಲ್ಲವೂ ತನ್ನ ಮೇಲೆಯೇ ಮಾಡಿಕೊಂಡ ಕ್ರಿಯೆಯಾಗಿರುತ್ತದೆ"[೧] ಎಂಬ ನುಡಿಗಳು ಜಿಲ್ಲೆಯಲ್ಲಿ ಸಾಗರೋಪಾದಿಯಲ್ಲಿ ನಡೆದಿರುವ ಗಣಿಗಾರಿಕೆಯ ಚಟುವಟಿಕೆಗಳಿಂದಾಗುವ ದುಷ್ಪಾರಿಣಾಮಗಳಿಗೆ ಸಾಕ್ಷಿಯಾಗಿ ನಿಲ್ಲುತ್ತದೆ.

### ವಾಯುಮಾಲಿನ್ಯ ಮತ್ತು ಶಬ್ದಮಾಲಿನ್ಯ

ಜಾಗತೀಕರಣದ ಸಂದರ್ಭದಲ್ಲಿ ವಿಶ್ವಮಾರುಕಟ್ಟೆ ಹಾಗೂ ಮುಕ್ತ ವ್ಯಾಪಾರ ನೀತಿಯಿಂದಾಗಿ ಉತ್ಪಾದಕರಲ್ಲಿ ಲಾಭದ ಮಹತ್ವಾಕಾಂಕ್ಷೆ ವಿಸ್ತೃತಗೊಂಡಿದೆ. ಇದಕ್ಕೆಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯಲ್ಲಿ ಬಳಸುತ್ತಿರುವ ಕ್ರಷರ್ ಯಂತ್ರಗಳು, ಬ್ಲಾಸ್ಟಿಂಗ್ ಹಾಗೂ ಬೃಹತ್ ಯಂತ್ರಗಳಿಂದಾಗಿ ಜಿಲ್ಲೆಯ ಪೂರ್ವ ತಾಲೂಕುಗಳಲ್ಲಿ ವಾಯುಮಾಲಿನ್ಯದ ಪ್ರಮಾಣ ಹೆಚ್ಚಾಗಿದೆ. ಜಿಲ್ಲೆಯಾದ್ಯಂತ ಲಭ್ಯವಿರುವ ರಸ್ತೆ ಹಾಗೂ ಸೇತುವೆಗಳ ಸಾಮರ್ಥ್ಯವು ಸುಮಾರು ೧೦ ಟನ್ನಗಳಷ್ಟಿದ್ದರೆ, ಈ ಭಾಗದಲ್ಲಿ ೩೦ ರಿಂದ ೪೦ ಟನ್ನಗಳಷ್ಟು ಭಾರ ಹೊತ್ತೊಯ್ಯುವ ವಾಹನಗಳ ಸಂಚಾರ ಯಥೇಚ್ಛವಾಗಿನಡೆದಿದೆ. ರಸ್ತೆಗಳೆಲ್ಲಾ ಹಾಳಾಗಿವೆ. ನೂರಾರು ಸೇತುವೆಗಳು ದುರ್ಬಲಗೊಂಡು, ಹೊಸದಾದ ಅಡಿಪಾಯವನ್ನು ಕಂಡುಕೊಳ್ಳುಲು ತಡಕಾಡುತ್ತಿವೆ. ಹೀಗೆ ಮಿತಿಮೀರಿದ ವಾಹನ ಸಂಚಾರ ಹಾಗೂ ಯಂತ್ರೋಪಕರಣಗಳ ಬಳಕೆಯಿಂದಾಗಿ ಜಿಲ್ಲೆಯಲ್ಲಿ ತಲೆದೂರಿರುವ ವಾಯುಮಾಲಿನ್ಯದ ಪ್ರಮಾಣವನ್ನು ೪.೨ರ ಕೋಷ್ಟಕದಿಂದ ತಿಳಿಯಬಹುದು.

ಕೋಷ್ಠಕ ೪.೨ : ವಾಯು ಮಾಲಿನ್ಯದ ಪರೀಕ್ಷಾ ವರದಿ ೨೦೦೩-೦೪

| ಕ್ರ. ಸಂ. | ತಾಲೂಕುಗಳ ಹೆಸರು | ಪರೀಕ್ಷೆಗೆ ಒಳಪಟ್ಟ ಪ್ರದೇಶಗಳು | ಸಾಮಾನ್ಯ ಮಾಲಿನ್ಯದ ಪ್ರಮಾಣ | ಲಭ್ಯವಿದ್ದ ಮಾಲಿನ್ಯದ ಪ್ರಮಾಣ |
|---|---|---|---|---|
| ೧. | ಸಂಡೂರು | ಯಶವಂತನಗರ | ೨೦೦ ಕ್ಯೂ.ಬಿಕ್ಸ್ | ೨೦೦೦ ಕ್ಯೂ ಬಿಕ್ಸ್ ಗಳಿಗಿಂತ ಹೆಚ್ಚು |
| | | ಭುಜಂಗ ನಗರ | ೨೦೦ | ೧೬೦೦ ಕ್ಯೂ ಹೆಚ್ಚು |
| | | ತೋರಣಗಲ್ಲು | ೨೦೦ | ೧೮೦೦ ಕ್ಯೂ ಹೆಚ್ಚು |
| ೨. | ಹೊಸಪೇಟೆ | ವಿಜಯನಗರ | ೨೦೦ | ೧೬೦೦ ಕ್ಯೂ ಹೆಚ್ಚು |
| | | ಕಾಲೇಜ್ ರೋಡ್ | | |
| | | ಬಳ್ಳಾರಿ ರೋಡ್ | ೨೦೦ | ೨೨೦೦ ಕ್ಯೂ ಹೆಚ್ಚು |
| | | ಸರ್ಕಲ್ | | |
| | | ಟಿ.ಬಿ.ಡ್ಯಾಂ ರೋಡ್ | ೨೦೦ | ೧೮೦೦ ಕ್ಯೂ ಹೆಚ್ಚು |

ಮೂಲ : ಬಳ್ಳಾರಿ ಪರಿಸರ ಇಲಾಖೆಯ ಮಾಹಿತಿ, ೨೦೦೩-೦೪

೪.೨ರ ಕೋಷ್ಠಕವು ಬಳ್ಳಾರಿ ಜಿಲ್ಲೆಯ ಪರಿಸರ ಇಲಾಖೆಯು ಸಂಡೂರು ಹಾಗೂ ಹೊಸಪೇಟೆ ತಾಲೂಕುಗಳಲ್ಲಿ ಕೈಗೊಂಡ ವಾಯುಮಾಲಿನ್ಯದ ಅಂಕಿ-ಅಂಶಗಳನ್ನು ತೋರಿಸುತ್ತದೆ. ಪರಿಸರ ಇಲಾಖೆಯ ಅಧಿಕಾರಿಗಳ ಪ್ರಕಾರ ಮನುಷ್ಯನ ಆರೋಗ್ಯಕ್ಕೆ ಅಥವಾ ಸಮಾಜದ ಸ್ವಾಸ್ಥ್ಯಕ್ಕೆ ಅಪಾಯಕಾರಿಯಲ್ಲದ ಹಾಗೂ ಸಹಜವಾಗಿ ಕಂಡುಬರುವ ವಾಯುಮಾಲಿನ್ಯದ ಪ್ರಮಾಣ ೨೦೦ ಕ್ಯೂಬಿಕ್ಸ್‌ನಷ್ಟು ಮಾತ್ರ ಇರಬೇಕು. ಆದರೆ ಸಂಡೂರು ಮತ್ತು ಹೊಸಪೇಟೆ ತಾಲೂಕುಗಳಲ್ಲಿ ಕೈಗೊಂಡ ಕೆಲವು ಮೇಲ್ಕಾಣಿಸಿದ ಪ್ರದೇಶಗಳಲ್ಲಿನ ಫಲಿತಾಂಶಗಳು ೧೨೦೦ ಕ್ಯೂಬಿಕ್ಸ್‌ಗಳಿಗಿಂತಲೂ ಹೆಚ್ಚಾಗಿರುವುದರಿಂದ ಈ ಭಾಗದ ಜನ ಜೀವನವು ತುಂಬಾ ಅಪಾಯಕಾರಿ ವಾತಾವರಣದಲ್ಲಿ ಬದುಕಬೇಕಾಗಿರುವದು ದುರ್ದೈವ ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ಹಾಗೆಯೇ ಜಿಲ್ಲೆಯ ಪ್ರತಿಯೊಂದು ಪ್ರದೇಶಗಳಲ್ಲಿನ ಮಾಲಿನ್ಯದ ಪ್ರಯೋಗ ಕೈಗೊಳ್ಳಲು ಇಲಾಖೆಗೆ ಯಂತ್ರೋಪಕರಣಗಳ ಮತ್ತು ಆರ್ಥಿಕ ಮುಗ್ಗಟ್ಟು ಬಹಳಷ್ಟು ಕಾಡುತ್ತಿದೆ ಎಂಬುದಾಗಿ ಅಧಿಕಾರಿಗಳು ತಿಳಿಸುತ್ತಾರೆ.

ಗಣಿಕೇಂದ್ರಿತ ತಾಲೂಕುಗಳಲ್ಲಿನ ಕಚ್ಚಾ ವಸ್ತುವನ್ನು ಸಿದ್ಧವಸ್ತುವನ್ನಾಗಿ ಪರಿವರ್ತಿಸಲು ಜಿಲ್ಲೆ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹಲವು ಬೃಹತ್ ಹಾಗೂ ಸಣ್ಣ ಪ್ರಮಾಣದ ಕಾರ್ಖಾನೆಗಳು ತಲೆ ಎತ್ತಿವೆ. ಅವುಗಳಲ್ಲಿ ಮುಖ್ಯವಾಗಿ ಪ್ರಮುಖ ಕೈಗಾರಿಕೆಗಳ ವಿವರ

**ಕೋಷ್ಟಕ ೪.೩ : ಜಿಲ್ಲೆಯಲ್ಲಿರುವ ಕೈಗಾರಿಕೆಗಳ ವಿವರ**

| ಕ್ರ.ಸಂ. | ಕೈಗಾರಿಕೆಗಳ ಹೆಸರು | ನೆಲೆಗೊಂಡ ಪ್ರದೇಶಗಳ ಹೆಸರು |
|---|---|---|
| ೧. | ಜಿಂದಾಲ್ ವಿಜಯನಗರ ಸ್ಟೀಲ್ ಲಿಮಿಟೆಡ್ | ತೋರಣಗಲ್ಲು(ಸಂಡೂರು) |
| ೨. | ಮುಕಂದ್ ಸ್ಟೀಲ್ ಲಿಮಿಟೆಡ್ | ತೋರಣಗಲ್ಲು (ಸಂಡೂರು) |
| ೩. | ಕಲ್ಯಾಣಿ ಸ್ಟೀಲ್ ಲಿಮಿಟೆಡ್ | ಹಿಟ್ನಾಳ್ (ಕೊಪ್ಪಳ) |
| ೪. | ಕಿರ್ಲೋಸ್ಕರ್ ಸ್ಟೀಲ್ ಲಿಮಿಟೆಡ್ | ಗಿಣಿಗೇರ (ಕೊಪ್ಪಳ) |
| ೫. | ಕರ್ನಾಟಕ ವಿದ್ಯುತ್ ಇಲಾಖೆಯ ಕಲ್ಲಿದ್ದಲು ಅಣುಸ್ಥಾವರ | ಕುಡಿತಿನಿ (ಬಳ್ಳಾರಿ) |
| ೬. | ಬಳ್ಳಾರಿ ಸ್ಟೀಲ್ ಲಿಮಿಟೆಡ್ | ಬೊಮ್ಮನಹಳ್ಳಿ (ಬಳ್ಳಾರಿ) |
| ೭. | ಅನೇಕ ಸ್ಪಾಂಜ್ ಐರನ್ ಓರ್ ಫ್ಯಾಕ್ಟರಿ ಹಾಗೂ ಕ್ರಷರ್ ಯಂತ್ರಗಳು | ಸಂಡೂರು, ಹೊಸಪೇಟೆ, ಬಳ್ಳಾರಿ ಸುತ್ತಮುತ್ತಲಿನ ಪ್ರದೇಶಗಳು |

**ಆಧಾರ :** ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯ ಗಣಿಗಾರಿಕೆ ಮತ್ತು ಜನಾಂದೋಲನಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮,

೪.೩ರ ಕೋಷ್ಟಕವು ಜಿಲ್ಲೆಯಲ್ಲಿ ಹೆಚ್ಚುತ್ತಿರುವ ಔದ್ಯಮೀಕರಣದ ನಿಮಿತ್ತ ಸ್ಥಾಪನೆಗೊಂಡಿರುವ ಕೈಗಾರಿಕೆಗಳ ಬೆಳವಣಿಗೆಯನ್ನು ತೋರಿಸುತ್ತದೆ. ಅವುಗಳ ಉತ್ಪಾದನೆಯಲ್ಲಿ ಕಂಡುಬರುವ ಹೊಗೆ, ಧೂಳು, ಸಾರಿಗೆ ಸಂಚಾರಗಳಿಂದಾಗಿ, ಜಿಲ್ಲೆಯಲ್ಲಿ ವಾಯುಮಾಲಿನ್ಯದ ಪ್ರಮಾಣವು ಅತ್ಯಾಧಿಕಗೊಳ್ಳಲು ಸಹಕಾರಿಯಾಗಿದೆ. ಕೈಗಾರಿಕೆಗಳಿಂದುಂಟಾಗುವ ಕಾರ್ಬನ್ ಡೈ ಆಕ್ಸೈಡ್, ಇಂಗಾಲದ ಡೈ ಆಕ್ಸೈಡ್, ಹಾಗೂ ತಾಪಮಾನದ ಏರಿಳಿಕೆ ಇತ್ಯಾದಿಗಳಿಂದಾಗಿ ಜಿಲ್ಲೆಯ ಸರಾಸರಿ ವಾಯುಮಾಲಿನ್ಯ ಪ್ರಮಾಣ ಹೆಚ್ಚಾಗುತ್ತಾ, ಜಿಲ್ಲೆಯಲ್ಲಿ ನೂರಾರು ರೋಗಗಳ ಸೃಷ್ಟಿಗೆ ಎಡೆಮಾಡಿಕೊಟ್ಟಿವೆ.

**ಶಬ್ದ ಮಾಲಿನ್ಯ**

ಜಿಲ್ಲೆಯಲ್ಲಿರುವ ಗಣಿಗಾರಿಕೆ, ಯಂತ್ರೋಪಕರಣಗಳ ಬಳಕೆ, ಭಾರಿ ಭೂ ಸ್ಫೋಟಕಗಳ ಬಳಕೆ ಹಾಗೂ ಮಿತಿಮೀರಿದ ಸಂಚಾರ ವ್ಯವಸ್ಥೆಯಿಂದಾಗಿ ಜಿಲ್ಲೆಯಲ್ಲಿ ಶಬ್ದಮಾಲಿನ್ಯದ ಪ್ರಮಾಣ ಅಧಿಕವಾಗುತ್ತಿದೆ. ಈ ಭಾಗದಲ್ಲಿ ಗಣಿ ಅದಿರನ್ನು ಸಾಗಿಸುವ ವಾಹನಗಳಲ್ಲಿ ಹೆಚ್ಚಾಗಿ ಅತ್ಯಧಿಕ ಶಬ್ದ ಮಾಡುವ ಹಾರ್ನ್‌ಗಳನ್ನು ಬಳಸಲಾಗುತ್ತಿದೆ. ಇಂತಹ ಕ್ರಮಗಳಿಗೆ ಜಿಲ್ಲೆಯ ಆಡಳಿತ ವರ್ಗವು ಯಾವುದೇ ಕ್ರಮಗಳನ್ನು ಕೈಗೊಳ್ಳದೇ ಜಾಣ, ಕಿವುಡು ಹಾಗೂ ಕುರುಡುತನ ಪ್ರದರ್ಶಿಸುತ್ತದೆ. ಇಂತಹ ಸನ್ನಿವೇಶವು ಈ ಭಾಗದಲ್ಲಿ ಪರಿಸರ ಮಾಲಿನ್ಯದ ಪ್ರಮಾಣವು ವೃದ್ಧಿಗೊಳ್ಳಲು ಪ್ರೇರಕವಾಗಿದೆ.

ಜಿಲ್ಲೆಯಲ್ಲಿರುವ ಸರಾಸರಿ ನೈಜ ಶಬ್ದಮಾಲಿನ್ಯ ಹಾಗೂ ವಾಯುಮಾಲಿನ್ಯದ ಪ್ರಮಾಣವನ್ನು ಈವರೆಗೂ ಬಹಿರಂಗ ಪಡಿಸುವುದು ಸಾಧ್ಯವಾಗಿಲ್ಲ. ಏಕೆಂದರೆ, ಸರ್ಕಾರ, ಕೈಗಾರಿಕೋದ್ಯಮಿಗಳು ಹಾಗೂ ರಾಜಕೀಯ ಒತ್ತಡಗಳಿಂದಾಗಿ ಮಾಲಿನ್ಯದ ನೈಜ ಪ್ರಮಾಣದ ದಾಖಲೆಗಳು ದೊರೆಯುವುದು ಕಷ್ಟಕರವಾಗಿವೆ. ಇಂತಹ ಭಯಂಕರ ಮಾಲಿನ್ಯದಿಂದಾಗಿ ಜಿಲ್ಲೆಯ ಗಣಿಗಾರಿಕೆ ಹಾಗೂ ಸುತ್ತಲಿನ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನರಿಗೆ ಶ್ವಾಸ ಸಂಬಂಧಿ ರೋಗಗಳು, ಆಸ್ತಮ, ಕ್ಷಯ, ರಕ್ತಹೀನತೆ, ಮಲೇರಿಯಾ, ಕ್ಯಾನ್ಸರ್, ಕರಳುಬೇನೆ, ಕಿವುಡುತನ, ಅತಿಸಾರ, ಕಾಮಲೆ, ಕಣ್ಣು ಬೇನೆ ಹಾಗೂ ಹೃದಯ ಸಂಬಂಧಿ ಪ್ರಕರಣಗಳು ಹೆಚ್ಚಾಗಿ ಕಂಡುಬರುತ್ತಿದೆ.

ಜಿಲ್ಲೆಯಲ್ಲಿ ಕಂಡುಬರುತ್ತಿರುವ ಮಿತಿಮೀರಿದ ಗಣಿಗಾರಿಕೆಯಿಂದ ಪರಿಸರ ಮಾಲಿನ್ಯ, ವಾಯುಮಾಲಿನ್ಯ ಶಬ್ದಮಾಲಿನ್ಯಗಳಿಂದಾಗಿ ಬಳ್ಳಾರಿ ಜಿಲ್ಲೆಯ ಮೂಲ ಕಸುಬಾಗಿದ್ದ ಕೃಷಿ ಚಟುವಟಿಕೆಗಳ ಮೇಲೆ ಅಪಾಯಕಾರಿ ಪರಿಣಾಮಗಳನ್ನುಂಟುಮಾಡಿದೆ. ಈಗಾಗಲೇ ಜಿಲ್ಲೆಯಲ್ಲಿ ೬೦ಕ್ಕೂ ಹೆಚ್ಚು ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರು ಉತ್ಪಾದನಾ ಚಟುವಟಿಕೆಗಳು ಜೊತೆಗೆ ಸಾವಿರಾರು ಎಕರೆ ಕೃಷಿ ಪ್ರದೇಶಗಳಲ್ಲಿ ಅಡಗಿರುವ ಕಬ್ಬಿಣದ ಕಚ್ಚಾ ಅದಿರು ಹುಡುಕಾಟಕ್ಕಾಗಿಗಣಿಗಾರಿಕೆಯ ಚಟುವಟಿಕೆಗಳು ವೃದ್ಧಿಗೊಂಡಿವೆ. ಜಿಲ್ಲೆಯ ಕೃಷಿ ಇಲಾಖೆಯ ಅಂದಾಜಿನ ಪ್ರಕಾರ ಬಳ್ಳಾರಿ, ಸಂಡೂರು ಹಾಗೂ ಹೊಸಪೇಟೆ ವ್ಯಾಪ್ತಿಯಲ್ಲಿ ಸುಮಾರು ೫೦೦೦ ಹೆಕ್ಟೇರ್‌ಗಳಿಗಿಂತಲೂ ಹೆಚ್ಚು ಕೃಷಿ ಯೋಗ್ಯ ಭೂ ಪ್ರದೇಶಗಳಲ್ಲಿ ಗಣಿಗಾರಿಕೆಯ ಚಟುವಟಿಕೆಗಳು ವಿಸ್ತೃತಗೊಂಡಿವೆ ಎಂಬುದು ದಾಖಲೆಗಳಿಂದ ಸಾಬೀತಾಗುತ್ತದೆ. ಇಂತಹ ಚಟುವಟಿಕೆಯ ಸದುಪಯೋಗಕ್ಕಾಗಿ ಜಿಲ್ಲೆಯಾದ್ಯಂತ ಬೃಹತ್ ಕೈಗಾರಿಕೆಗಳ ಸ್ಥಾಪನೆಯ ಜೊತೆಗೆ ಚಿಕ್ಕ, ಚಿಕ್ಕ ಮೆದು ಕಬ್ಬಿಣ ಉತ್ಪಾದನಾ ಘಟಕಗಳ ಅಸ್ಥಿತ್ವ ಹಾಗೂ ನೂರಾರು ಕಲ್ಲು ಕೊರೆಯುವ ಕ್ರಷರ್ಸ್ ಘಟಕಗಳ ಸ್ಥಾಪನೆಯಿಂದಾಗಿ ಜಿಲ್ಲೆಯಾದ್ಯಂತ ಮಿತಿ ಮೀರಿದ ಧೂಳಿನ ಸಮಸ್ಯೆ ತಲೆದೂರಿದೆ. ಇಂತಹ ವಾತಾವರಣವು ಕೃಷಿ ಚಟುವಟಿಕೆಯಲ್ಲಿ "ಧಾನ್ಯ ಕ್ಷಾಮ" ಸನ್ನಿವೇಶಕ್ಕೆ ಕಾರಣವಾಗುತ್ತಿದೆ. ನೂರಾರು ತೋಟಗಾರಿಕೆ ಬೆಳೆಗಳ ಜೊತೆಗೆ ಅಲ್ಪಕಾಲಿಕ ಬೆಳೆಗಳ ಉತ್ಪಾದನೆಯಲ್ಲಿ ಕಡಿಮೆ ಇಳುವರಿಯ ಪ್ರಕರಣಗಳು ಪತ್ತೆಯಾಗಿವೆ. ಅದನ್ನು ೪.೪ರ ಕೋಷ್ಟಕದಿಂದ ತಿಳಿಯಬಹುದು.

ಮುಂದಿನ ೪.೪ರ ಕೋಷ್ಟಕವನ್ನು ಪರಿಶೀಲಿಸಿದಾಗ ಜಿಲ್ಲೆಯಲ್ಲಿ ಗಣಿಗಾರಿಕೆ ನಡೆಯುತ್ತಿರುವ ಬಳ್ಳಾರಿ, ಹೊಸಪೇಟೆ ಹಾಗೂ ಸಂಡೂರು ತಾಲೂಕುಗಳಲ್ಲಿ ಕೃಷಿ ಬೆಳೆಗಳ ಪ್ರಮಾಣವು ೧೯೯೬-೯೭ರ ಸಾಲಿನಲ್ಲಿ ಉತ್ಪಾದನೆಯಾಗಿದ್ದಕ್ಕಿಂತ ಕಡಿಮೆ ಪ್ರಮಾಣದಲ್ಲಿ ೨೦೦೭-೦೩ನೇ ಸಾಲಿನ ಸರಾಸರಿ ವಾರ್ಷಿಕ ಕೃಷಿ ಬೆಳೆಗಳ ಉತ್ಪಾದನೆಯು ಕಡಿಮೆಯಾಗಿರುವುದು ಭವಿಷ್ಯದ ದೃಷ್ಟಿಯಿಂದ ತುಂಬಾ

## ಕೋಷ್ಟಕ ೪.೪
## ೨೦೦೨-೦೩ನೇ ಸಾಲಿನ ಕೃಷಿ ಬೆಳೆಗಳ ಇಳುವರಿಯ ಪ್ರಮಾಣ

| ಕ್ರ.ಸಂ. | ಧಾನ್ಯಗಳ ಹೆಸರು | ಬಳ್ಳಾರಿ | ಹೊಸಪೇಟೆ | ಸಂಡೂರು |
|---|---|---|---|---|
| ೧. | ಶೇಂಗಾ | ೧೭೯(೧,೨೦೭) | ೪೬೦(೧,೧೪೨) | ೫೪(೧,೯೯೧) ಕಿ.ಗ್ರಾಂ |
| ೨. | ಗೋಧಿ | ೨೫೬೪(೧೪೧೧೭) | ೪೨೬೧(೩೭೪೩) | ೨೯೮೮(೪೦೩೨) |
| ೩. | ಸಜ್ಜೆ | ೮೮೮(೧೫೩೭) | ೫೯೬(೮೦೩) | ೮೯೬(೧೨೧೧) |
| ೪. | ನವಣೆ | ೩೩೭(೧೦೩) | ೧೫೪(೪೪೨) | ೨೬೨(೫೧೦) |
| ೫. | ಹುರಳಿ | ೧೫೬(ದಾಖಲಾಗಿಲ್ಲ) | ೧೯೦(೬೭೮) | ೧೮೪(೧೦೯೩) |
| ೬. | ಸೂರ್ಯಕಾಂತಿ | ೫೮೦(೭೧೬) | ೫೪೬(೨೩೦) | ೭೮೦(೩೫೩) |
| ೭. | ಹೆಸರು ಕಾಳು | ೧೩೭(೨೫೧) | ೧೩೨ ದಾಖಲಾಗಿಲ್ಲ | .... |

* ೨೦೦೨-೦೩ನೇ ಸಾಲಿನಲ್ಲಿ ಪ್ರತಿ ಹೆಕ್ಟೇರ್‌ಗೆ ಕೃಷಿಯಿಂದ ಬಂದ ಇಳುವರಿ ಕಿ.ಗ್ರಾಂ.ಗಳಲ್ಲಿ
* ಆವರಣದಲ್ಲಿರುವುದು ೧೯೯೬-೯೭ರಲ್ಲಿ ಕಂಡುಬಂದಿದ್ದ ಕೃಷಿ ಇಳುವರಿಯ ವಿವರ

ಅಪಾಯಕಾರಿ ವಿಧಾನವೆಂದೇ ಹೇಳಬೇಕಾಗಿದೆ. ಏಕೆಂದರೆ ಈ ಮೇಲಿನ ಕೃಷಿ ಬೆಳೆಗಳ ಇಳುವರಿಯಲ್ಲಿ ಕಂಡುಬರುತ್ತಿರುವ, ಉತ್ಪಾದನೆಯ ಪ್ರಮಾಣಗಳ ಅಂತರವು ಮುಂದಿನ ದಿನಗಳಲ್ಲಿ ಕೃಷಿ ಬೆಳೆಗಳ ಉತ್ಪಾದನೆಯಲ್ಲಿ ಧಾನ್ಯ ಕ್ಷಾಮ ಭೀತಿ ಈ ಭಾಗದಲ್ಲಿ ತಲೆದೂರಲಿದೆ ಎಂಬ ಕೃಷಿ ವಿಜ್ಞಾನಿಗಳ ವಿಚಾರಗಳು ಕಳವಳಕಾರಿ ಸಂಗತಿಯೆಂದೇ ಹೇಳಬಹುದು. ಇಂತಹ ಸನ್ನಿವೇಶಕ್ಕೆ ಜಿಲ್ಲೆಯ ಕೃಷಿ ತಜ್ಞರು ಈ ಕೆಳಗಿನ ಕಾರಣಗಳನ್ನು ನೀಡುತ್ತಾರೆ.

### ೧. ಧೂಳಿನ ಸಮಸ್ಯೆ

ಬಳ್ಳಾರಿ ಜಿಲ್ಲೆಯಲ್ಲಿನ ತೀವ್ರ ಗಣಿಗಾರಿಕೆಯಿಂದಾಗಿ ಕಾರ್ಖಾನೆಗಳ ಸ್ಥಾಪನೆ, ಕ್ರಷರ್ ಯಂತ್ರಗಳ ಬಳಕೆ, ಮಿತಿ ಮೀರಿದ ವಾಹನ ಸಂಚಾರಗಳಿಂದಾಗಿ ಈ ಭಾಗದಲ್ಲಿ ದೂಳಿನ ಸಮಸ್ಯೆ ವಿಪರೀತವಾಗಿ ಹೆಚ್ಚಾಗುತ್ತಿದೆ. ಇಂಥಹ ಮಿತಿ ಮೀರಿದ ಧೂಳು ಕೃಷಿ ಹಾಗೂ ತೋಟಗಾರಿಕೆ ಬೆಳೆಗಳ ಮೇಲೆ ಆವರಿಸಿಕೊಳ್ಳುವುದರಿಂದ ಬೆಳೆಗಳಲ್ಲಿ ದ್ಯುತಿಸಂಶ್ಲೇಷಣೆ(ಪರಾಗಸ್ಪರ್ಶ)ಕ್ರಿಯೆ ನಡೆಯಲು ಸಾಧ್ಯವಾಗುವುದಿಲ್ಲ. ಇದರಿಂದ ಬೆಳೆಗಳು ಪರಿಪೂರ್ಣಗೊಳ್ಳದೇ ಇರುವುದುರಿಂದ ಅವುಗಳ ಇಳುವರಿ ಕುಂಠಿತಗೊಳ್ಳುತ್ತದೆ. ಜಿಲ್ಲೆಯ ಹಲವಾರು ತೋಟಗಾರಿಕೆ ಬೆಳೆಗಳಾದ ಮಾವು, ತೆಂಗು, ಬಾಳೆ, ಹುಣಸೆ ಬೆಳೆಗಳು ಧೂಳಿನಿಂದಾಗಿ ಕಡಿಮೆ ಪ್ರಮಾಣದ ಕಾಯಿಗಳನ್ನು ಬಿಡುತ್ತಿವೆ. ಇದಕ್ಕೆ ಕಾರಣವೇನೆಂದರೆ ಸಸ್ಯವರ್ಗಗಳಲ್ಲಿ ಜರುಗುವ ದ್ಯುತಿಸಂಶ್ಲೇಷಣಾ ಕ್ರಿಯೆಗೆ ಅವಶ್ಯಕವಾದ ಎಲೆಗಳಲ್ಲಿರುವ ರಂಧ್ರಗಳು ಧೂಳಿನಿಂದ ಮುಚ್ಚಿ ಹೋಗುವುದರಿಂದ ಬೆಳೆಗಳಲ್ಲಿ ಆರಂಭಿಕ ಹೂವು, ಮಿಡಿ, ಕಾಯಿಗಳು ಗಟ್ಟಿಯಾಗಿ ಹಿಡಿದುಕೊಳ್ಳದೇ ಉದುರಿ ಹೋಗುತ್ತವೆ. ಹೀಗಾಗಿ ಕಡಿಮೆ ಪ್ರಮಾಣದ ಇಳುವರಿಯು

ಕಂಡುಬರುತ್ತದೆ. ಹಾಗೆಯೇ ಬೆಳೆಗಳ ಮೇಲಿನ ಧೂಳಿನ ಸಂಸ್ಕರಣೆಯಿಂದಾಗಿ ಸಸ್ಯವರ್ಗದಲ್ಲಿ ಕಾಳು ಮತ್ತು ಕಾಯಿಗಳ ಗಾತ್ರವು ಬಲಗೊಳ್ಳದೇ, ಕಡಿಮೆ ಗಾತ್ರದಲ್ಲಿ ಪರಿಪೂರ್ಣಗೊಳ್ಳುತ್ತವೆ. ಇಂತಹ ಪರಿಣಾಮವು ಜಿಲ್ಲೆಯ ಸುಮಾರು ೫೦೦೦ ಕ್ಕೂ ಹೆಚ್ಚು ಹೆಕ್ಟೇರ್ ಕೃಷಿ ಪ್ರದೇಶಗಳಲ್ಲಿ ಕಂಡುಬರುತ್ತದೆ ಎಂಬ ಅಂಶವು ಜಿಲ್ಲೆಯ ಕೃಷಿ ಆಧಾರಿತ ಜನ ಸಮುದಾಯಗಳ ಭವಿಷ್ಯವು ಹೆಚ್ಚು ಗಂಡಾಂತರಕ್ಕೆ ಒಳಗಾಗುವುದರಲ್ಲಿ ಸಂದೇಹವಿಲ್ಲ.

**೨. ಜೀವ ವೈವಿಧ್ಯ ಹಾಗೂ ಸಸ್ಯ ಸಂಪತ್ತಿನ ನಾಶ**

ಜಿಲ್ಲೆಯ ಗಣಿಗಾರಿಕೆಯಿಂದ ಸಾವಿರಾರು ಹೆಕ್ಟೇರ್ ಪ್ರದೇಶಗಳಲ್ಲಿ ಅರಣ್ಯ ಸಂಪತ್ತು ನಾಶವಾಗುತ್ತಿದೆ. ತೆರೆದ ಗಣಿಗಾರಿಕೆಯಲ್ಲಿ ಬಳಸುವ ಸ್ಫೋಟಕಗಳ ಬಳಕೆ, ಬೃಹತ್ ಗಾತ್ರದ ಯಂತ್ರೋಪಕರಣಗಳಿಂದಾಗಿ ಉಂಟಾಗುವ ಶಬ್ದಮಾಲಿನ್ಯದಿಂದಾಗಿ ಈ ಭಾಗದಲ್ಲಿ ಸಾವಿರಾರು ಬೆಲೆ ಬಾಳುವ ಔಷಧಿಯುಕ್ತ ಗಿಡಮೂಲಿಕೆಗಳು ನಾಶಗೊಂಡಿವೆ. ವಿಪರೀತ ಯಂತ್ರೋಪಕರಣಗಳ ಬಳಕೆಯಿಂದಾಗಿ ಅರಣ್ಯಗಳಲ್ಲಿ ವಾಸವಾಗಿದ್ದ ಪಕ್ಷಿಗಳು ಮತ್ತು ಪ್ರಾಣಿ ವರ್ಗಗಳೆಲ್ಲವೂ ನಾಶಗೊಂಡಿವೆ. ಹೀಗೆ ಗಣಿಗಾರಿಕೆಯು ಪ್ರಾಕೃತಿಕ ಸಮತೋಲನವನ್ನು ಹೊಸಕಿಹಾಕುತ್ತಿರುವುದರಿಂದ ಈ ಭಾಗದಲ್ಲಿ ವಾಸಿಸುತ್ತಿರುವ ಮಾನವನ ಮುಂದಿನ ದಿನಗಳು ಭಯಾನಕವಾಗಲಿವೆ.

**೩. ಅಂತರ್ಜಲದ ಬತ್ತುವಿಕೆ ಹಾಗೂ ಹೂಳು ತುಂಬುವಿಕೆ**

ಜಿಲ್ಲೆಯ ಪೂರ್ವ ತಾಲೂಕುಗಳಲ್ಲಿ ನಡೆದಿರುವ ಗಣಿಗಾರಿಕೆಯಿಂದ ಕಂಡುಬರುವ, ಅರಣ್ಯನಾಶ, ಭಾರೀ ಭೂ ಸ್ಫೋಟಕ ವಸ್ತುಗಳ ಬಳಕೆಯಿಂದಾಗಿ ಪೂರ್ವ ಹಾಗೂ ಪಶ್ಚಿಮ ತಾಲೂಕುಗಳಲ್ಲಿರುವ ಅಂತರ್ಜಲದ ಮೂಲವು ಕಡಿಮೆಯಾಗುತ್ತಾ ಸಾಗಿದೆ. ಈ ಹಿಂದೆ ಸಂಡೂರು, ಕೂಡ್ಲಿಗಿ, ಹೊಸಪೇಟೆ ತಾಲೂಕುಗಳಲ್ಲಿದ್ದ ನೂರಾರು ತೆರೆದ ಬಾವಿ, ಕೆರೆ, ಹಳ್ಳಗಳು ಬತ್ತಿಹೋಗಿವೆ. ಬಳ್ಳಾರಿ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಕರೆಗಳನ್ನು ಹೊಂದಿದ್ದ ಸಂಡೂರು ತಾಲೂಕಿನಲ್ಲಿ ಅರಣ್ಯನಾಶ ಹಾಗೂ ಗಣಿಗಾರಿಕೆಯಿಂದಾಗಿ ಅವೆಲ್ಲವುಗಳು ನೀರಿಲ್ಲದೆ ಬತ್ತಿವೆ. ಅವುಗಳನ್ನು ಸರ್ಕಾರ ಬೇರೆ, ಬೇರೆ ಉಪಯೋಗಗಳಿಗೆ ಬಳಸಿಕೊಳ್ಳುವ ಯೋಜನೆಗಳನ್ನು ತೆರೆ ಮರೆಯಲ್ಲಿ ನಡೆಸುತ್ತಿದೆ. ಜಿಲ್ಲೆಯಲ್ಲಿ ಕಳೆದ ಐದು ವರ್ಷಗಳ ಹಿಂದೆ ಕೇವಲ ೫೦ ಅಡಿಗಳಿಂದ ೧೦೦ ಅಡಿಗಳ ಅಂತರದಲ್ಲಿ ಕೊಳವೆ ಬಾವಿಗಳ ಮೂಲಕ ದೊರೆಯುತ್ತಿದ್ದ ಅಂತರ್ಜಲದ ಪ್ರಮಾಣವು ಸುಮಾರು ೨೦೦ ಅಡಿಗಳಿಂದ ೩೦೦ ಅಡಿಗಳ ಆಳದಷ್ಟು ಕೆಳಗಿಳಿದಿದೆ. ಇಂತಹ ಸನ್ನಿವೇಶವು ಜಿಲ್ಲೆಯ ಕೃಷಿ ಆಧಾರಿತ ರೈತರ ಬದುಕನ್ನು ಅತಂತ್ರವನ್ನಾಗಿಸಿ, ಪರ್ಯಾಯ ಉದ್ಯೋಗಗಳ ಹುಡುಕಾಟಕ್ಕೆ ಅವಕಾಶ ಮಾಡಿಕೊಟ್ಟಿದೆ.

**೪. ಹೂಳು ತುಂಬುವಿಕೆ**

ಜಿಲ್ಲೆಯಲ್ಲಿ ನಡೆದಿರುವ ತೆರೆದ ಗಣಿಗಾರಿಕೆಯಿಂದಾಗಿ ಭಾರಿ ಗಾತ್ರದ ಭೂ ಸ್ಫೋಟಕಗಳ ಬಳಕೆಯಿಂದ ಕೆಲಸಕ್ಕೆ ಬಾರದ ಗಣಿಗಾರಿಕೆಯ ತ್ಯಾಜ್ಯ ವಸ್ತುಗಳ ಪ್ರಮಾಣವು ಹೆಚ್ಚಾಗುತ್ತಾ

ಸಾಗಿದೆ. ಇಂತಹ ತ್ಯಾಜ್ಯ ಪದಾರ್ಥವು ಮಳೆಗಾಲದಲ್ಲಿ ನೀರಿನ ಮೂಲಕ ಕೊಚ್ಚಿಹೋಗಿ, ಕೃಷಿ ಭೂಮಿ ಹಾಗೂ ಕೆರೆ, ಹಳ್ಳಗಳಲ್ಲಿ ಸಂಗ್ರಹವಾಗುವುದರಿಂದ, ದೀರ್ಘಕಾಲ ನೀರು ಸಂಗ್ರಹಣೆಗೆ ಹಾಗೂ ನೀರು ಬತ್ತುವಿಕೆಗೆ ಸ್ಥಳವಕಾಶ ಇಲ್ಲದಂತಾಗಿದೆ. ಇಂತಹ ಸನ್ನಿವೇಶಗಳಿಂದ ಭೂಮಿಯಲ್ಲಿ ನೀರಿನ ಇಂಗುವಿಕೆ ಕಡಿಮೆಯಾಗುವುದರಿಂದ ಅಂತರ್ಜಲ ಇನ್ನು ಕೆಳಗೆ ಹೋಗಲು ಕಾರಣವಾಗುತ್ತಿದೆ. ಜಿಲ್ಲೆಯ ಇತರ ಭಾಗಗಳಲ್ಲಿ ನಡೆದಿರುವ ಗಣಿಗಾರಿಕೆಯ ತ್ಯಾಜ್ಯ ವಸ್ತುಗಳು ಮಳೆ ನೀರಿನ ಮೂಲಕ ಹರಿದು ಕೆರೆ, ನದಿ, ಹಳ್ಳಗಳಲ್ಲಿ ನೆಲೆಗೊಂಡು ಕಡಿಮೆ ಪ್ರಮಾಣದ ನೀರಿನ ಸಂಗ್ರಹಕ್ಕೆ ಕಾರಣವಾಗುತ್ತಿರುವುದಕ್ಕೆ ಉದಾಹರಣೆಯಾಗಿ, ಕರ್ನಾಟಕ ಹಾಗೂ ಆಂಧ್ರಪ್ರದೇಶಕ್ಕೆ ಹೇರಳವಾದ ನೀರನ್ನು ಪೂರೈಸುತ್ತಿರುವ ತುಂಗಭದ್ರಾ ಯೋಜನೆಯ ನೀರಿನ ಸಂಗ್ರಹ ಸಾಮರ್ಥ್ಯವನ್ನು ಕುಂಠಿತಗೊಳ್ಳುತ್ತಿರುವುದನ್ನು ೪.೫ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೪.೫ : ತುಂಗಭದ್ರಾ ಜಲಾಶಯದ ನೀರಿನ ಸಂಗ್ರಹ ಸಾಮರ್ಥ್ಯ**

| ವರ್ಷಗಳು | ತುಂಗಭದ್ರಾ ಜಲಾಶಯದ ನೀರಿನ ಸಂಗ್ರಹ ಸಾಮರ್ಥ್ಯ |
|---|---|
| ೧೯೫೩ | ೧೩೩ ಟಿ.ಎಂ.ಸಿ. |
| ೧೯೭೨ | ೧೨೫.೧೫೨ |
| ೧೯೭೮ | ೧೧೭.೭೬೩ |
| ೧೯೮೧ | ೧೧೫.೬೮೦ |
| ೧೯೮೫ | ೧೧೧.೮೪೦ |
| ೧೯೯೫ | ೧೦೪.೦೦ |
| ೨೦೦೪ | ೧೦೨.೪೯೨ |

ಮೂಲ : ಬಳ್ಳಾರಿ ಜಿಲ್ಲೆಯ ಕೈಗಾರೀಕರಣ ಮತ್ತು ಜನಾಂದೋಲನ ಪುಟ.೧೭ ಶೇಷಾದ್ರಿ ೧೯೯೮ ಕ.ವಿ.ವಿ.ಹಂಪಿ

೪.೫ರ ಕೋಷ್ಟಕವನ್ನು ಅವಲೋಕಿಸಿದಾಗ ತುಂಗಭದ್ರಾ ಜಲಾಶಯದ ನೀರಿನ ಸಾಮರ್ಥ್ಯವು ಈ ಭಾಗದಲ್ಲಿ ನಡೆಯುತ್ತಿರುವ ಗಣಿಗಾರಿಕೆ ಮತ್ತು ಅದರ ಸಂಬಂಧಿತ ಚಟುವಟಿಕೆಗಳಿಂದಾಗಿ ಹೆಚ್ಚು ತ್ಯಾಜ್ಯ ವಸ್ತುಗಳ ಪ್ರಮಾಣವು ಜಲಾಶಯಕ್ಕೆ ಹರಿದು ಬರುತ್ತಿರುವುದರಿಂದ, ತುಂಗಭದ್ರಾ ಜಲಾಶಯದ ಸರಾಸರಿ ನೀರಿನ ಸಾಮರ್ಥ್ಯದ ಪ್ರಮಾಣವು ಕಾಲಾನುಕ್ರಮದಲ್ಲಿ ಕಡಿಮೆಯಾಗುತ್ತಾ ಸಾಗಿರುವುದನ್ನು ಮನಗಾಣಬಹುದು. ಜಲಾಶಯದ ಆರಂಭಿಕ ನೀರಿನ ಸಂಗ್ರಹ ಸಾಮರ್ಥ್ಯ ೧೩೩ ಟಿ.ಎಂ.ಸಿ. ಅಡಿಗಳಷ್ಟು ಇದದ್ದು, ತುಂಗಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ತಾಂತ್ರಿಕ ಪ್ರಾಧಿಕಾರ ವಿಭಾಗ ನಡೆಸಿದ ೨೦೦೪ರ ಸಮೀಕ್ಷೆಯ ಅಧ್ಯಯನದ ಪ್ರಕಾರ ೧೦೨.೪೯೨ರಷ್ಟು ನೀರಿನ ಸಂಗ್ರಹ

ಸಾಮರ್ಥ್ಯ ಕಡಿಮೆಯಾಗಿರುವುದಕ್ಕೆ ತುಂಗಭದ್ರಾ ಯೋಜನೆಯ ಅಚ್ಚು ಕಟ್ಟು ಪ್ರದೇಶದ ಸುತ್ತ ಮುತ್ತಾ ನಡೆಯುತ್ತಿರುವ ಗಣಿಗಾರಿಕೆಯ ಪ್ರಮಾಣವೇ ಕಾರಣವೆಂದೂ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಈ ಹಿನ್ನಲೆಯಲ್ಲಿ ಜಿಲ್ಲೆಯಲ್ಲಿರುವ ಕೆರೆ, ಕಾಲುವೆ, ಹಳ್ಳ ಮತ್ತು ಚಿಕ್ಕ ಪುಟ್ಟ ಝರಿಗಳೆಲ್ಲವೂ ಹೂಳು ತುಂಬುವ ಮೂಲಕ ನೀರಿನ ಸಂಗ್ರಹ ಬತ್ತಿಹೋಗಿ ಅಂತರ್‌ಜಲದ ಮೂಲಗಳು ಭೂಗರ್ಭದ ಆಳಕ್ಕಿಳಿಯಲು ಕಾರಣವಾಗಿವೆ.

ಈ ಮೇಲಿನ ಪ್ರಕರಣಕ್ಕೆ ಪೂರಕವಾಗಿ ಕೆಲವು ಬೃಹತ್ ಗಣಿ ಸಂಬಂಧಿತ ಉತ್ಪಾದನಾ ಚಟುವಟಿಕೆಗಳಿಂದ ಉಂಟಾಗಬಹುದಾದ ಸರಾಸರಿ ತ್ಯಾಜ್ಯ ವಸ್ತುಗಳ ಪ್ರಮಾಣವನ್ನು ಕೋಷ್ಟಕ ೪.೬ರಿಂದ ತಿಳಿಯಬಹುದು.

**ಕೋಷ್ಟಕ ೪.೬**

**ಕೆಲವು ಬೃಹತ್ ತ್ಯಾಜ್ಯಗಳ ಮೂಲ ಹಾಗೂ ಪ್ರಮಾಣಗಳ ವಿವರ**

| ಕ್ರ. ಸಂ. | ತ್ಯಾಜ್ಯ ವಸ್ತುವಿನ ಹೆಸರು | ವಾರ್ಷಿಕ ಪ್ರಮಾಣ ಹತ್ತು ಲಕ್ಷ ಟನ್ನಗಳಲ್ಲಿ | ಮೂಲ |
|---|---|---|---|
| ೧. | ಉಕ್ಕು ಊದು ಕುಲುಮೆ | ೩೫.೦ | ಉಕ್ಕನ್ನು ಉತ್ಪಾದನೆ ಹಾಗೂ ಪರಿವರ್ತಿಸುವ ಸ್ಥಳಗಳು |
| ೨. | ಹಾರು ಬೂದಿ | ೭೦.೦ | ಕಲ್ಲಿದ್ದಲನ್ನು ಬಳಸುವ ಶಾಖೋತ್ಪನ್ನ ಶಕ್ತಿ ಸ್ಥಾವರಗಳು |
| ೩. | ಕಬ್ಬಿಣದ ಅದಿರಿನ ಕಳಪೆ ವಸ್ತು | ೧೧.೨೫ | ಕಬ್ಬಿಣದ ಅದಿರು ಉತ್ಪಾದನೆ ಮತ್ತು ವಿತರಣೆ |
| ೪. | ಸುಣ್ಣದ ಕಲ್ಲು ತ್ಯಾಜ್ಯ | ೫೦.೦೦ | ಸುಣ್ಣದ ಕಲ್ಲು ಗಣಿಗಾರಿಕೆ |
| ೫. | ಕೆಂಪು ಮಣ್ಣು ಬಾಕ್ಸೈಟ್ | ೩.೦೦ | ಬಾಕ್ಸೈಟ್‌ಗಳಿಂದ ಅಲ್ಯೂಮಿನಿಯಂ ಪಡೆಯುವ ಗಣಿಗಾರಿಕೆ ಹಾಗೂ ಬೇರ್ಪಡಿಸುವ ಸ್ಥಳಗಳು |

ಮೂಲ : ನಗರ ಘನ ತ್ಯಾಜ ನಿರ್ವಾಹಣಾ ಕೈಪಿಡಿ C.P.H.E.E.O., 2004, ನವದೆಹಲಿ

ಈ ಮೇಲಿನ ೪.೬ರ ಕೋಷ್ಟಕವು ವಿವಿಧ ಉತ್ಪಾದನಾ ಚಟುವಟಿಕೆಗಳಿಂದಾಗಿ ಉಂಟಾಗಬಹುದಾದ ತ್ಯಾಜ್ಯವಸ್ತುವಿನ ಪ್ರಮಾಣವನ್ನು ತೋರಿಸುತ್ತದೆ. ಬಳ್ಳಾರಿ ಜಿಲ್ಲೆಯ ವ್ಯಾಪ್ತಿ ಪ್ರದೇಶದಲ್ಲಿ ಉಕ್ಕಿನ ಉತ್ಪಾದನೆ, ಕಬ್ಬಿಣ ಅದಿರಿನ ಉತ್ಪಾದನೆ ಕಲ್ಲಿದ್ದಲನ್ನು ಬಳಸುವ ಶಾಖೋತ್ಪನ್ನ ಶಕ್ತಿ ಸ್ಥಾವರಗಳು ಕುಡಿತಿನಿ (ಬಳ್ಳಾರಿ), ಇಟಗಿ (ಹಡಗಲಿ) ಜಿಂದಾಲ್ ಕಾರ್ಖಾನೆ (ಸಂಡೂರು) ಇತ್ಯಾದಿ ಸ್ಥಳಗಳಲ್ಲಿ ಉತ್ಪಾದನೆ ಹಾಗೂ ವಿತರಣೆಯ ಚಟುವಟಿಕೆಗಳು ನಡೆಯುತ್ತಿರುವುದರಿಂದ ಇವುಗಳಿಂದ ಹೊರಬರುವ ತ್ಯಾಜ್ಯ ವಸ್ತುಗಳು ಜಿಲ್ಲೆಯ ಪರಿಸರ ಮಾಲಿನ್ಯದ ಹೆಚ್ಚಳಕ್ಕೆ ಪೂರಕವಾಗಿ ನಿಲ್ಲುತ್ತವೆ.

ಒಟ್ಟಾರೆಯಾಗಿ ಹೇಳುವುದಾದರೆ ಜಿಲ್ಲೆಯಲ್ಲಿ ಸುನಾಮಿ ಸ್ವರೂಪದ ಮಾದರಿಯಲ್ಲಿ ನಡೆದಿರುವ ಗಣಿಗಾರಿಕೆ, ಹಾಗೂ ಸಂಬಂಧಿತ ಕಾರ್ಯಾಚರಣೆಯ ತೀವ್ರತೆಯನ್ನು ಗಮನಿಸಿದಾಗ ಕ್ರಿ ಇಂಡಿಯನ್ ಭವಿಷ್ಯವಾಣಿಯೊಂದು ಸನ್ನಿವೇಶಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

"ಕಟ್ಟ ಕಡೆಯ ಮರವನ್ನು ಕಡಿದ ನಂತರ
ಕಟ್ಟ ಕಡೆಯ ನದಿಗೆ ವಿಷವಿಕ್ಕಿದ ನಂತರ
ಕಟ್ಟ ಕಡೆಯ ಮೀನನ್ನು ಹಿಡಿದ ನಂತರ
ನಿನಗೆ ಆಗಷ್ಟೇ ತಿಳಿಯುತ್ತದೆ.
ಹಣವನ್ನು ತಿನ್ನಲಾಗುವುದಿಲ್ಲವೆಂದು"[೨]

ಈ ಮೇಲಿನ ವಾಖ್ಯೆಗಳು ಮಾನವನಲ್ಲಿ ಅಡಗಿರುವ ಮಹತ್ವಾಕಾಂಕ್ಷೆಯ ಸ್ಪಷ್ಟಪಡಿಸುತ್ತದೆ. ಇಂತಹ ಮಾನಸಿಕ ಪರಿಭಾವನೆಗಳಿಂದಾಗಿ ತನ್ನ ಸುತ್ತಲಿನ ಪ್ರಕೃತಿಯಲ್ಲಿ ದೊರೆಯುತ್ತಿರುವ ಸಂಪನ್ಮೂಲಗಳನ್ನು ಬಳಸುವಾಗ, ಭವಿಷ್ಯವಾಣಿಯು ನೈಜತೆಯನ್ನು ಸಮಸ್ತ ಆಡಳಿತ ವ್ಯವಸ್ಥೆ ಹಾಗೂ ಸಮಾಜ ಸಮಸ್ತ ಅಂಗಗಳೆಲ್ಲವೂ ಗಂಭೀರವಾಗಿ ಆಲೋಚಿಸುವ ಮೂಲಕ ಈ ಭಾಗದ ಪ್ರಾಕೃತಿಕ ಸಂಪತ್ತು ಹಾಗೂ ಮುಂದಿನ ಜನಾಂಗಗಳ ರಕ್ಷಣೆಗೆ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳುವುದು ಸೂಕ್ತವೆಂದೇ ಹೇಳಬೇಕಾಗಿದೆ.

### ೪.೨. ವಸತಿ

"ವಸತಿ"ಯ ಪರಿಕಲ್ಪನೆಗೆ ಸುದೀರ್ಘವಾದ ಇತಿಹಾಸವಿದೆ. ಕಾಡಲ್ಲಿ ಹಾಗೂ ಬಯಲಲ್ಲಿದ್ದ ಮಾನವನಿಗೆ ಯಾವಾಗ ವಸತಿಯ ಪರಿಜ್ಞಾನ ಮೊಳಕೆಯೊಡೆಯಿತೋ, ಅಂದಿನಿಂದಲೇ ಮಾನವನ ಬೆಳವಣಿಗೆಯ ವಿವಿಧ ಹಂತಗಳ ಇತಿಹಾಸದ ಸಂಪೂರ್ಣ ಮಾಹಿತಿ ಲಭ್ಯವಾಗುತ್ತದೆ. ವಿಶ್ವದ ಶ್ರೇಷ್ಠ ನಾಗರೀಕತೆಯ ಪ್ರತೀಕಗಳೆಂದು ಗುರುತಿಸಲ್ಪಡುವ ಹರಪ್ಪಾ ಹಾಗೂ ಮಹೆಂಜೋದಾರೊ ಮತ್ತು ಸಿಂಧೂ ನಾಗರೀಕತೆಯ ಕುರುಹುಗಳನ್ನು ಗಮನಿಸಿದಾಗ ಆದಿಮಾನವನಲ್ಲಿದ್ದ ವಸತಿಯ ರಚನೆ ಹಾಗೂ ನಿರ್ಮಾಣದ ಅನೇಕ ಗ್ರಹಿಕೆಗಳು ಇಂದಿಗೂ ವಿಸ್ಮಯ ಹಾಗೂ ಕುತೂಹಲವನ್ನು ಉಂಟುಮಾಡುತ್ತವೆ. ಅಂದರೆ ವಸತಿಯೊಂದಿಗಿನ ಮಾನವನ ಸಂಬಂಧವು ಅನನ್ಯ ಹಾಗೂ ಅನಿವಾರ್ಯವಾದ ಅಂಗವೆಂದೇ ಹೇಳಬಹುದು.

ವಸತಿಯ ಪರಿಕಲ್ಪನೆಯಿಂದಾಗಿ ಮಾನವಕುಲದ ರಕ್ಷಣೆ ಹಾಗೂ ಪೋಷಣೆಯ ಜೊತೆಗೆ ಮಾನವನಲ್ಲಿ ಪರಸ್ಪರ ಸ್ನೇಹ, ಸಂಬಂಧಗಳೊಂದಿಗೆ "ಕುಟುಂಬ ವ್ಯವಸ್ಥೆ"ಯು ಅಸ್ಥಿತ್ವಕ್ಕೆ ಬಂದಿತು. ಹೇಗೆಂದರೆ ವಸತಿಯ ನಿರ್ಮಾಣದಿಂದಾಗಿ ಮಾನವನು ಈ ಹಿಂದಿನ ಭಯ, ಆತಂಕ, ಅಲೆಮಾರಿ

ಮತ್ತು ವಲಸೆಗಳಿಂದ ದೂರವಾಗಿ ಪರಸ್ಪರ ಪ್ರೀತಿ, ಸಂತೃಪ್ತಿ ಹಾಗೂ ವಿಶ್ವಾಸಗಳಿಗೆ ಮಾರುಹೋಗಿದ್ದರಿಂದ, ಅವನಲ್ಲಿದ್ದ ಪರಸ್ಪರರೊಂದಿಗಿನ ದ್ವೇಷ, ಕ್ರೌರ್ಯ, ವೈರತ್ವಗಳು ಕಡಿಮೆಯಾಗಿ ಒಬ್ಬರು ಮತ್ತೊಬ್ಬರೊಂದಿಗೆ ಸ್ನೇಹ, ಸಹಕಾರ ಮತ್ತು ಹೊಂದಾಣಿಕೆಯನ್ನು ಮೈಗೂಡಿಸಿಕೊಳ್ಳಲು ಸಾಧ್ಯವಾಯಿತು. ಈ ಹಿನ್ನೆಲೆಯಲ್ಲಿ ಮಾನವನ ಸುದೀರ್ಘ ಇತಿಹಾಸದ ಕಾಲಘಟ್ಟಕ್ಕೆ ವಸತಿಯೇ ಮುಖ್ಯ ಆಧಾರವಾಗಿತ್ತೆಂದು ಅರ್ಥೈಯಿಸಬಹುದಾಗಿದೆ. ಹೀಗೆ 'ವಸತಿ'ಯ ವಿನ್ಯಾಸದಲ್ಲಾದ ವಿವಿಧ ಮಾರ್ಪಾಡುಗಳು, ಆಯಾ ಕಾಲಘಟ್ಟಕ್ಕೆ ತಕ್ಕಂತೆ ಮಾನವನಲ್ಲಾದ ಬೌದ್ಧಿಕ, ಮಾನಸಿಕ, ಆರ್ಥಿಕ ಹಾಗೂ ತಾಂತ್ರಿಕ ಜ್ಞಾನವನ್ನು ಪ್ರತಿನಿಧಿಸುತ್ತದೆ. ಆರಂಭದಲ್ಲಿ ಗುಹೆಗಳು, ಮರದ ಪೊಟರೆಗಳು, ಎತ್ತರವಾದ ಗಿಡ-ಮರಗಳು, ಕಲ್ಲು ಬಂಡೆಗಳು ಇತ್ಯಾದಿ ಆದಿ ಮಾನವನ ವಾಸಸ್ಥಳವಾಗಿ ಕಂಡುಬಂದರೆ, ನಂತರದಲ್ಲಾದ ಬದಲಾವಣೆಗಳು ಮಾನವನ ಬೆಳವಣಿಗೆಯ ಮತ್ತು ಅಭಿವೃದ್ಧಿಯ ಸಂಕೇತವೆಂದೇ ಗುರುತಿಸಬೇಕಾಗಿದೆ. ಏಕೆಂದರೆ ಪ್ರಸ್ತುತ ಸನ್ನಿವೇಶದಲ್ಲಿ ಮಾನವನು ವಾಸಿಸುತ್ತಿರುವ ವಸತಿಯ ವಿನ್ಯಾಸ, ರಚನೆ, ಸ್ವರೂಪವು ಅವನ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಪ್ರಮುಖ ಮಾನದಂಡವಾಗಿ ಪರಿಗಣಿಸಲ್ಪಡುತ್ತಿದೆ. ವಿಶ್ವದ ಪ್ರತಿಯೊಬ್ಬ ಮಾನವನು ತನ್ನ ವಸತಿಯ ವಿಷಯದಲ್ಲಿ ಮತ್ತೊಬ್ಬರಿಂದ ಅನುಕರಣೆ ಮಾಡದೇ ಸಾಧ್ಯವಾದಷ್ಟು ಬದಲಾವಣೆಗಳನ್ನು ಹಾಗೂ ಹೊಸತನವನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಇಂತಹ ಬಹು ವೈವಿಧ್ಯತೆಯುಳ್ಳ ವಸತಿಯ ಹಿನ್ನೆಲೆಯಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಉತ್ಖನನೆಯಲ್ಲಿ ತೊಡಗಿರುವ ಕಾರ್ಮಿಕರ ವಸತಿಯ ಸ್ವರೂಪ, ಹಕ್ಕುದಾರಿಕೆ, ವಾತಾವರಣ, ಮತ್ತು ಅದರಲ್ಲಿನ ವಿವಿಧ ಸೌಲಭ್ಯಗಳನ್ನು ತಿಳಿಯುವುದು ಮಹಾ ಪ್ರಬಂಧದ ಆಶಯವಾಗಿದೆ.

ಬಳ್ಳಾರಿ ಜಿಲ್ಲೆಯ ವಿವಿಧ ಗಣಿ ಸಂಸ್ಥೆಗಳಿಗೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಭೇಟಿ ನೀಡಿದಾಗ ಗಣಿ ಕಾರ್ಮಿಕರು ನೆಲೆಸಿರುವ ವಸತಿಯ ಸ್ವರೂಪವು ೪.೭ರ ಕೋಷ್ಠಕದ ಮಾದರಿಯಲ್ಲಿ ಕಂಡುಬರುತ್ತದೆ.

ಮುಂದಿನ ೪.೭ರ ಕೋಷ್ಟಕ ಪ್ರಕಾರ ಕಬ್ಬಿಣ ಮತ್ತು ಮ್ಯಾಂಗನೀಸ್ ಗಣಿಯಲ್ಲಿರುವ ಕಾರ್ಮಿಕರು ವಾಸಿಸುವ ವಸತಿಯ ಸ್ವರೂಪವನ್ನು ಪರಿಚಯಿಸುತ್ತದೆ. ಬಹುತೇಕ ಗಣಿಸಂಸ್ಥೆಗಳಲ್ಲಿ ದುಡಿಯುವ ಕಾರ್ಮಿಕರು ವಾಸಿಸುವ ವಸತಿಗಳು ಹುಲ್ಲು, ಬಿದಿರಿನ ತಟ್ಟಿ, ತಗಡು, ಅಪುಗಳೊಂದಿಗೆ ಕಟ್ಟಲ್ಪಟ್ಟಿರುತ್ತವೆ. ಅಂತಹವುಗಳಲ್ಲಿ ಶೇಕಡ ೧೭.೫ ಕಾರ್ಮಿಕರು ಗುಡಿಸಲುಗಳಲ್ಲಿ ವಾಸವಾಗಿದ್ದಾರೆ. ಗಣಿ ವೃತ್ತಿಯನ್ನು ಹುಡುಕಿಕೊಂಡು ವಲಸೆ ಬಂದ ಕೆಲವು ಕಾರ್ಮಿಕರು ಈ ಭಾಗದಲ್ಲಿಯೇ ಹತ್ತಾರು ವರ್ಷಗಳಿಂದ ಕಾರ್ಯನಿರ್ವಹಿಸುತ್ತಿರುವ ಬೇರೆ ಕಾರ್ಮಿಕರ ಸ್ವಾಧೀನದಲ್ಲಿರುವ ಗುಡಿಸಲುಗಳಿಗೆ ತಿಂಗಳಿಗೆ ೧೦೦ ರೂಗಳಿಂದ ೧೫೦ ರೂಗಳವರೆಗೆ ಬಾಡಿಗೆ ನೀಡಿ ವಾಸಿಸುತ್ತಿದ್ದಾರೆ. ಇನ್ನೂ

## ಕೋಷ್ಟಕ ೪.೭

## ಗಣಿ ಕಾರ್ಮಿಕರ ವಸತಿಯ ಸ್ವರೂಪ

| ಕ್ರ.ಸಂ. | ವಸತಿಯ ಸ್ವರೂಪ | ತಾತ್ಕಾಲಿಕ ಶೆಡ್ | | | | ಗುಡಿಸಲು | | | | ಮಣ್ಣಿನ ಮನೆ | | | | ಜನತಾ ಮನೆ | | | | ಆರ್.ಸಿ.ಸಿ./ಇತರೆ | | | | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|---|---|---|---|
| ೧. | ಹಕ್ಕುದಾರಿಕೆ | ಕಂ* | ಸ್ವಂ* | ಬಾ* | ಒ* | ಕಂ | ಸ್ವಂ | ಬಾ | ಒ | ಕಂ | ಸ್ವಂ | ಬಾ | ಒ | ಕಂ | ಸ್ವಂ | ಬಾ | ಒ | ಕಂ | ಸ್ವಂ | ಬಾ | ಒ | |
| ೨. | ಕಾರ್ಮಿಕರ ಸಂಖ್ಯೆ | ೧೨೦ | --- | --- | ೧೨೦ | ೨೦ | ೧೫ | --- | ೩೫ | --- | ೧೦ | ೦೫ | ೧೫ | --- | ೧೦ | ೨೦ | ೩೦ | --- | --- | --- | --- | ೨೦೦ |
| ೩. | ಶೇಕಡವಾರು | ೬೦ | --- | --- | ೬೦ | ೧೦ | ೭.೫ | --- | ೧೭.೫ | --- | ೫ | ೨.೫ | ೭.೫ | ೫ | ೫ | ೧೦ | ೧೫ | --- | --- | --- | --- | ೧೦೦ |

*ಕಂ = ಕಂಪನಿ, *ಸ್ವಂ = ಸ್ವಂತ, *ಬಾ = ಬಾಡಿಗೆ, *ಒ = ಒಟ್ಟು

ಆಧಾರ : ಕ್ಷೇತ್ರಕಾರ್ಯದ ಸಮೀಕ್ಷೆ

ಕೆಲವು ಗಣಿ ಕಂಪನಿಗಳು ಉತ್ಪಾದನೆಯನ್ನು ಕೈಗೊಳ್ಳುವಾಗ ಕಾರ್ಮಿಕರ ವಾಸಕ್ಕಾಗಿ ನಿರ್ಮಾಣ ಮಾಡಿದ ಹುಲ್ಲಿನ ಗುಡಿಸಲುಗಳನ್ನು ರಿಪೇರಿ ಮಾಡಿಸಿಕೊಂಡು ಅವುಗಳಲ್ಲಿಯೇ ಕೆಲವರು ನೆಲೆಸಿದ್ದಾರೆ. ಹಾಗೆಯೇ ಗಣಿ ಕಂಪನಿಗಳು ಉತ್ಪಾದನೆಗೆ ಸಹಕಾರಿಯಾಗಲೆಂದು ನಿರ್ಮಿಸಿದ ತಾತ್ಕಾಲಿಕ ಲೇಬರ್ ಕ್ಯಾಂಪ್‌ಗಳಲ್ಲಿರುವ ಶೆಡ್‌ಗಳಲ್ಲಿ ಶೇಕಡ ೬೦ ರಷ್ಟು ಕಾರ್ಮಿಕರು ವಾಸಿಸುತ್ತಿದ್ದಾರೆ. ಇವೆಲ್ಲವೂ ಸಾಮೂಹಿಕವಾಗಿ, ನಿರ್ಮಿಸಲಾಗಿದ್ದು, ತಗಡುಗಳಿಂದ, ಬಿದಿರು ತಟ್ಟೆಗಳಿಂದ ತಯಾರಿಸಲಾಗಿದೆ. ಇತ್ತೀಚೆಗೆ ಕೆಲವು ಗಣಿಗಳಲ್ಲಿ ದುಡಿಯಲು ಬಂದ ಕಾರ್ಮಿಕರು ಕಂಪನಿಯಿಂದ ಸಾಲವನ್ನು ತೆಗೆದುಕೊಂಡು ಸ್ವತಃ ತಾವೇ ತಾತ್ಕಾಲಿಕ ಶೆಡ್ಡುಗಳನ್ನು ನಿರ್ಮಿಸಿಕೊಂಡಿದ್ದಾರೆ. ಮೂಲತಃ ಹೊಸಪೇಟೆ, ಸಂಡೂರು, ಬಳ್ಳಾರಿ ಜಿಲ್ಲೆಯ ವಾಸಿಗಳು ಇಲ್ಲವೇ ಹತ್ತಾರು ವರ್ಷಗಳಿಂದ ಈ ತಾಲೂಕುಗಳಲ್ಲಿ ವಾಸಿಸಿರುವ ಕೆಲವು ಕಾರ್ಮಿಕರು ತಮ್ಮ ದೈನಂದಿನ ದುಡಿಮೆಯಲ್ಲಿ ಉಳಿತಾಯ ಮಾಡಿಯೇ ಇಲ್ಲವೇ ಗಣಿಸಂಸ್ಥೆಯಿಂದ ಸಾಲವನ್ನು ಪಡೆದು ಮಣ್ಣಿನ ಮನೆಗಳನ್ನು ಕಟ್ಟಿಸಿಕೊಂಡಿದ್ದಾರೆ. ಅಂತಹವರ ಪ್ರಮಾಣ ಕೇವಲ ಶೇಕಡ ೭.೫ ರಷ್ಟಿದೆ. ಇಂತಹ ಸ್ವರೂಪದಲ್ಲಿರುವ ಕೆಲವು ಗಣಿ ಕಾರ್ಮಿಕರಿಗೆ ಸಂಬಂಧಿಸಿದ ಇಲ್ಲವೆ ಸ್ಥಳೀಯ ಜನರ ಮನೆಗಳಿಗೆ ೧೫೦ ರಿಂದ ೨೦೦ ರೂಗಳವರೆಗೆ ಬಾಡಿಗೆಯ ಆಧಾರದ ಮೇಲೆ ಕೆಲವರು ನೆಲೆಸಿದ್ದಾರೆ.

ಒಟ್ಟಾರೆಯಾಗಿ ಕಾರ್ಮಿಕರ ವಸತಿಯ ಬಗ್ಗೆ ಹೇಳುವುದಾದರೆ ವಲಸೆ ಬಂದು, ಹತ್ತಾರು ವರ್ಷಗಳನ್ನು ಇಲ್ಲಿಯೇ ಕಳೆದಿದ್ದರೂ ಗಣಿ ಕಾರ್ಮಿಕರಿಗೆ ಸ್ವಂತ ಮನೆ ಇಲ್ಲವೆ ಜಾಗವಾಗಲೀ ಇಲ್ಲ. ಬಹಳಷ್ಟು ಗಣಿಕಾರ್ಮಿಕರು ಆಯಾ, ಕಂಪನಿಗಳು ತಾತ್ಕಾಲಿಕವಾಗಿ ನಿರ್ಮಿಸಿಕೊಟ್ಟ ವಸತಿಗಳಲ್ಲಿ ತಮ್ಮ ಬದುಕನ್ನು ರೂಪಿಸಿಕೊಂಡಿದ್ದಾರೆ. ಆದರೆ ಇಲ್ಲಿಯವರೆಗೂ ಸ್ಥಳೀಯ ಆಡಳಿತ ಸಂಸ್ಥೆಗಳು ಗಣಿ ಕಾರ್ಮಿಕರಿಗಾಗಿ ಸರ್ಕಾರದಿಂದ ಬಂದ ಯಾವುದೇ ಯೋಜನೆಗಳನ್ನು ವಿತರಿಸಿಲ್ಲದಿರುವುದು ಇದರಿಂದ ದೃಢಗೊಳ್ಳುತ್ತದೆ.

ಗಣಿಯಲ್ಲಿರುವ ಕಾರ್ಮಿಕರ ಕುಟುಂಬದ ಸ್ವರೂಪವು ಅವಿಭಕ್ತ ಕುಟುಂಬಗಳಿಗಿಂತಲೂ ಹೆಚ್ಚಾಗಿ ವಿಭಕ್ತ ಕುಟುಂಬಗಳನ್ನು ಹೊಂದಿದ್ದರೂ ಅವರ ಕುಟುಂಬದ ಸದಸ್ಯರ ಪ್ರಮಾಣ ಹೆಚ್ಚಾಗಿದೆ. ಹೀಗಾಗಿ ಅವರು ವಾಸಿಸುವ ವಸತಿಗಳ ಸುತ್ತಳತೆಯ ವಿಸ್ತೀರ್ಣವನ್ನಂತೂ ಊಹಿಸಲು ಅಸಾಧ್ಯವಾಗದ ಮಾದರಿಯಲ್ಲಿದೆ. ಇತ್ತೀಚಿನ ವಿಶ್ವಸಂಸ್ಥೆಯ ವರದಿಯ ಪ್ರಕಾರ ಭಾರತದಲ್ಲಿ ಕಾರ್ಮಿಕರಿಗಾಗಿ ಕಟ್ಟಲ್ಪಟ್ಟಿರುವ ವಸತಿಗಳು ಜನ ಯೋಗ್ಯವಾಗಿರದೇ ಪ್ರಾಣಿಗಳೂ ವಾಸಿಸಲು ಯೋಗ್ಯವಾಗಿಲ್ಲವೆಂಬ ಕಳವಳಕಾರಿ ಸಂಗತಿಯನ್ನು ತಿಳಿದ ಮೇಲೆ ಅಂತಹ ವಸತಿಗಳಲ್ಲಿಯೇ ಹೆಚ್ಚು ಹೆಚ್ಚು ಕಾರ್ಮಿಕರು ವಾಸವಾಗಿರುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಕಾರ್ಮಿಕರು ವಾಸಿಸುತ್ತಿರುವ ವಸತಿಯಲ್ಲಿನ

ಸರಾಸರಿ ಕುಟುಂಬದ ಸದಸ್ಯರ ಸಂಖ್ಯೆ ಎಷ್ಟು? ಕಡಿಮೆ ಸುತ್ತಳತೆಯ ಮನೆಯಲ್ಲಿ ಬಹಳಷ್ಟು ಜನರು ವಾಸಿಸುವುದರಿಂದ ತಲೆದೋರಬಹುದಾದ ಪರಿಣಾಮಗಳಾವುವು ಎಂಬುದನ್ನು ಚರ್ಚೆಗೆ ಒಳಪಡಿಸುವುದು ಸೂಕ್ತ. ಈ ಹಿನ್ನೆಲೆಯಲ್ಲಿ ಗಣಿ ಕಾರ್ಮಿಕರು ವಾಸವಾಗಿರುವ ವಸತಿಗಳಲ್ಲಿ ನೆಲೆಸಿರುವ ಸದಸ್ಯರ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕ ೪.೮ ರಿಂದ ತಿಳಿಯಬಹುದು.

**ಕೋಷ್ಟಕ ೪.೮ : ವಸತಿಯಲ್ಲಿ ವಾಸವಾಗಿರುವವರ ಪ್ರಮಾಣ**

| ಕ್ರ.ಸಂ. | ವಿವರಗಳು | ವಿವಾಹಿತರು | | | ಅವಿವಾಹಿತರು | | | ಒಟ್ಟು | | |
|---|---|---|---|---|---|---|---|---|---|---|
| ೧. | ಲಿಂಗವಾರು ಹಂಚಿಕೆ | ಗಂ* | ಹೆ* | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು |
| ೨. | ಕುಟುಂಬದ ಸದಸ್ಯರ ಸಂಖ್ಯೆ | ೨೩೦ | ೨೯೨ | ೫೨೨ | ೨೩೨ | ೧೫೮ | ೩೯೦ | ೪೬೨ | ೪೫೦ | ೯೧೨ |

* ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

* ಗಂ= ಗಂಡು, *ಹೆ= ಹೆಣ್ಣು

ಕೋಷ್ಟಕ ೪.೮ನ್ನು ಅವಲೋಕಿಸಿದಾಗ ಗಣಿಯಲ್ಲಿರುವ ಕಾರ್ಮಿಕರ ವಸತಿಯಲ್ಲಿ ವಾಸಿಸುವವರ ಸಂಖ್ಯೆಯನ್ನು ತೋರಿಸುತ್ತದೆ. ಕ್ಷೇತ್ರಕಾರ್ಯಕ್ಕೆ ಆಯ್ದುಕೊಂಡ ಕಾರ್ಮಿಕ ಮಾಹಿತಿದಾರರು ೨೦೦ ಸಂಖ್ಯೆಯಲ್ಲಿದ್ದರೆ ಅವರ ಕುಟುಂಬದ ಸಹ ಸದಸ್ಯರ ಒಟ್ಟು ಸಂಖ್ಯೆ ೯೧೨ರಷ್ಟು ಇರುತ್ತದೆ. ಗಣಿ ಕಾರ್ಮಿಕರು ವಾಸವಾಗಿರುವ ಗುಡಿಸಲು ಮನೆ, ಶೀಟ್, ಮಣ್ಣಿನ ಮನೆ ಹಾಗೂ ತಾತ್ಕಾಲಿಕ ಶೆಡ್‌ಗಳೆಲ್ಲವೂ ಅತ್ಯಂತ ಚಿಕ್ಕ ಪ್ರಮಾಣದ ವಿಸ್ತೀರ್ಣವುಳ್ಳ ಮನೆಗಳಾಗಿವೆ. ಅವುಗಳ ಸರಾಸರಿ ವಿಸ್ತೀರ್ಣವು ೧೦x೧೫, ೧೨x೨೦, ೮x೧೦ ಹೀಗೆ ಅತ್ಯಂತ ಚಿಕ್ಕಪ್ರಮಾಣದಲ್ಲಿದೆ. ಅವುಗಳ ರಚನೆಯಲ್ಲಿ ಯಾವುದೇ ಮಾದರಿಯ ನಮೂನೆಗಳನ್ನು ನೋಡಲು ಸಾಧ್ಯವಿಲ್ಲ. ಎಲ್ಲಾ ಕಾರ್ಮಿಕರ ಮನೆಗಳ ಮಧ್ಯೆ ಒಂದು ಅಡ್ಡಗೋಡೆ, ಮಾತ್ರ ಅಡುಗೆಮನೆ ಹಾಗೂ ಪಡಸಾಲೆಯನ್ನು ಪ್ರತ್ಯೇಕಿಸುತ್ತದೆ. ಹಾಗೆಯೇ ಅಡ್ಡಗೋಡೆಯಿಂದ ಮರೆಮಾಡಿದ ಸ್ಥಳದಲ್ಲಿ ಅವರ ಅಡುಗೆಯ ಮನೆ, ದೇವರ ಜಗುಲಿ, ದಾಸ್ತಾನು ಕೋಣೆ ಎಲ್ಲವೂ ಒಂದೇ ಆಗಿರುತ್ತದೆ ಮತ್ತು ಅವರ ಪಡಸಾಲೆಯಲ್ಲಿರುವ ಜಾಗವೇ ಮಕ್ಕಳ ಆಟದ ಮೈದಾನ, ವಿಶ್ರಾಂತಿ ಗೃಹ, ಎಲ್ಲವೂ ಆಗಿರುವುದರಿಂದ, ಇಂತಹ ಚಿಕ್ಕ, ಚಿಕ್ಕ ಕೋಣೆಗಳಲ್ಲಿ ಗಂಡ ಹೆಂಡತಿಯ ಜೊತೆಗೆ ಕುಟುಂಬದ ಹಿರಿಯರು, ಮಕ್ಕಳೆಲ್ಲವೂ ಸೇರಿ ವಿಶ್ರಾಂತಿಯನ್ನು ಪಡೆಯಬೇಕಾಗಿರುವುದು ಅನಿವಾರ್ಯವೆಂಬಂತೆ ಜೀವಿಸುತ್ತಿದ್ದಾರೆ.

ಹೀಗೆ ಕಾರ್ಮಿಕರು ಸಾಮೂಹಿಕವಾಗಿ ತಮ್ಮ ಹಿರಿಯರು ಹಾಗೂ ಮಕ್ಕಳೊಂದಿಗೆ ಒಂದೆಡೆ ಮಲಗಿಕೊಳ್ಳುವುದರಿಂದ ವಿವಾಹಿತರ ಲೈಂಗಿಕ ಚಟುವಟಿಕೆಗೆ ಪ್ರತ್ಯೇಕವಾದ ಕೋಣೆಯ ವ್ಯವಸ್ಥೆ ಇಲ್ಲದ್ದರಿಂದ, ಮಕ್ಕಳ ಮನಸ್ಸಿನ ಮೇಲೆ ಹಿರಿಯರ ಲೈಂಗಿಕ ಚಟುವಟಿಕೆಗಳು ಬಹಳಷ್ಟು ಪ್ರಭಾವವನ್ನು

ಬೀರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಹೇಗೆಂದರೆ ದೈಹಿಕವಾಗಿ ದಣಿದ ದಂಪತಿಗಳು ಊಟ, ಮಧ್ಯಪಾನದಿಂದ ಬೇಗನೇ ನಿದ್ರೆಗೆ ಒಳಗಾಗುವ ಸಾಧ್ಯತೆ ಇರುವುದರಿಂದ, ಅವರು ನಿದ್ರೆಗಿಂತ ಮುಂಚೆಯೇ ಲೈಂಗಿಕ ಚಟುವಟಿಕೆಯಲ್ಲಿ ತೊಡಗುವ ಸಾಧ್ಯತೆ ಇರುವುದರಿಂದ ಆ ಮನೆಯಲ್ಲಿರುವ ಚಿಕ್ಕ ಮಕ್ಕಳು ತಂದೆ-ತಾಯಿ, ಕಿರಿಯ ಸಹೋದರರು ಲೈಂಗಿಕ ಚಟುವಟಿಕೆಯನ್ನು ವೀಕ್ಷಿಸಲು ಸಾಕಷ್ಟು ಅವಕಾಶವಿರುತ್ತದೆ. ಇಂತಹ ದೃಶ್ಯಗಳು ಮಕ್ಕಳ ಮಾನಸಿಕ, ಬೌದ್ಧಿಕ ಸಾಮರ್ಥ್ಯದ ಮೇಲೆ ಕೆಟ್ಟ ಪರಿಣಾಮವನ್ನುಂಟು ಮಾಡುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ. ಈ ಕಾರಣಗಳಿಂದಾಗಿ ಗಣಿ ಕಾರ್ಮಿಕರ ಮಕ್ಕಳಲ್ಲಿ ಕಡಿಮೆ ಶಿಕ್ಷಣ, ಬಾಲ್ಯವಿವಾಹ, ಚಿಕ್ಕವಯಸ್ಸಿನಲ್ಲಿಯೇ ಮಕ್ಕಳನ್ನು ಪಡೆದು ಅನೇಕ ರೋಗಗಳಿಗೆ ಒಳಗಾಗಿರುವುದನ್ನು ಕ್ಷೇತ್ರ ಕಾರ್ಯ ಸಂದರ್ಶನದಿಂದ ತಿಳಿದುಬರುತ್ತದೆ. (ವಕ್ತೃ: ಪುಲ್ಲಯ್ಯ (೬೦), ವಿ.ಎಸ್.ಲಾಡ್ ಅಂಡ್ ಸನ್ಸ್, ಕಾರ್ಮಿಕ, ಧರ್ಮಪುರ) ಹೀಗೆ ಕಾರ್ಮಿಕರು ಚಿಕ್ಕ-ಚಿಕ್ಕ ಮನೆಗಳಲ್ಲಿ ಬಹಳ ಜನರು ವಾಸಿಸುತ್ತಿರುವುದರಿಂದ ಹಲವಾರು ಸಮಸ್ಯೆಗಳನ್ನು ಎದುರಿಸ ಬೇಕಾಗಿರುವುದು ದುರಂತವೆಂದೇ ಹೇಳಬೇಕಾಗಿದೆ.

ಮುಂದಿನ ಕೋಷ್ಟಕ ೪.೯ನ್ನು ನೋಡಿದಾಗ ಕಾರ್ಮಿಕರು ವಾಸಿಸುವ ವಸತಿಗಳ ಸ್ಪಷ್ಟ ಚಿತ್ರಣದ ಅರಿವಾಗುತ್ತದೆ. ಜಾಗತೀಕರಣದ ಸಂದರ್ಭದಲ್ಲಿ ಉತ್ಪಾದನೆಯ ಎಲ್ಲಾ ಹಂತಗಳು ಯಾಂತ್ರೀಕೃತಗೊಂಡು ಹೆಚ್ಚು ಲಾಭವನ್ನು ಸಂಪಾದಿಸುತ್ತಿದ್ದರೂ, ಶೇಕಡ ೫೦ರಷ್ಟು ಗಣಿಕಾರ್ಮಿಕರು ಸೀಮೆ ಎಣ್ಣೆಯಲ್ಲಿ ತಮ್ಮ ಬದುಕನ್ನು ಕಂಡುಕೊಳ್ಳಬೇಕಾಗಿದೆ. ವಿದ್ಯುಚ್ಛಕ್ತಿಯ ಸೌಕರ್ಯವು ೫೦ ರಷ್ಟಿದ್ದರೂ ಅವೆಲ್ಲವೂ ಪರವಾನಿಗೆ ಇಲ್ಲದೇ ಸಾರ್ವಜನಿಕ ವಿದ್ಯುತ್‌ಲೇನ್ಸ್‌ಗೆ ಹಾಕಿ ಬಳಸಿಕೊಳ್ಳಲಾಗುತ್ತದೆ. ಇದಕ್ಕೆ GESCOMನ ಯಾವುದೇ ತಕರಾರು ಕಂಡುಬರುವುದಿಲ್ಲ. ಏಕೆಂದರೆ ಪ್ರತಿ ತಿಂಗಳು ಮೈನ್ಸ್‌ಗಳಿಂದ GESCOM ಕಛೇರಿಗೆ ವಿಶೇಷ ಕಾಣಿಕೆ ಸಂದಾಯವಾಗುತ್ತಿರುವುದರಿಂದ ಕಾರ್ಮಿಕರು GESCOM ರವರ ತಾಪತ್ರಯಗಳಿಂದ ಬಚಾವಾಗಿದ್ದಾರೆ. ಹೇಗೆಂದರೆ ಯಾವುದೇ ಒಂದು ಗಣಿ ಸಂಸ್ಥೆಗೆ ವಿದ್ಯುತ್ ಸಂಪರ್ಕ ಹೊಂದಲು ಲಕ್ಷಗಟ್ಟಲೇ ಹಣವನ್ನು ವೆಚ್ಚ ಮಾಡಿರುವುದಾಗಿ ಗಣಿ ಸಂಸ್ಥೆಯ ವ್ಯವಸ್ಥಾಪಕರೊಬ್ಬರ ಅನಿಸಿಕೆ. ಶೇಕಡ ೭೫ ರಷ್ಟು ಕಾರ್ಮಿಕರ ವಸತಿಗಳಲ್ಲಿ ಸ್ನಾನ ಮಾಡಲು ಪ್ರತ್ಯೇಕವಾದ ಕೋಣೆಯ ವ್ಯವಸ್ಥೆ ಇರುವುದಿಲ್ಲ. ಅವರೆಲ್ಲ ತಮ್ಮ ಮನೆಯ ಮುಂದೆ ಸ್ನಾನವನ್ನು ಮಾಡಬೇಕಾಗಿದೆ. ಸ್ತ್ರೀಯರು ಸೀರೆಯನ್ನು ಕಟ್ಟಿಕೊಂಡು ಇಲ್ಲವೇ ತಟ್ಟಿಯನ್ನು ಮರೆಮಾಡಿಕೊಂಡು ಸ್ನಾನ ಮಾಡಬೇಕಾಗಿದೆ. ಗಣಿ ಮಾಲೀಕರಾಗಲೀ, ಸಂಸ್ಥೆಯವರಾಗಲೀ ಕಾರ್ಮಿಕರ ಕ್ಯಾಂಪ್‌ಗಳನ್ನು ತಯಾರಿಸುವಾಗ ಯಾರೊಬ್ಬರು ಕಾರ್ಮಿಕರಿಗಾಗಿ ಸಾಮೂಹಿಕವಾಗಿ ಶೌಚಾಲಯವಾಗಲೀ ಅಥವಾ ಸ್ನಾನಗೃಹದ ನಿರ್ಮಾಣವನ್ನು ಕಾರ್ಯಗತಗೊಳಿಸಿಲ್ಲ. ಅವರೆಲ್ಲಾ ಕೇವಲ ಕಾರ್ಮಿಕರು ದುಡಿಯುವ ಗಂಟೆಗಳ ಬಗ್ಗೆ, ಕೆಲಸದ ಬಗ್ಗೆ ಇಲ್ಲವೆ ಲಾಭದ ಬಗ್ಗೆ ಚಿಂತಿಸುವರಾಗಿದ್ದಾರೆಯೇ ಹೊರತು, ಕಾರ್ಮಿಕರ ದೈನಂದಿನ ಜೀವನದ ಆಗುಹೋಗುಗಳ ಬಗ್ಗೆ ಅರಿವೆ ಇಲ್ಲದ ಮತ್ತು ಕಾರ್ಮಿಕರ ತಾಪತ್ರಯಗಳನ್ನು ಕಂಡು ಕಾಣದಂತೆ,

## ಕೋಷ್ಟಕ ೪.೯ : ಗಣಿ ಕಾರ್ಮಿಕರ ವಸತಿಯಲ್ಲಿರುವ ಸೌಕರ್ಯಗಳು

| ಕ್ರ.ಸಂ. | ಸೌಕರ್ಯಗಳ ವಿವರ | ವಿದ್ಯುಚ್ಛಕ್ತಿ ಬಳಕೆ | | | ಎಣ್ಣೆ ದೀಪ ಬಳಕೆ | | | ಸ್ನಾನದ ಗೃಹ | | | ಶೌಚಾಲಯ | | | ಇತರೆ | | |
|---|---|---|---|---|---|---|---|---|---|---|---|---|---|---|---|---|
| ೧. | ಹೇಳಿಕೆಗಳು | ಹೌ* | ಇ* | ಒ* | ಹೌ* | ಇ* | ಒ* | ಹೌ* | ಇ* | ಒ* | ಹೌ* | ಇ* | ಒ* | ಹೌ* | ಇ* | ಒ* |
| ೨. | ಕಾರ್ಮಿಕರ ಸಂಖ್ಯೆ | ೧೦೦ | ೧೦೦ | ೨೦೦ | ೧೦೦ | ೧೦೦ | ೨೦೦ | ೫೦ | ೧೫೦ | ೨೦೦ | -- | ೨೦೦ | ೨೦೦ | -- | ೨೦೦ | ೨೦೦ |
| ೩. | ಶೇಕಡವಾರು | ೫೦ | ೫೦ | ೧೦೦ | ೫೦ | ೫೦ | ೧೦೦ | ೨೫ | ೭೫ | ೧೦೦ | -- | ೧೦೦ | ೧೦೦ | -- | ೧೦೦ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ

*ಹೌ = ಹೌದು, *ಇ = ಇಲ್ಲ, ಒ =ಒಟ್ಟು

ಅವರ ನೋವು ನಲಿವುಗಳನ್ನು ಕೇಳಿ ಕೇಳದಂತೆ ಜಾಣ ಕಿವುಡ, ಕುರುಡ, ಮೂಕರಾಗಿ, ವಸತಿಗಳನ್ನು ನಿರ್ಮಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಭಾರತ ಸಂವಿಧಾನದ ಸಮಸ್ತ ಪ್ರಜೆಗಳಿಗೆ ಅನ್ವಯಿಸುವ ಉದ್ಘೋಷವನ್ನು ಪರಿಶೀಲಿಸುವುದಾದರೆ "ಭಾರತ ಸಂವಿಧಾನದ ರಾಜ್ಯ ನೀತಿಯ ನಿರ್ದೇಶಕ ತತ್ವಗಳ ಅನುಚ್ಛೇದ ೩೮ರ ಪ್ರಕಾರ "ರಾಜ್ಯವು ರಾಷ್ಟ್ರೀಯ ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯು ಸಾಮಾಜಿಕ ಆರ್ಥಿಕ ಮತ್ತು ರಾಜಕೀಯ ನ್ಯಾಯವು ಪ್ರಾಪ್ತವಾಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಸಾಧ್ಯವಾಗಬಹುದಷ್ಟರ ಮಟ್ಟಿಗೆ ಸುನಿಶ್ಚಿತಗೊಳಿಸುವ ಮತ್ತು ಸಂರಕ್ಷಣೆ ಮಾಡುವ ಹಾಗೂ ಜನತೆಯ ಕಲ್ಯಾಣವನ್ನು ಉನ್ನತಗೊಳಿಸಲು ಪ್ರಯತ್ನಿಸತಕ್ಕದ್ದು"[೩] ಎಂಬ ವ್ಯಾಖ್ಯಾನವನ್ನು ಸಮಸ್ತ ಭಾರತೀಯರಿಗಿರುವ ಅವಕಾಶಗಳ ಬಗ್ಗೆ ಪರಿಶೀಲಿಸುವುದಾದರೆ ಎಂಥಹ ವಿಪರ್ಯಾಸವಲ್ಲವೆ? ಏಕೆಂದರೆ ಗಣಿಯ ಉದ್ಯಮದ ಲಾಭಕ್ಕೆ ಅಥವಾ ಉತ್ಪಾದನೆ ಹೆಚ್ಚಳಕ್ಕೆ ಕಾರಣವಾಗುವ ಕಾರ್ಮಿಕರಿಗೆ ಯೋಗ್ಯವಾದ ವಸತಿ, ಕೂಲಿ, ಉಡುಪು, ದುಡಿಮೆಯ ಅವಕಾಶಗಳನ್ನು ಪರಿಶೀಲಿಸಿದಾಗ ನಮ್ಮ ಭಾರತ ಸಂವಿಧಾನದ ಆಶಯವು ಗೌಣವಾಗಿಯೇ ಉಳಿದು, ನಮ್ಮ ಸುತ್ತ-ಮುತ್ತಲಿನ ಸಮಾಜದ ಕ್ರೌರ್ಯತೆಯು ಮನದಟ್ಟಾಗುತ್ತದೆ. ಇದಕ್ಕೆ ಪೂರಕವಾಗಿ ಕಾರ್ಮಿಕರ ವಸತಿ ಪ್ರದೇಶದ ಸುತ್ತಮುತ್ತ ಲಭ್ಯವಿರುವ ವಿವಿಧ ಸೌಕರ್ಯಗಳನ್ನು ಮುಂದಿನ ಕೋಷ್ಟಕದ ೪.೧೦ ರಿಂದ ತಿಳಿಯಬಹುದು.

ನಾಗರಿಕತೆಯ ತುಟ್ಟ ತುದಿಯಲ್ಲಿರುವ ನಮಗೆ ವಸತಿ ಪ್ರದೇಶದ ಸಂಕೀರ್ಣತೆಯನ್ನು ಕಲ್ಪಿಸಿಕೊಂಡರೆ ನಮ್ಮ ಕಣ್ಣ ಮುಂದೆ ಏನೆಲ್ಲಾ ದೃಶ್ಯಗಳು ಮಿಂಚಿ ಮರೆಯಾಗುತ್ತವೆ. ಪ್ರಸ್ತುತ ಚಂದ್ರಗ್ರಹದ ಮೇಲೆ ಆಸ್ತಿಯನ್ನು ಕೊಳ್ಳುವ, ಮನೆಕಟ್ಟುವ ಆಲೋಚನೆಯುಳ್ಳ ಮಾನವನಿಗೆ ತನ್ನ ಸುತ್ತಲು ಬದುಕುತ್ತಿರುವ ಹಾಗೂ ದುಡಿಯುವ ವರ್ಗದ ಅಗತ್ಯ ಸೌಕರ್ಯಗಳ ಬಗ್ಗೆ ಕಲ್ಪನೆಯೇ ಇಲ್ಲವೇನೋ ಎಂಬಂತೆ ಗಣಿ ಕಾರ್ಮಿಕರ ವಸತಿಯ ಸುತ್ತಲಿನ ಸೌಕರ್ಯಗಳು ಚಿಂತೆಗೀಡು ಮಾಡುತ್ತಿವೆ. ಅದರಲ್ಲಿ ಶೇಕಡ ೭೦ರಷ್ಟು ಕುಡಿಯುವ ನೀರಿನ ಸೌಲಭ್ಯಗಳಿಲ್ಲದ ಕಾರ್ಮಿಕರ ವಸತಿ ಗೃಹಗಳಿವೆ, ಅವರು ಕುಡಿಯುವ ನೀರಿಗಾಗಿ ೨ ರಿಂದ ೩ ಕಿ.ಮೀ ದೂರ ಹೋಗಬೇಕಾಗಿದೆ. ಇಲ್ಲವೇ ಕಂಪನಿಯ ವ್ಯವಸ್ಥೆ ಮಾಡಿದ ಲಾರೀ ಟಂಪೋಗಳಿಂದ ಪೂರೈಸುವ ನೀರನ್ನು ಅವಲಂಬಿಸಬೇಕಾಗಿದೆ. ಹಾಗೆಯೇ ಮಾನವನ ದೈನಂದಿನ ಆಹಾರ ತಯಾರಿಕೆಗೆ ಅಗತ್ಯವಾದ ಹಿಟ್ಟಿನ ಗಿರಣಿಯ ಸೌಲಭ್ಯವು ಯಾವುದೇ ಕಾರ್ಮಿಕ ಕ್ಯಾಂಪ್‌ಗಳಲ್ಲಿ ಶೇಕಡ ೧೦೦ರಷ್ಟು ಇಲ್ಲವಾಗಿದೆ. ಕಾರ್ಮಿಕರು ಹಿಟ್ಟಿನ ಗಿರಣಿಗಾಗಿ ೮ ರಿಂದ ೧೦ ಕಿ.ಮೀ. ದೂರ ಕ್ರಮಿಸಬೇಕಾಗಿದೆ. ಮಕ್ಕಳ ಲಾಲನೆ, ಪಾಲನೆ ಹಾಗೂ ಪೋಷಣೆಗಳ ಬಗ್ಗೆ ಜಾಗೃತಿಯನ್ನು ಮೂಡಿಸುವ, ಪೌಷ್ಟಿಕ ಆಹಾರವನ್ನು ಒದಗಿಸಲು ಅಗತ್ಯವಾದ ಅಂಗನವಾಡಿ ಅಥವಾ ಬಾಲಾವಿಹಾರಗಳ ಸೌಲಭ್ಯವು ಶೇಕಡ ೨೦ರಷ್ಟು ಇದ್ದರೆ ಶೇಕಡ ೮೦ರಷ್ಟು ಗಣಿ ಕಾರ್ಮಿಕರ ಮಕ್ಕಳು ಅವುಗಳಿಂದ ವಂಚಿತರಾಗಿದ್ದಾರೆ. ಗಣಿ ಭೂ ವಿಜ್ಞಾನ ಇಲಾಖೆಯ ನೀತಿ ನಿಯಮಗಳಂತೆ ಕಾರ್ಮಿಕರ ಮಕ್ಕಳ ಪಾಲನೆ ಪೋಷಣೆಗೆ ಅಗತ್ಯವಾಗಿ ಕ್ರಷ್‌ಗಳನ್ನು ಆಯಾ

## ಕೋಷ್ಟಕ ೪.೧೦

### ಕಾರ್ಮಿಕರ ವಸತಿ ಪ್ರದೇಶದಲ್ಲಿರುವ ಸೌಲಭ್ಯಗಳ ವಿವರ

| ಕ್ರ. ಸಂ. | ಸೌಲಭ್ಯಗಳ ವಿವರ | ಕುಡಿಯುವ ನೀರು | | | ಹಿಟ್ಟಿನ ಗಿರಣಿ | | | ಅಂಗನವಾಡಿ | | | ಕ್ರಷ್‌ಗಳು | | | ಪ್ರಾಥಮಿಕ ಶಾಲೆ | | | ಮನೋರಂಜನೆ ಸೌಲಭ್ಯ | | | ವೈದ್ಯಕೀಯ ಸೌಕರ್ಯ | | | ಹೋಟೆಲ್ ಅಂಗಡಿ | | | ಸರಾಯಿ ಅಂಗಡಿ | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ೧. | ಹೇಳಿಕೆಗಳು | ಇದೆ | ಇಲ್ಲ | ಒ* | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ |
| ೨. | ಕಾರ್ಮಿಕರ ಸಂಖ್ಯೆ | ೬೦ | ೧೪೦ | ೨೦೦ | -- | ೨೦೦ | ೨೦೦ | ೪೦ | ೧೬೦ | ೨೦೦ | -- | ೨೦೦ | ೨೦೦ | ೪೦ | ೧೬೦ | ೨೦೦ | -- | ೨೦೦ | ೨೦೦ | ೩೦ | ೧೭೦ | ೨೦೦ | ೪೦ | ೧೬೦ | ೨೦೦ | ೧೪೦ | ೬೦ | ೨೦೦ |
| ೩. | ಶೇಕಡವಾರು | ೩೦ | ೭೦ | ೧೦೦ | -- | ೧೦೦ | ೧೦೦ | ೨೦ | ೮೦ | ೧೦೦ | -- | ೧೦೦ | ೧೦೦ | ೨೦ | ೮೦ | ೧೦೦ | -- | ೧೦೦ | ೧೦೦ | ೧೫ | ೮೫ | ೧೦೦ | ೨೦ | ೮೦ | ೧೦೦ | ೭೦ | ೩೦ | ೧೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ

*ಒ = ಒಟ್ಟು

ಕಂಪನಿಗಳು ಆರಂಭಿಸುವುದು ಅವಶ್ಯಕ. ಆದರೆ ಶೇಕಡ ೯೩.೫ ರಷ್ಟು ಗಣಿ ಸಂಸ್ಥೆಯ ಕಾರ್ಮಿಕರ ಕಾಲೋನಿಯಲ್ಲಿ ಚಿಕ್ಕಮಕ್ಕಳಿಗಾಗಿ ಕ್ರಷ್‌ಗಳ ಸೌಲಭ್ಯವಿರುವುದಿಲ್ಲ ಆದರೆ ಕಡ್ಡಾಯ ಶಿಕ್ಷಣದ ಅಂಗವಾಗಿ ಕೇವಲ ಶೇಕಡ ೨೦ ರಷ್ಟು ಪ್ರಾಥಮಿಕ ಶಾಲೆಗಳ ಸೌಲಭ್ಯವು ಕಾರ್ಮಿಕ ವಸತಿಗೃಹಗಳ ಸಮೀಪವಿದ್ದು, ಉಳಿದ ಶೇಕಡ ೮೦ರಷ್ಟು ಕಾರ್ಮಿಕರ ಶಿಬಿರಗಳು ಶಿಕ್ಷಣದ ಸೌಕರ್ಯದಿಂದ ವಂಚಿತಗೊಂಡಿವೆ. ಗಣಿ ಕಾರ್ಮಿಕರಿಗೆ ತಮ್ಮ ದಿನನಿತ್ಯದ ದುಡಿಮೆ, ದೈನಂದಿನ ಬದುಕೇ ಗಂಡಾಂತರವಾಗಿರುವಾಗ, ಮನೋರಂಜನೆ ಮತ್ತು ವೈದ್ಯಕೀಯ ಸೇವೆಗಳು ಕನಸಿನ ಮಾತಾಗುತ್ತವೆ ಎಂದೂ ಹೇಳಬಹುದು. ಆದರೆ ದುಡಿಯುವ ವರ್ಗದ ಮನಸ್ಥಿತಿಯನ್ನರಿತ ಕೆಲವು ವ್ಯವಹಾರಿಕ ಮನೋಭಾವನೆಯುಳ್ಳ ವ್ಯಕ್ತಿಗಳು ಚಹದ ಅಂಗಡಿ, ಹೋಟೆಲ್, ತಂಬಾಕು, ಗುಟ್ಕಾದ ಮಾರಾಟವು, ಪ್ರತಿಯೊಂದು ಕಾರ್ಮಿಕರ ವಸತಿಗೃಹಗಳಲ್ಲಿ ತಲೆ ಎತ್ತಿವೆ. ಹಾಗೆಯೇ ದೈನಂದಿನ ದುಡಿಮೆಯಲ್ಲಿ ಶ್ರಮವಹಿಸಿ, ಕಷ್ಟಪಟ್ಟು ದಣಿದ ಕಾರ್ಮಿಕರಿಗೆ ಟಾನಿಕ್ ರೂಪವಾಗಿ ಎಲ್ಲಾ ಕಾರ್ಮಿಕರ ವಸತಿ ಕ್ಯಾಂಪ್‌ಗಳಲ್ಲಿ ಸಾರಾಯಿ ಸೌಲಭ್ಯ ಇವೆ. ದಿನಾಲು ಕುಡಿಯುವ ನೀರಿನ ಪೂರೈಕೆಯಲ್ಲಿ ವ್ಯತ್ಯಾಸವಾದರೂ ಸರಾಯಿ ಪೂರೈಕೆಯಲ್ಲಿ ಮಾತ್ರ ಯಾವುದೇ ಅಡೆ ತಡೆಗಳನ್ನು ಒಂದು ದಿನವು ಕಾಣದಂತೆ ಶಿಸ್ತುಬದ್ಧವಾಗಿ ಪೂರೈಸಲಾಗುತ್ತಿರುವುದನ್ನು ಮನಗಂಡಾಗ, ದುಡಿಯುವ ಗಣಿ ಕಾರ್ಮಿಕರ ಬಗ್ಗೆ ನಮ್ಮ ವ್ಯವಸ್ಥೆಯ ಮನೋಧರ್ಮದ ತಂತ್ರಗಳನ್ನು ಅರಿತುಕೊಳ್ಳಬಹುದು.

### ೪.೩. ಉದ್ಯೋಗ

ಪ್ರಸ್ತುತ ಸಮಾಜದ ಆಲೋಚನಾ ಪದ್ಧತಿ ಹಾಗೂ ಸನ್ನಿವೇಶಗಳು ಅನೇಕ ಬದಲಾವಣೆಗಳಿಗೆ ಒಳಗಾಗಿವೆ. ಈಗಾಗಲೇ ಅಸ್ತಿತ್ವದಲ್ಲಿರುವ ಅನೇಕ ಆಚರಣೆ ಮತ್ತು ನಂಬಿಕೆಗಳು ದಿನೇ, ದಿನೇ ಸಡಿಲಗೊಳ್ಳುತ್ತಾ ಸಾಗಿವೆ. ಅವುಗಳಲ್ಲಿ ಮುಖ್ಯವಾಗಿ ಪುರುಷಾಧಿಪತ್ಯದ ಅನೇಕ ಲಕ್ಷಣಗಳು ಸವಕಲು ಹಿಡಿದ ನಾಣ್ಯದಂತೆ ನಮ್ಮ ಸುತ್ತಲಿನ ವ್ಯವಸ್ಥೆಯಲ್ಲಿ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಅದರ ಜೊತೆಗೆ ಪುರುಷನಂತೆ ಮಹಿಳೆಗೂ ಸಮಾನ ಅವಕಾಶ ಮತ್ತು ಸಂದರ್ಭಗಳನ್ನು ಕಲ್ಪಿಸಿಕೊಡುವ ಕ್ರಮಗಳನ್ನು ಸಮಾಜದ ಮುಖ್ಯವಾಹಿನಿಯಲ್ಲಿ ಚರ್ಚಿಸುವ, ಪರಿಶೀಲಿಸುವ ಹಾಗೂ ಪರಿಷ್ಕರಿಸುವ ಆಯಾಮಗಳಿಗೆ ಹೆಚ್ಚು ಮನ್ನಣೆ ಸಿಗುತ್ತಿದೆ. ಇಂತಹ ಕಾಲಘಟ್ಟದಲ್ಲಿ ಸಮಾಜದಲ್ಲಿ ಬಳಕೆಯಲ್ಲಿದ್ದ ಅನೇಕ ಪದ್ಧತಿ ಹಾಗೂ ಸಂಪ್ರದಾಯಗಳು, ನವೀಕರಣಗೊಳ್ಳುತ್ತಾ ಆಧುನಿಕತೆಯನ್ನು ಮೈಗೂಡಿಸಿ ಕೊಳ್ಳುತ್ತಿವೆ. ಇಂದಿನ ಆಧುನೀಕರಣ ಮತ್ತು ನಗರೀಕರಣದ ಜೀವನ ಶೈಲಿಗೆ ಹಳ್ಳಿಗಳ ಸಾಮಾಜಿಕ ರೂಡಿ-ಪದ್ಧತಿಗಳು ಮಾರ್ಪಡಾಗುತ್ತಿರುವುದರಿಂದ ಚಾಲ್ತಿಯಲ್ಲಿದ್ದ ಅನೇಕ ಸಂಪ್ರದಾಯಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳು ತಮ್ಮ ಮೂಲನೆಲೆಯನ್ನು ಕಳೆದುಕೊಳ್ಳುವ ಹಂತಕ್ಕೆ ಬಂದು ನಿಂತಿವೆ.

ಇಂತಹ ಪ್ರಗತಿಪರವಾದ ಬೆಳವಣಿಗೆಯೂ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಅವಿಭಕ್ತಕುಟುಂಬ ಪದ್ಧತಿ, ಹಿರಿಯರ ಪಾಲನೆ-ಪೋಷಣೆ, ಧಾರ್ಮಿಕ ನಂಬಿಕೆಗಳು ಹಾಗೂ ಅನೇಕ ಮೂಢನಂಬಿಕೆ ಮತ್ತು ವಿವಿಧ ಕಂದಾಚಾರಗಳ ಪದ್ಧತಿಯು ಕಣ್ಮರೆಗೊಳ್ಳುವುದರ ಜೊತೆಗೆ ವಿಭಕ್ತ ಕುಟುಂಬ ಪದ್ಧತಿ, ಸ್ವಹಿತ ಪಾಲನೆ, ಸ್ವಧರ್ಮ ನೀತಿ, ಜಾತೀಯತೆ ಅಂತರ್‌ಜಾತಿಯ ವಿವಾಹ, ಅವಿಶ್ವಾಸ, ಮೋಸ, ವಂಚನೆ ಮತ್ತು ಪರಸ್ಪರ ಸ್ವಾವಲಂಬನೆಯ ನಡವಳಿಕೆಗಳು ಗಟ್ಟಿಗೊಳ್ಳುವ ಮೂಲಕ, ಹಳ್ಳಿಯ ಸಂಸ್ಕೃತಿಯನ್ನು ಬದಲಾಯಿಸುವ ಮಟ್ಟಕ್ಕೆ ಪ್ರಖ್ಯಾತಿಯನ್ನು ಪಡೆಯುತ್ತಿವೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಸಮಾಜ, ವ್ಯಕ್ತಿ ಮತ್ತು ಸಮುದಾಯಗಳಿಗೆ ಉದ್ಯೋಗ, ಅಥವಾ ದುಡಿಮೆ ಅಥವಾ ಗಳಿಕೆಯು ಬದುಕಿನ ನಿರ್ವಹಣೆಗೆ ಅತ್ಯವಶ್ಯಕವಾಗಿ ಕಂಡುಬರುತ್ತಿದೆ. ಜಾಗತೀಕರಣದ ಸನ್ನಿವೇಶದಲ್ಲಿ ಆಧುನೀಕತೆ, ತಂತ್ರಜ್ಞಾನವು ಪ್ರತಿಯೊಬ್ಬರನ್ನು ಯಾವುದೇ ಸ್ವರೂಪದ ಉದ್ಯೋಗದಲ್ಲಿ ತೊಡಗುವ, ಇಲ್ಲವೇ ಬೇರೆ ಬೇರೆ ಉದ್ಯೋಗದ ಮೂಲಗಳನ್ನು ಹುಡುಕುವ ಜಾಯಮಾನವನ್ನು ಹುಟ್ಟುಹಾಕಿದೆ. ಹೀಗಾಗಿ ಮಾನವನು ತನ್ನ ದೈನಂದಿನ ಕಾರ್ಯವನ್ನಾಗಿ ಉದ್ಯೋಗವನ್ನು ರೂಪಿಸಿಕೊಳ್ಳುತ್ತಿದ್ದಾನೆ. ಇಂತಹ ಚಟುವಟಿಕೆಗಳಿಂದಾಗಿ ಪರಸ್ಪರ ಅವಲಂಬನೆ, ಸಾಮಾಜಿಕ ಜವಾಬ್ದಾರಿ, ಹಿರಿಯರ ಪಾಲನೆ-ಪೋಷಣೆ ಹಾಗೂ ಧಾರ್ಮಿಕ ಮತ್ತು ನೈತಿಕ ಮೌಲ್ಯಗಳು ತಮ್ಮ ಅರ್ಥವನ್ನು ಕಳೆದುಕೊಂಡು, ಪ್ರತಿಯೊಂದು ಜಾತಿ, ಸಮಾಜ ಹಾಗೂ ಸಮುದಾಯಗಳು ಸ್ವಹಿತ, ಸ್ವಧರ್ಮ, ಸ್ವಉದ್ಧಾರ ಮತ್ತು ಸ್ವಅಭಿವದ್ಧಿಯನ್ನು ಪ್ರಧಾನವಾಗಿ ಕಾಣುತ್ತಿರುವುದರಿಂದ ಉದ್ಯೋಗ, ವ್ಯಾಪಾರ ಹಾಗೂ ವ್ಯವಹಾರಗಳಿಗೆ ವಿಶಾಲವಾದ ಕಾರ್ಯ ವ್ಯಾಪ್ತಿ ಪ್ರಾಪ್ತವಾಗಿದೆ. ಈ ಹಿನ್ನೆಲೆಯಲ್ಲಿ ಆಯಾ ಉದ್ಯೋಗ, ದುಡಿಮೆ, ಉಳಿತಾಯಗಳು ಪ್ರಧಾನವಾಗಿ ಕಂಡುಬರುತ್ತಿರುವುದರಿಂದ, ಜನರ ಆದಾಯ, ಅನುಭೋಗದ ವೆಚ್ಚ ಹಾಗೂ ಸಾಲದ ಸೌಕರ್ಯಗಳು ಪ್ರಸ್ತುತ ಸಮಾಜದಲ್ಲಿ ಜನರ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಮತ್ತು ಸಾಮಾಜಿಕ, ರಾಜಕೀಯ ಬಲಬಲಾಗಳ ನಿರ್ಣಯದಲ್ಲಿ ಪ್ರಮುಖ ಮಾನದಂಡವಾಗಿ ಪರಿಗಣಿಸಲಾಗುತ್ತಿದೆ.

ಈ ಹಿನ್ನೆಲೆಯಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಉತ್ಪಾದನೆಯಲ್ಲಿ ಪಾಲ್ಗೊಂಡ ಕಾರ್ಮಿಕರ ಉದ್ಯೋಗದ ಸ್ವರೂಪ ಹೇಗಿದೆ? ಅವರ ಆದಾಯದ ಪ್ರಮಾಣವೆಷ್ಟು? ದುಡಿಮೆ ದಿನಗಳು ಹಾಗೂ ದುಡಿಮೆಗೆ ವ್ಯಯಿಸಬೇಕಾದ ಕಾಲವಧಿಯೆಷ್ಟು? ಹೆಚ್ಚುವರಿ ಕಾಲಾವಧಿಯ ದುಡಿಮೆಗೆ ಸಿಗುವ ಇನ್ನಿತರ ಸೌಲಭ್ಯಗಳನ್ನು ಅರಿತಾಗ ಗಣಿ ಕಾರ್ಮಿಕರ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನಗಳನ್ನು ಸರಳವಾಗಿ ಗುರುತಿಸಲು ಸಾಧ್ಯ. ಈ ಕಾರಣದಿಂದಾಗಿ ಗಣಿಯಲ್ಲಿರುವ ಕಾರ್ಮಿಕರ ದುಡಿಮೆಯ ಅವಕಾಶಗಳನ್ನು ೪.೧೧ರ ಕೋಷ್ಟಕದಿಂದ ನೋಡಬಹುದು.

**ಕೋಷ್ಟಕ ೪.೧೧ : ಕಾರ್ಮಿಕರ ದುಡಿಮೆಯ ದಿನಗಳು**

| ಕ್ರ.ಸಂ. | ವಾರಕ್ಕೆ | ತಿಂಗಳ ಆದಾಯ ವೃತ್ತಿ | ಕಾರ್ಮಿಕರ ಸಂಖ್ಯೆ | ಶೇಕಡಾವಾರು |
|---|---|---|---|---|
| ೧. | ೭ ದಿನಗಳು | ೧೫೦೦ ಅಡುಗೆ ಮಾಡುವವ ಮತ್ತು ಕಛೇರಿ ಸೇವಕ | ೧೦ | ೫ |
| ೨. | ೪ ದಿನಗಳು | ೧೮೦೦ ವಾಚ್‌ಮನ್ | ೧೫ | ೭.೫ |
| ೩. | ೫ ದಿನಗಳು | ೨೫೦೦ ಡ್ರೈವರ್‍ಸ್ | ೨೦ | ೧೦ |
| ೪. | ೪ ದಿನಗಳು | ೧೨೦೦ ಲೇಬರ್‍ಸ್ | ೧೦೫ | ೫೨.೫ |
| ೫. | ೩ ದಿನಗಳು | ೧೮೦೦ ಲೋಡರ್‍ಸ್ | ೫೦ | ೨೫ |
| | ಒಟ್ಟು | | ೨೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈ ಮೇಲಿನ ೪.೧೧ರ ಕೋಷ್ಟಕವು ಗಣಿಯಲ್ಲಿ ದುಡಿಯುವ ಕಾರ್ಮಿಕರ ಒಟ್ಟು ದುಡಿಮೆಯ ದಿನಗಳನ್ನು ಹಾಗೂ ಅವರು ಗಳಿಸುವ ಆದಾಯವನ್ನು ತೋರಿಸುತ್ತದೆ. ಜಾಗತೀಕರಣದ ಸನ್ನಿವೇಶದಲ್ಲಿ ಯಾವುದೇ ಉತ್ಪಾದನಾ ವಲಯವನ್ನು ಗಣನೆಗೆ ತೆಗೆದುಕೊಂಡರೂ, ಅವುಗಳ ಮುಖ್ಯ ಉದ್ದೇಶ ಲಾಭವಾಗಿರುವುದರಿಂದ ಕಾರ್ಮಿಕರ ದುಡಿಯುವ ಅವಕಾಶಗಳು ಕಡಿಮೆಯೆಂದೇ ಹೇಳಬೇಕಾಗಿದೆ. ಏಕೆಂದರೆ ಇಂದು ಕಬ್ಬಿಣ ಅದಿರು ಮತ್ತು ಅದರ ಪೂರಕ ಉತ್ಪನ್ನಗಳಾದ, ಫೈನ್ಸ್, ಲಂಫಿ, ಪೆಬಲ್ಸ್ ಇತ್ಯಾದಿ ಉತ್ಪನ್ನಕ್ಕೆ ಜಾಗತೀಕ ಮಾರುಕಟ್ಟೆ ಲಭಿಸಿರುವುದರಿಂದ, ಕಬ್ಬಿಣದ ಕಚ್ಚಾ ವಸ್ತುವಿಗಿರುವ ಬೇಡಿಕೆಯ ಪರಿಣಾಮವನ್ನು ಸದುಪಯೋಗಪಡಿಸಿಕೊಳ್ಳಲು, ಗಣಿಮಾಲೀಕರು, ಕೊಳ್ಳುವವರು ಹಾಗೂ ಮಧ್ಯವರ್ತಿಗಳು ಆದಷ್ಟೂ ಯಾಂತ್ರೀಕೃತ ಉತ್ಪಾದನಾ ಚಟುವಟಿಕೆಗಳಿಗೆ ಹೆಚ್ಚು ಆದ್ಯತೆಯನ್ನು ನೀಡುತ್ತಿದ್ದಾರೆ. ಇಂತಹ ಲಕ್ಷಣವು ಜಿಲ್ಲೆಯಲ್ಲಿಯ ಗಣಿಗಾರಿಕೆಯಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ಈ ಕಾರಣದಿಂದಾಗಿಯೇ ಶೇಕಡ ೫೨.೫ ರಷ್ಟು ಕಾರ್ಮಿಕರು ವಾರಕ್ಕೆ ಕೇವಲ ೪ ದಿನಗಳ ದುಡಿಮೆಯಲ್ಲಿ ಸಂತೃಪ್ತಿಯನ್ನು ಕಾಣಬೇಕಾಗಿದೆ. ಶೇಕಡ ೨೫ ರಷ್ಟು ಕಾರ್ಮಿಕರಿಗೆ ವಾರಕ್ಕೆ ಕೇವಲ ೩ ದಿನಗಳಷ್ಟು ಮಾತ್ರ ಕೆಲಸ ದೊರೆಯುತ್ತಿದೆ. ಅವರೆಂದರೆ ಲೋಡರ್‍ಸ್. ಇವರು ಒಂದು ಟ್ರಿಪ್ ಕಲ್ಲನ್ನು ಲಾರಿಗೆ ಲೋಡ್ ಮಾಡಿದರೆ ಸುಮಾರು ರೂ. ೧೮೦ ರಿಂದ ೨೦೦ ರೂ.ಗಳವರೆಗೆ ಪ್ರತಿಫಲವನ್ನು ಪಡೆಯುತ್ತಾರೆ. ಒಂದು ಟ್ರಿಪ್ ಕಲ್ಲನ್ನು ಲೋಡ್ ಮಾಡಲು ೩ ರಿಂದ ೪ ಜನರು ಸೇರಿ ಕೆಲಸ ಮಾಡಬೇಕಾಗುತ್ತದೆ. ಆದರೆ ಇತ್ತೀಚಿಗೆ ಗಣಿಗಳಲ್ಲಿ ವ್ಹೀಲ್ ಲೋಡರ್‍ಸ್, ಹಿಟಾಚೀ, ಟೈರಾಕ್ಸ್ ಇತ್ಯಾದಿಗಳ ಬಳಕೆ ಹೆಚ್ಚಿರುವುದರಿಂದ ಕಾರ್ಮಿಕರ ಲೋಡಿಂಗ್ ಕೆಲಸಕ್ಕೂ ಸಂಚಕಾರ ಒದಗಿಬಂದಿದೆ ಎಂಬ ಕಳವಳ ಲೋಡಿಂಗ್‌ಮಾಡುವ ಕಾರ್ಮಿಕರಲ್ಲಿದೆ. ಶೇಕಡ ೧೦ರಷ್ಟು ಡ್ರೈವರ್‍ಸ್

ಅಥವಾ ಆಪರೇಟರ್ಸ್ ಅಥವಾ ಕ್ಲೀನರ್ಸ್ ಅಥವಾ ಹೆಲ್ಪರ್ಸ್‌ಗಳ ದರ್ಜೆಯಲ್ಲಿ ಬರುವವರು ೨೪ ತಾಸುಗಳ ಕೆಲಸಮಾಡಿ ಪುನಃ ೨೪ ತಾಸು ವಿಶ್ರಾಂತಿಗೆ ಅವಕಾಶವಿರುವುದರಿಂದ ಈ ವರ್ಗದವರಿಗೆ ೧೫ ದಿನದ ದುಡಿಮೆ ದೊರಕಿದರೂ ಸಹ, ವೇತನದ ಪ್ರಮಾಣ ಸುಮಾರು ರೂ. ೧೫೦೦ ಗಳಿಂದ ರೂ. ೩೦೦೦ ಗಳವರೆಗೆ ಇರುತ್ತದೆ.

ಶೇಕಡ ೭.೫ ರಷ್ಟು ಕಾರ್ಮಿಕರು ಗಣಿ ಸಂಸ್ಥೆಗಳಲ್ಲಿ ಸೂಪರ್‌ವೈಸರ್ಸ್, ವಾಚಮನ್ ಕೆಲಸವನ್ನು ಮಾಡುವವರಾಗಿದ್ದು, ಇವರಿಗೆ ವಾರಕ್ಕೆ ಕೇವಲ ೪ ದಿನಗಳ ಕಾಲಾವಧಿಯ ದುಡಿಮೆಯ ಅವಕಾಶವಿರುತ್ತದೆ. ಈ ವರ್ಗದ ಕಾರ್ಮಿಕರು ದಿನವೊಂದಕ್ಕೆ ಸುಮಾರು ೪೦ ರೂ.ಗಳಿಂದ ೬೦ ರೂ.ಗಳವರೆಗೆ ಕೂಲಿಯನ್ನು ಪಡೆಯುತ್ತಾರೆ. ಇವರ ದುಡಿಮೆಯ ಸಹ ೨೪ ಗಂಟೆಗಳ ಕೆಲಸವಾಗಿರುತ್ತದೆ. ಹೀಗಾಗಿ ಈ ವರ್ಗದವರಿಗೆ ೧೫ ದಿನಗಳ ವಿಶ್ರಾಂತಿ ಸಿಗುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಹೆಚ್ಚು ಸಮಯ ಹಾಗೂ ಅಧಿಕ ಶ್ರಮವಹಿಸಿ ಕೆಲಸ ಮಾಡುವ ಕಾರ್ಮಿಕರಿಗೆ ಕಡಿಮೆ ಪ್ರಮಾಣದ ಕೂಲಿಯನ್ನು ಮತ್ತು ಕಡಿಮೆ ಸಮಯ ಹಾಗೂ ಶ್ರಮವಲ್ಲದ ಕೆಲಸವನ್ನು ಮಾಡುವ ಕಾರ್ಮಿಕರಿಗೆ ಹೆಚ್ಚು ವೇತನವನ್ನು ಪಡೆಯುವುದನ್ನು ೪.೧೨ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೪.೧೨ : ಕಾರ್ಮಿಕರು ದುಡಿಯುವ ಅವಧಿ**

| ಕ್ರ.ಸಂ. | ಕಾಲಾವಧಿ | ಉದ್ಯೋಗದ ಸ್ವರೂಪ | ಕೂಲಿಯ ದರ | ಕಾ.ಸಂಖ್ಯೆ | ಶೇ.ವಾರು |
|---|---|---|---|---|---|
| ೧. | ೮-೧೦ಗಂಟೆ | ಲೇಬರ್ ವರ್ಕ್‌ರ್ಸ್ | ೫೦-೮೦ | ೧೭೫ | ೮೭.೫ |
| ೨. | ೧೧-೧೨ಗಂಟೆ | ಸೂಪರ್‌ವೈಸರ್/ವಾಚಮನ್ | ೪೦-೬೦ | ೧೦ | ೫ |
| ೩. | ೧೩-೨೪ಗಂಟೆ | ಡ್ರೈವರ್/ಕ್ಲೀನರ್ | ೫೦-೧೨೦ | ೧೫ | ೭.೫ |
| ಒಟ್ಟು | | | | ೨೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಈ ಮೇಲಿನ ಕೋಷ್ಟಕವು ಗಣಿಯಲ್ಲಿರುವ ಕಾರ್ಮಿಕರ ದುಡಿಯುವ ಕಾಲಾವಧಿಯನ್ನು ತೋರಿಸುತ್ತದೆ. ಶೇಕಡ ೮೭ರಷ್ಟು ಕಾರ್ಮಿಕರು ಕೇವಲ ೫೦ ರೂಪಾಯಿಗಳಿಂದ ೮೦ ರೂ.ಗಳಲ್ಲಿ ಒಳಗಡೆ ಕೂಲಿಯನ್ನು ಪಡೆಯಲು ದಿನನಿತ್ಯ ೮ ರಿಂದ ೧೦ ಗಂಟೆಗಳಷ್ಟು ಕೆಲಸವನ್ನು ನಿರ್ವಹಿಸಬೇಕಾಗಿದೆ. ಈ ವರ್ಗದಲ್ಲಿ ಹೆಚ್ಚಾಗಿ ಮಹಿಳಾ ಕಾರ್ಮಿಕರು ಕಂಡುಬರುತ್ತಾರೆ. ಅವರಿಗೆ ಸಹಾಯಕರಾಗಿ ಬಾಲಕಾರ್ಮಿಕರು, ವೃದ್ಧರು ಸಹ ಕೆಲಸದಲ್ಲಿ ಸಹಕರಿಸುತ್ತಾರೆ. ಕೆಲವು ವಾಚಮನ್ ಹಾಗೂ ಸೂಪರ್‌ವೈಸರ್ಸ್‌ಗಳು ೧೨ ಗಂಟೆಗಳ ಸೇವೆಯನ್ನು ರೂ. ೪೦ ರಿಂದ ೬೦ ರೂ.ಗಳ ಕೂಲಿಗೆ ತಮ್ಮ ಸೇವೆಯನ್ನು

ಮಾರಾಟ ಮಾಡಿಕೊಳ್ಳುತ್ತಿದ್ದಾರೆ. ಶೇಕಡ ೭.೫ ರಷ್ಟು ಕಾರ್ಮಿಕರು ರೂ. ೫೦ ಗಳಿಂದ ೧೨೦ ರೂ.ಗಳವರೆಗೆ ೨೪ ಗಂಟೆಗಳ ಸೇವೆಗೆ ಪ್ರತಿಫಲವಾಗಿ ವೇತನವನ್ನು ಪಡೆದುಕೊಳ್ಳುತ್ತಿದ್ದಾರೆ. ಈ ವರ್ಗದಲ್ಲಿ ಡ್ರೈವರ್ಸ್, ಕ್ಲೀನರ್ಸ್, ಆಪರೇಟರ್ಸ್, ಹೆಲ್ಪರ್ಸ್‌ಗಳು ಕಂಡುಬರುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ನಮ್ಮ ಸುತ್ತಲಿನ ಸಾಮಾಜಿಕ ವ್ಯವಸ್ಥೆಯಲ್ಲಿ ಉದ್ಯೋಗ, ಮತ್ತು ಆದಾಯದ ಪ್ರಮಾಣಗಳು ಸಾಮಾಜಿಕ ಸ್ಥಾನಮಾನಗಳ ನಿರ್ಣಾಯದಲ್ಲಿ ಪ್ರಮುಖವೆಂದೇ ಪರಿಭಾವಿಸಬೇಕಾಗಿದೆ. ಹೇಗೆಂದರೆ ಹೆಚ್ಚೂ ಶ್ರಮದಾಯಕ ಉದ್ಯೋಗಕ್ಕೆ ಕಡಿಮೆ ವೇತನ, ಕಡಿಮೆ ಆದಾಯ, ಕಡಿಮೆ ಜೀವನಮಟ್ಟಗಳಿಂದಾಗಿ, ಅಂತಹ ಕಾರ್ಮಿಕರಿಗೆ ಸಮಾಜದಲ್ಲಿ ದೊರೆಯುವ ಸಾಮಾಜಿಕ ಸ್ಥಾನಮಾನಗಳು ಕೆಳಮಟ್ಟಗಳಲ್ಲಿರುತ್ತವೆ. ಹಾಗೆಯೇ ಉನ್ನತ ವ್ಯಾಸಂಗ, ಕೌಶಲ್ಯಯುಳ್ಳ, ಸರಳವಾದ ಕೆಲಸಕ್ಕೆ ಹೆಚ್ಚು ವೇತನವನ್ನು ಪಡೆಯುವ ಕಾರ್ಮಿಕರ ಆದಾಯ ಹಾಗೂ ಅವರಿಗೆ ದೊರೆಯುವ ಜೀವನಮಟ್ಟದ ವಿವಿಧ ಸೌಲಭ್ಯಗಳು ಹೆಚ್ಚಿರುವುದರಿಂದ ಇಂತಹ ಕಾರ್ಮಿಕರಿಗೆ ನಮ್ಮ ಸಮಾಜದಲ್ಲಿ ಹೆಚ್ಚೂ ಸಾಮಾಜಿಕವಾಗಿ ಒಳ್ಳೆಯ ಗೌರವ ನೀಡುತ್ತಿರುವುದನ್ನು ಕಾಣಬಹುದು. ಆದರೆ ನಮ್ಮ ಸುತ್ತಮುತ್ತಲಿನ ವ್ಯವಸ್ಥೆಯು ಜನರು ಪಡೆದಿರುವ ಹುದ್ದೆಗಳನ್ನು ಆಧಾರಿಸಿ ಗೌರವಿಸುತ್ತಿರುವುದು ದುರಂತವೆಂದೇ ಹೇಳಬಹುದು. ನಮ್ಮ ಭಾರತದ ಜಾತಿ ಸಂಕೀರ್ಣತೆಯು ಪಿರಾಮಿಡ್ ಆಕೃತಿಯಲ್ಲಿ ನಮ್ಮ ಸಮಾಜದ ರೂಪರೇಷೆಗಳನ್ನು ನಿರ್ಧರಿಸಿರುವಂತೆ, ಒಂದು ತುದಿಯಲ್ಲಿ ಉನ್ನತ ಜಾತಿಯ ಕೆಲವೇ ವರ್ಗಗಳು ಸಂತೋಷ, ಹಾಗೂ ಸಂತೃಪ್ತಿಯ ಜೀವನದಲ್ಲಿ ಮುಳುಗಿದ್ದಾರೆ. ಇನ್ನುಳಿದ ಬಹುಜನರು ಪಿರಾಮಿಡ್‌ನ ತಲಾಕೃತಿಯಲ್ಲಿ ಹೆಚ್ಚು ಕೆಲಸ ಮಾಡುವ ಹಾಗೂ ದೈಹಿಕ ಶ್ರಮವನ್ನೇ ಆಶ್ರಯಿಸಿರುವವರ ಜೀವನ ಸಂಕಷ್ಟದಲ್ಲಿದೆ. ಗಣಿ ಕಾರ್ಮಿಕರು, ಕಡಿಮೆ ಕೂಲಿಯನ್ನು ಪಡೆಯುವ ಮೂಲಕ ಬಡತನ, ನಿರುದ್ಯೋಗ, ನಿಕೃಷ್ಠ ಜೀವನದಿಂದಾಗಿ ಚಟುವಟಿಕೆಗಳಿಂದಾಗಿ ಹೆಚ್ಚು ತೊಂದರೆಯನ್ನು ಅನುಭವಿಸಬೇಕಾಗಿದೆ.

ಜಿಲ್ಲೆಯ ಗಣಿಯಲ್ಲಿ ದುಡಿಯುವ ಕಾರ್ಮಿಕರಿಗೆ ಗಣಿ ಸಂಸ್ಥೆಯು ನೀಡುವ ವಿವಿಧ ಸೌಲಭ್ಯಗಳ ಬಗ್ಗೆ ಕಾರ್ಮಿಕರನ್ನು ಪ್ರಶ್ನಿಸಿದಾಗ ಮುಂದಿನ ಪುಟದಲ್ಲಿರುವ ೪.೧೫ರ ಕೋಷ್ಟಕದಂತೆ ಉತ್ತರ ಕಂಡುಬರುತ್ತದೆ.

**ಕೋಷ್ಟಕ ೪.೧೩**

**ದುಡಿಮೆಯಲ್ಲಿರುವ ಸೌಲಭ್ಯಗಳು**

| ಕ್ರ.ಸಂ. | ಸೌಲಭ್ಯಗಳ | ಸರ್ಕಾರಿ ರಜಾದಿನಗಳು | | | ಐಚ್ಛಿಕ ರಜಾದಿನ | | | ಬೋನಸ್ | | | ಮುಂಬಡ್ತಿ | | | ಹೆಚ್ಚುವರಿ ಕೂಲಿ | | | ಹೆರಿಗೆ ಸೌಲಭ್ಯ | | | ಅಪಘಾತ ವಿಮೆ | | | ವೈದ್ಯಕೀಯ ಸೇವೆ | | | ವಿಶ್ರಾಂತಿಗೃಹ | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ೧. | ಹೇಳಿಕೆಗಳು | ಇದೆ | ಇಲ್ಲ | ಒ* | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ |
| ೨. | ಕಾರ್ಮಿಕರಸಂಖ್ಯೆ | ೪೦ | ೧೬೦ | ೨೦೦ | ೨೦ | ೧೬೦ | ೨೦೦ | ೩೦ | ೧೭೦ | ೨೦೦ | ೧೦ | ೧೯೦ | ೨೦೦ | ೩೦ | ೧೭೦ | ೨೦೦ | ೨೦ | ೧೮೦ | ೨೦೦ | ೧೦೦ | ೧೦೦ | ೨೦೦ | ೨೦ | ೧೮೦ | ೨೦೦ | ೨೦ | ೧೮೦ | ೨೦೦ |
| ೩. | ಶೇಕಡವಾರು | ೨೦ | ೮೦ | ೧೦೦ | ೨೦ | ೮೦ | ೧೦೦ | ೧೫ | ೮೫ | ೧೦೦ | ೫ | ೯೫ | ೧೦೦ | ೧೫ | ೮೫ | ೧೦೦ | ೧೦ | ೯೦ | ೧೦೦ | ೫೦ | ೫೦ | ೧೦೦ | ೧೦ | ೯೦ | ೧೦೦ | ೧೦ | ೯೦ | ೧೦೦ |

*ಒ = ಒಟ್ಟು

ಮೂಲ: ಕ್ಷೇತ್ರ ಸಮೀಕ್ಷೆ ವರದಿ.

ಕೋಷ್ಟಕ ೪.೧೩ರಲ್ಲಿ ಗಣಿಯಲ್ಲಿರುವ ಕಾರ್ಮಿಕರಿಗೆ ಸರ್ಕಾರ ಅಥವಾ ಖಾಸಗಿ ಗಣಿಸಂಸ್ಥೆಗಳಿಂದ ಹೆಚ್ಚುವರಿಯಾಗಿ ಸಿಗುವ ವಿವಿಧ ಸೌಲಭ್ಯಗಳನ್ನು ತೋರಿಸುತ್ತದೆ. ೧೯೮೬ ತಿದ್ದುಪಡಿಗಳೊಗಾದ ಗಣಿಕಾಯ್ದೆಯ ಪರಿಚ್ಛೇದ ೬ರ ಪ್ರಕಾರ ಕಾನೂನು ೪೦ರಲ್ಲಿ ಕಾರ್ಮಿಕ ಕಾಯ್ದೆಗಳಿಗನುಗುಣವಾಗಿ ಯಾವುದೇ ಉತ್ಪಾದನಾ ವಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರತಿಯೊಬ್ಬ ಕಾರ್ಮಿಕನು ದಿನವೊಂದಕ್ಕೆ ಕೇವಲ ೮ ರಿಂದ ೯ ಗಂಟೆಗಳ ಸೇವೆಯನ್ನು ಮಾತ್ರ ಸಲ್ಲಿಸಬೇಕೆಂಬ ಕಾನೂನಿನ ಕಟ್ಟಳೆ ರೂಪಿಸಲಾಗಿದೆ.[೪] ಒಂದು ವೇಳೆ ಕಾರ್ಮಿಕನು ಹೆಚ್ಚುವರಿ ಸೇವೆ ಸಲ್ಲಿಸಿದ್ದೇ ಆದರೆ ಅವನಿಗೆ ತನ್ನ ಮೂಲವೇತನಕ್ಕಿಂತಲೂ ೨ ಪಟ್ಟು ಹೆಚ್ಚುವರಿ ವೇತನವನ್ನು ಪಾವತಿಸಬೇಕಾಗುತ್ತದೆ. ಇಂತಹ ನಿಯಮವು ಗಣಿಯಲ್ಲಿರುವ ಕೇವಲ ಶೇಕಡ ೧೫ರಷ್ಟು ಕಾರ್ಮಿಕರಿಗೆ ಮಾತ್ರ ಸೌಲಭ್ಯ ದೊರೆತಿದೆ. ಈ ವರ್ಗದಲ್ಲಿ ಬರುವ ಕಾರ್ಮಿಕರೆಂದರೆ ಡ್ರೈವರ್ ಆಪರೇಟರ್ಸ್, ಕ್ಲೀನರ್ಸ್, ಹೆಲ್ಪರ್ಸ್ ಇತ್ಯಾದಿ. ಆದರೆ ಕಾನೂನಿನ ಅದಿನಿಯಮದ ಉಲ್ಲೇಖದಂತೆ, ಮೂಲ ವೇತನಕ್ಕಿಂತ ೨ರಷ್ಟು ಪಾವತಿಸದೇ ಕೇವಲ ಒಂದು ದಿನದ ಕೂಲಿಯಷ್ಟು ಮಾತ್ರ ಹೆಚ್ಚುವರಿ ಹಣವನ್ನು ಕಾರ್ಮಿಕರಿಗೆ ನೀಡಲಾಗುತ್ತಿದೆ. ದುಡಿಯುವ ಕಾರ್ಮಿಕರ ಸೇವೆ, ಚಾಣಕ್ಷತೆ ಹಾಗೂ ಕಾರ್ಯದಕ್ಷತೆಯನ್ನು ಆಧರಿಸಿ ನೀಡುವ ಮುಂಬಡ್ತಿ ವಿಧಾನವು ಸಹ ಗಣಿಗಾರಿಕೆಯಲ್ಲಿ ಶೇಕಡ ೫ರಷ್ಟಿದೆ. ಆದರೆ ಇಂತಹ ಸೇವಾ ಅವಕಾಶವು ಭಾರತ ಸರ್ಕಾರದಿಂದ ಎನ್.ಎಂ.ಡಿ.ಸಿ. ನಿಯಮಿತ ದೋಣಿಮಲ್ಯೆ ಗಣಿಸಂಸ್ಥೆಯಲ್ಲಿ ಮಾತ್ರ ದೊರೆಯುತ್ತದೆ. ಉಳಿದ ಯಾವುದೇ ಖಾಸಗಿ ಸಂಸ್ಥೆಗಳಲ್ಲಿ ಕಾರ್ಮಿಕರಿಗೆ ಮುಂಬಡ್ತಿ ನೀಡುವ ಸೌಲಭ್ಯವಿರುವುದಿಲ್ಲ. ಈ ವರ್ಗದಲ್ಲಿ ಹೆಲ್ಪರ್ಸ್, ಕ್ಲೀನರ್ಸ್ ಹಾಗೂ ಬ್ಲಾಸ್ಟರ್ಸ್ ಇತ್ಯಾದಿ ಬರುತ್ತಾರೆ. ಹಾಗೆಯೇ ಕೆಲಸದ ಸಮಯದಲ್ಲಿ ಆಕಸ್ಮಿಕವಾಗಿ ಜರುಗುವ ಅಪಘಾತಗಳಿಗೆ ಪರಿಹಾರವಾಗಿ ನೀಡುವ ವಿಮೆಯ ಪ್ರಮಾಣ ಶೇಕಡ ೫೦ರಷ್ಟು ಇದ್ದು. ಅದು ಕಾರ್ಮಿಕರ ಸಾವು, ಅಂಗಹೀನತೆ, ಇಲ್ಲವೇ ಮರಣಾಂತಿಕ ಕಾಯಿಲೆಗಳು ಸಂಭವಿಸಿದಲ್ಲಿ ಮಾತ್ರ ಅಪಘಾತ ವಿಮೆಯನ್ನು ನೀಡಲಾಗುತ್ತದೆ. ಅಪಘಾತ ವಿಮೆಯನ್ನು ಇಲ್ಲಿಯವರೆಗೆ ಜಿಲ್ಲೆಯ ಯಾವುದೇ ಗಣಿಸಂಸ್ಥೆಗಳೂ ತಮ್ಮ ಗಣಿ ಸಂಸ್ಥೆಯ ಆಧಾರದ ಮೇಲೆ ಬಿಡುಗಡೆ ಮಾಡಿಕೊಂಡಿರುವುದು ತುಂಬಾ ಅಪರೂಪ. ಏಕೆಂದರೆ ಮೈನ್ಸ್‌ಗಳಲ್ಲಿ ಜರುಗುವ ಯಾವುದೇ ಅಪಘಾತ ಪ್ರಕರಣಗಳ ಸಮೀಕ್ಷೆ, ಸರ್ವೇಕ್ಷಣೆ, ಸ್ಥಳ ಪರಿಶೀಲನೆ ಹಾಗೂ ಮಹಾಜರ್ ಪರೀಕ್ಷೆ, ಪರಿಶೀಲನೆ ಹಾಗೂ ಸಮೀಕ್ಷೆ ಇತ್ಯಾದಿ ಸಮಸ್ಯೆಗಳಿಂದಾಗಿ ಕಂಪನಿಯ ಕೆಲಸವು ಸ್ಥಗಿತಗೊಳ್ಳಬೇಕಾಗುತ್ತದೆ. ಇದಕ್ಕಾಗಿ ಪ್ರತಿಯೊಂದು ಕಂಪನಿಯು ತನ್ನ ಇತರ ವಾಹನಗಳ ಮೇಲಿನ ವಿಮೆಯನ್ನು ಬಳಸಿಕೊಂಡು ಕಾರ್ಮಿಕರು ಅನುಭವಿಸಿದ ಅಪಘಾತಗಳಿಗೆ ಪರಿಹಾರ ನೀಡಿದ ಉದಾಹರಣೆಗಳೇ ಅತ್ಯಧಿಕವಾಗಿ ಕಂಡುಬರುತ್ತವೆ. ಇಲ್ಲವೇ ಗಣಿಯಲ್ಲಿ ದುಡಿಯುವ ಕಾರ್ಮಿಕರಲ್ಲಿ ವೈದ್ಯಕೀಯ ವೆಚ್ಚಕ್ಕಾಗಿ ಹಣವನ್ನು ಪುಕ್ಕಟೆಯಾಗಿ ಇಲ್ಲವೇ ಪ್ರೋತ್ಸಾಹಕವಾಗಿ ನೀಡುವ ಸೌಲಭ್ಯ ಖಾಸಗಿ ಸಂಸ್ಥೆಗಳಲ್ಲಿ ಕಂಡುಬರುವುದಿಲ್ಲ.

ಹೆರಿಗೆ ಸೌಲಭ್ಯ. ವಿಶ್ರಾಂತಿಯ ಗೃಹಗಳ ಸೌಲಭ್ಯವು ಕೇವಲ ಶೇಕಡ ೧೦ ರಷ್ಟು ಕೆಲವೇ ಗಣಿಸಂಸ್ಥೆಗಳಲ್ಲಿ ಕಂಡುಬರುತ್ತದೆ. ಇನ್ನು ಗಣಿಸಂಸ್ಥೆಗಳಲ್ಲಿ ಐಚ್ಛಿಕ ರಜೆ ಶೇಕಡ ೧೦ ರಷ್ಟು, ಸರ್ಕಾರಿ ರಜೆ ಸೌಲಭ್ಯ ಶೇಕಡ ೨೦ ಹಾಗೂ ಶೇಕಡ ೧೫ ರಷ್ಟು ಬೋನಸ್‌ಗಳ ಸೌಲಭ್ಯವು ಕೆಲವು ಗಣಿಸಂಸ್ಥೆಗಳಲ್ಲಿ ರುವವರಿಗೆ ದೊರೆಯುತ್ತಿವೆ.

ಭಾರತ ಸರ್ಕಾರದ ಕೈಗಾರಿಕಾ ಕಾಯ್ದೆ ಹಾಗೂ ಕಾರ್ಮಿಕ ಕಾಯ್ದೆಗಳಿಗನುಗುಣವಾಗಿ ದುಡಿಯುವ ಪ್ರತಿಯೊಬ್ಬ ಕಾರ್ಮಿಕನಿಗೆ ಹೆಚ್ಚುವರಿ ಭತ್ಯೆ, ಮುಂಬಡ್ತಿ, ಐಚ್ಛಿಕ ರಜೆ, ಮಾತೃತ್ವ ವಿಮಾ ಸೌಲಭ್ಯ ಹಾಗೂ ವೈದ್ಯಕೀಯ ಸೌಲಭ್ಯ ಇತ್ಯಾದಿಗಳನ್ನು ಕಡ್ಡಾಯವಾಗಿ ನೀಡಲೇಬೇಕು, ಇಲ್ಲವಾದರೆ ಕಾಯ್ದೆಯ ಅನುಸಾರ ಆಯಾ ಉತ್ಪಾದನಾ ಸಂಸ್ಥೆಯನ್ನು ಶಿಕ್ಷಿಸುವ, ದಂಡ ಹಾಕುವ ಹಾಗೂ ಪರವಾನಿಗೆ ರದ್ದುಗೊಳಿಸುವಂತಹ ಅನೇಕ ಕಾರ್ಮಿಕ ಕಾಯ್ದೆಗಳು ಜಾರಿಯಲ್ಲಿದ್ದರೂ ಅವುಗಳು ಪ್ರಚಲಿತ ಅಥವಾ ವಾಸ್ತವಿಕತೆಯಲ್ಲಿ ಜಾರಿಗೊಳ್ಳದೇ ಕೇವಲ ಕಾಗದದ ಕಡತಗಳಲ್ಲಿಯೇ ಕೊಳೆಯುತ್ತಿವೆ ಎಂದು ಸಮೀಕರಿಸಬಹುದು. ಇದಕ್ಕೆ ಕೋಷ್ಟಕ ೪.೧೪ರಲ್ಲಿ ಹಲವು ಮಾಹಿತಿಗಳನ್ನು ಕಾಣಬಹುದು.

**ಕೋಷ್ಟಕ ೪.೧೪ : ಕಾರ್ಮಿಕರು ದುಡಿಮೆಗಾಗಿ ಶ್ರಮಿಸಬೇಕಾದ ಸಮಯ**

| ಕ್ರ.ಸಂ. | ಅಂತರಗಳಲ್ಲಿ | ಕಾರ್ಮಿಕರ ಸಂಖ್ಯೆ | ವಾಹನದ ಸೌಕರ್ಯ | ಶೇಕಡಾವಾರು |
|---|---|---|---|---|
| ೧. | ೦-೧ ಕಿ.ಮೀ. | -- | ಇಲ್ಲ | -- |
| ೨. | ೨-೪ ಕಿ.ಮೀ. | ೧೩೫ | ಇಲ್ಲ | ೬೭.೫ |
| ೩. | ೫-೭ ಕಿ.ಮೀ. | ೪೦ | ಟ್ರಕ್ಕು ಸೌಲಭ್ಯ | ೨೦ |
| ೪. | ಅದಕ್ಕೂ ಮೇಲ್ಪಟ್ಟು | ೨೫ | ಖಾಸಗಿ ಲಾರಿ, ಟ್ರಾಕ್ಟರ್ ಇಲ್ಲವೇ | ೧೨.೫ |
| ಒಟ್ಟು | | ೨೦೦ | ಒಟ್ಟು | ೧೦೦ |

ಮೂಲ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

೪.೧೪ರ ಕೋಷ್ಟಕವು ಗಣಿಯನ್ನು ಮುಖ್ಯ ಉದ್ಯೋಗವಾಗಿ ಆಯ್ಕೆ ಮಾಡಿಕೊಂಡ ಕಾರ್ಮಿಕರು ತಮ್ಮ ದಿನನಿತ್ಯದ ದುಡಿಮೆಗಾಗಿ ಕ್ರಮಿಸಬೇಕಾದ ಅಂತರವನ್ನು ತೋರಿಸುತ್ತದೆ. ಜಿಲ್ಲೆಯ ಬಹಳಷ್ಟು ಗಣಿಸಂಸ್ಥೆಗಳು ತಮ್ಮ ಉತ್ಪಾದನೆಗೆ ಸಹಕಾರಿಯಾಗಲೆಂದೇ ಕಾರ್ಮಿಕ ಕ್ಯಾಂಪ್‌ಗಳನ್ನು ಗಣಿಸಂಸ್ಥೆಯ ಸಮೀಪದಲ್ಲಿ ನಿರ್ಮಿಸಿಕೊಂಡಿವೆ. ಗಣಿ ಉತ್ಪಾದನಾ ಕ್ಷೇತ್ರದಿಂದ ಕಾರ್ಮಿಕರು ನೆಲೆಸಿರುವ ವಸತಿ ಪ್ರದೇಶಕ್ಕೆ ಸುಮಾರು ೨ ರಿಂದ ೪ ಕಿ.ಮೀ. ದೂರದ ಅಂತರವನ್ನು ಪ್ರತಿದಿನ ಕೆಲಸಗಾರರು

ತಮ್ಮ ದುಡಿಮೆಗಾಗಿ ಶೇಕಡ ೬೭.೫ ರಷ್ಟು ಕಾಲು ನಡಿಗೆಯ ಮೂಲಕ ಸಾಗಬೇಕಾಗಿದೆ. ಹಾಗೆಯೇ ಶೇಕಡ ೨೦ ರಷ್ಟು ಕಾರ್ಮಿಕರು ಪ್ರತಿದಿನವೂ ೫ ರಿಂದ ೭ ಕಿ.ಮೀ. ದೂರ ಹೋಗಲೇಬೇಕು. ಇಂತಹ ಕಾರ್ಮಿಕರನ್ನು ಗಣಿಸಂಸ್ಥೆಯ ಉತ್ಪಾದನಾ ಸ್ಥಳಕ್ಕೆ ಹೊತ್ತೊಯ್ಯಲು ಕಂಪನಿಯಲ್ಲಿ ದುಡಿಯುವ ಖಾಸಗಿ ವ್ಯಕ್ತಿಗಳ ವಾಹನಗಳು ಕಾರ್ಮಿಕರನ್ನು ಕರೆದೊಯ್ಯುತ್ತವೆ. ಬೇರೆ ಸ್ಥಳಗಳಿಂದ ದುಡಿಯಲು ಬರುವ ಕಾರ್ಮಿಕರಿಗೆ ಗಣಿಕಂಪನಿಗಳು ಯಾವುದೇ ನಿರ್ದಿಷ್ಟವಾದ ವಾಹನದ ಸೌಕರ್ಯಮಾಡಿರುವುದಿಲ್ಲ. ಆದರೆ ಕಛೇರಿ, ತಾಂತ್ರಿಕ ಕೆಲಸಗಾರರಿಗೆ ಮಾತ್ರ ಕಂಪನಿ ವಾಹನದ ಸೌಕರ್ಯ ಮಾಡಲಾಗಿದೆ. ದಿನನಿತ್ಯ ಕಾರ್ಮಿಕರು ತಮ್ಮ ದೈನಂದಿಕ ದುಡಿಮೆಗಾಗಿ ಕಂಪನಿಗಳಲ್ಲಿ ದುಡಿಯುವ ಖಾಸಗಿ ಲಾರಿಗಳನ್ನು ಹೆಚ್ಚಾಗಿ ಅವಲಂಬಿಸಬೇಕಾಗಿದೆ. ಕೆಲವೊಮ್ಮೆ ಕಾಲ್ನಡಿಗೆಯಲ್ಲಿ ಸುಮಾರು ೪ ರಿಂದ ೫ ಕಿ.ಮೀ. ಸಾಗಿ ಗಣಿಗಳಲ್ಲಿ ದುಡಿದು ಬಂದ ಉದಾಹರಣೆಗಳನ್ನು ಕೆಲವು ಕಾರ್ಮಿಕರು ನೆನಪಿಸಿಕೊಳ್ಳುತ್ತಾರೆ. ಶೇಕಡ ೨೦ರಷ್ಟು ಕಾರ್ಮಿಕರು ದಿನನಿತ್ಯವು ಖಾಸಗಿ ಬಸ್ಸು ಇಲ್ಲವೇ ಲಾರಿಗಳ ಮೂಲಕ ಇಲ್ಲವೇ ತಮ್ಮ ಸ್ವಂತ ಖರ್ಚಿನಲ್ಲಿ ಕೆಲಸ ಮಾಡುವ ಸ್ಥಳವನ್ನು ತಲುಪಬೇಕಾಗಿದೆ.

ಗಣಿಯಲ್ಲಿ ದುಡಿಯುವ ಕಾರ್ಮಿಕರ ಕೆಲಸದ ಸ್ವರೂಪವು ಕಠಿಣವೂ, ಹೆಚ್ಚು ಶ್ರಮದಾಯಕವೂ ಆಗಿದೆ. "೧೯೮೬ರ ಗಣಿ ಕಾಯ್ದೆಯ ಪ್ರಕಾರ ಕಾಯ್ದೆ ೩೦ ಹಾಗೂ ಕಾಯ್ದೆ ೪೦ರ ಪ್ರಕಾರ ಅವರ ದುಡಿಯುವ ಕೆಲಸಕ್ಕೆ ಅಗತ್ಯವಾದ ವಾಹನ ಸೌಕರ್ಯ, ನೀರಿನ ಸೌಕರ್ಯ ಇತ್ಯಾದಿಗಳನ್ನು ಕಾನೂನಿನ ಪ್ರಕಾರ ಹಾಗೂ ಮಾನವೀಯ ಅಂಶಗಳ ಆಧಾರದ ಮೇಲೆ ಕಡ್ಡಾಯವಾಗಿ ಒದಗಿಸಿಲೇಬೇಕು".[೫] ಆದರೆ ಬಹಳಷ್ಟು ಗಣಿ ಮಾಲೀಕರು ಕಾರ್ಮಿಕ ವರ್ಗವನ್ನು ಕೆಲಸದ ಸ್ಥಳಕ್ಕೆ ಕರೆದುಕೊಂಡು ಹೋಗಲು ನಿರ್ದಿಷ್ಟವಾದ ವಾಹನದ ಸೌಕರ್ಯದ ವ್ಯವಸ್ಥೆಯನ್ನು ಮಾಡಿರುವುದಿಲ್ಲ. ಇಂತಹ ಗಣಿಸಂಸ್ಥೆಗಳ ಕಾರ್ಯಚಟುವಟಿಕೆಯು ಆಯಾ ಸಂಸ್ಥೆಗಳಲ್ಲಿ ದುಡಿಯುವ ಕಾರ್ಮಿಕರನ್ನು ಕಾಣುತ್ತಿರುವ ಮನೋಧರ್ಮ ವ್ಯಕ್ತವಾಗುತ್ತದೆ. ಜೊತೆಗೆ ಜಿಲ್ಲೆಯ ಗಣಿಯಲ್ಲಿರುವ ಮಹಿಳಾ ಹಾಗೂ ಪುರುಷ ಕಾರ್ಮಿಕರಿಗೆ ಲಭ್ಯವಾಗುವ ಕೆಲಸದ ಅವಕಾಶಗಳಲ್ಲಿಯೂ ತುಂಬಾ ವ್ಯತ್ಯಾಸಗಳನ್ನು ಗುರುತಿಸಬಹುದು.

ಗಣಿ ಕಾರ್ಮಿಕರ ದುಡಿಮೆಯ ಅವಕಾಶಗಳು ಮಹಿಳೆಯರಿಗಿಂತಲೂ ಪುರುಷರಿಗೆ ಹೆಚ್ಚಾಗಿರುತ್ತವೆ. ಆದರೆ ಪುರುಷರು ತಮ್ಮ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸದೇ ಮದ್ಯಪಾನ, ಧೂಮಪಾನ, ತಂಬಾಕು ಸೇವನೆ, ಜೂಜುಗಾರಿಕೆ ಇತ್ಯಾದಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದರಿಂದ ಅನಾರೋಗ್ಯ ಪೀಡಿತರಾಗಿ ಹೆಚ್ಚು ವಿಶ್ರಾಂತಿಯನ್ನು ಪಡೆಯುವ ಹಾಗೂ ಸೋಮಾರಿಗಳಾಗುವುದರಿಂದ ಹಿಂದುಳಿದ ವರ್ಗ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕುಟುಂಬಗಳ ನಿರ್ವಹಣೆ, ರಕ್ಷಣೆ ಹಾಗೂ ಪೋಷಣೆಯ ಜವಾಬ್ದಾರಿಯ ಪುರುಷರಿಗಿಂತ ಹೆಚ್ಚಾಗಿ ಮಹಿಳೆಯರ ಮೇಲೆ

ಅವಲಂಬನೆಯಾಗಿದೆ. ಇಂತಹ ಸನ್ನಿವೇಶವು ಕ್ಷೇತ್ರ ಕಾರ್ಯದುದ್ದಕ್ಕೂ ಕಂಡುಬರುತ್ತದೆ. ಇದನ್ನು ಬುಡಕಟ್ಟು ಜಾತಿಗೆ ಸಂಬಂಧಿಸಿದ ಕಾರ್ಮಿಕ ಕುಟುಂಬಗಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಇದಕ್ಕೆ ಪೂರಕವಾಗಿ ರಾಜ್ಯಮಟ್ಟದ ಹಾಗೂ ಹೈದರಾಬಾದ್ ಕರ್ನಾಟಕ ವಿಭಾಗದ ಮಹಿಳೆಯರ ದುಡಿಮೆಯ ಅವಕಾಶಗಳನ್ನು ಪರಿಶೀಲಿಸುವ ಮೂಲಕ ಗಣೆಯಲ್ಲಿ ಸರಾಸರಿ ಮಹಿಳಾ ಕಾರ್ಮಿಕರ ದುಡಿಮೆಯ ಪ್ರಮಾಣವನ್ನು ೪.೧೫ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೪.೧೫**

**೨೦೦೧ರ ಅಂಕಿ-ಅಂಶಗಳ ಪ್ರಕಾರ ಮಹಿಳಾ ದುಡಿಮೆಯ ಪ್ರಮಾಣ**

| ಕ್ರ.ಸಂ. | ವಿವರಗಳು | ಕರ್ನಾಟಕ | ಹೈದರಾಬಾದ್ ಕರ್ನಾಟಕ ಪ್ರದೇಶ | ಬಳ್ಳಾರಿ |
|---|---|---|---|---|
| ೧. | ಮಹಿಳಾ ದುಡಿಮೆಗಾರರು | ೩೫ | ೩೯ | |
| ೨. | ದಿನಗೂಲಿ ಮಹಿಳಾ ಕಾರ್ಮಿಕರು | ೫೮ | ೬೫ | |
| ೩. | ದುಡಿಮೆಯ ಸಹಭಾಗಿತ್ವ | ೩೧.೯ | ೩೫ | |
| ೪. | ಶಾಲೆ ಸೇರದ ಮಕ್ಕಳು ೬-೧೪ ವರ್ಷದೊಳಗಿನ | ೪೯ | ೫೩.೧೪ | |

ಮೂಲ : ಪ್ರಜಾವಾಣಿ ೧೭.೩.೨೦೦೫, ಪು.೬, ಟಿ.ಆರ್. ಚಂದ್ರಶೇಖರ

ಈ ಮೇಲಿನ ೪.೧೫ರ ಕೋಷ್ಟಕವು ಕರ್ನಾಟಕ ರಾಜ್ಯಕ್ಕಿಂತಲೂ ಬಳ್ಳಾರಿ ರಾಯಚೂರು ಕೊಪ್ಪಳ, ಗುಲ್ಬಾರ್ಗಾ ಮತ್ತು ಬೀದರ ಜಿಲ್ಲೆಗಳನ್ನೊಳಗೊಂಡಂತೆ ಹೈದ್ರಾಬಾದ್-ಕರ್ನಾಟಕ ಪ್ರದೇಶವು ಮಹಿಳಾ ದುಡಿಮೆಗಾರರ, ದಿನಗೂಲಿ ಕಾರ್ಮಿಕರ, ಸಹಭಾಗಿತ್ವ ಹಾಗೂ ಶಾಲೆಯನ್ನು ಸೇರದ ೬-೧೪ ವರ್ಷದೊಳಗಿನ ಹೆಣ್ಣುಮಕ್ಕಳ ಪ್ರಮಾಣವು ಕರ್ನಾಟಕದ ಸರಾಸರಿ ಪ್ರಮಾಣಕ್ಕಿಂತಲೂ ಅತ್ಯಧಿಕವಾಗಿರುವುದನ್ನು ಮನಗಾಣಬಹುದು. ಇಂತಹ ಲಿಂಗಸಂಬಂಧಿ ದುಡಿಮೆಯ ಅಸಮಾನತೆಗೆ ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ಅವರು ತಮ್ಮ "ಭಾರತ ಅಭಿವೃದ್ಧಿ ಮತ್ತು ಸಹಭಾಗಿತ್ವ ೨೦೦೩" ಎಂಬ ಗ್ರಂಥದಲ್ಲಿ ಉತ್ತರ ಭಾರತದ ಬಿಹಾರ, ಮಧ್ಯಪ್ರದೇಶ, ರಾಜಸ್ಥಾನ, ಉತ್ತರ ಪ್ರದೇಶ (B.I.M.A.R.U.) ರಾಜ್ಯಗಳ ಅಧ್ಯಯನದಿಂದ ಪತ್ತೆ ಹಚ್ಚಿರುವ ಮೌಲ್ಯಗಳನ್ನು ನಮ್ಮ ರಾಜ್ಯ ಅಧ್ಯಯನಕ್ಕೆ ಹಾಗೂ ಉತ್ತರ ಕರ್ನಾಟಕ ವಿಭಾಗದ ದುಡಿಮೆಯ ಅವಕಾಶಗಳ ಸ್ಪಷ್ಟೀಕರಣಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಮುಂದುವರೆದ ಹಾಗೂ ಹಿಂದುಳಿದ ಜಿಲ್ಲೆಗಳಲ್ಲಿನ ಮಹಿಳೆಯ ದುಡಿಮೆಯ ಅವಲಂಬನೆಗೆ ಕಾರಣಗಳು ಬೇರೆ, ಬೇರೆಯಾಗಿ ರುವುದನ್ನು ೪.೧೬ರ ಕೋಷ್ಟಕದಿಂದ ಅರಿಯಬಹುದು.

**ಕೋಷ್ಟಕ ೪.೧೬ : ಮಹಿಳೆಯ ದುಡಿಮೆಗೆ ಕಾರಣಗಳು**

| ಕ್ರ.ಸಂ. | ವಿವರಗಳು | ಹಿಂದುಳಿದ ಜಿಲ್ಲೆಗಳು | ಮುಂದುವರೆದ ಜಿಲ್ಲೆ |
| --- | --- | --- | --- |
| ೧. | ದುಡಿಮೆಯ ಸಹಭಾಗಿತ್ವಕ್ಕೆ | ಬಡತನದ ತೀವ್ರ ಒತ್ತಡ | ಆರ್ಥಿಕ ರಚನೆಯಲ್ಲಾದ ಬದಲಾವಣೆ |
| ೨. | ದುಡಿಮೆಗೆ ಮುಖ್ಯ ಅವಲಂಬನೆ | ಪ್ರಾಥಮಿಕ ವಲಯ | ಪ್ರಾಥಮಿಕೇತರ ವಲಯ |

ಮೂಲ : ಪ್ರಜಾವಾಣಿ ೧೭.೩.೨೦೦೫, ಪು.೬, ಟಿ.ಆರ್. ಚಂದ್ರಶೇಖರ

ಗಣಿಗಾರಿಕೆಯು ಪುರುಷಾಧಿಪತ್ಯವನ್ನು ಹೊಂದಿರುವ ವೃತ್ತಿಯೆಂದೇ ಕರೆಯಬೇಕಾಗಿದೆ. ಏಕೆಂದರೆ ಕಾರ್ಮಿಕರ ಕೂಲಿಯಿಂದ ಹಿಡಿದು, ದುಡಿಮೆ, ಸೌಲಭ್ಯ ಹಾಗೂ ಅವಕಾಶಗಳು ಸ್ತ್ರೀಯರಿಗಿಂತ ಪುರುಷರಿಗೆ ಹೆಚ್ಚಾಗಿವೆ, ಎಂಬುದು ಕ್ಷೇತ್ರಕಾರ್ಯದ ಸಮೀಕ್ಷೆಗಳಿಂದ ಸಾಬೀತಾಗಿದೆ. ಜೊತೆಗೆ ಬಳ್ಳಾರಿ ಜಿಲ್ಲೆಯು ಮೂಲತಃ ಕೃಷಿಯನ್ನು ಆಧರಿಸಿದ್ದರೂ ಜಾಗತೀಕರಣವು ಗಣಿಗಾರಿಕಾ ಚಟುವಟಿಕೆಗೆ ವಿಶಾಲ ವ್ಯಾಪ್ತಿಯನ್ನು ಒದಗಿಸಿಕೊಟ್ಟಿದೆ. ಗಣಿಗಾರಿಕೆಯಿಂದ ಈ ಭಾಗದ ಅರಣ್ಯಸಂಪತ್ತು ಕ್ರಮೇಣ ಕಡಿಮೆಯಾಗುತ್ತಿದೆ. ಇದರಿಂದ ಜಿಲ್ಲೆಯ ವ್ಯಾಪ್ತಿಯಲ್ಲಿ ಬೀಳುವ ಸರಾಸರಿ ಮಳೆಯ ಪ್ರಮಾಣವು ಕಡಿಮೆಯಾಗಿರುವುದರಿಂದ ಕೃಷಿ ನಿರತ ಜನಸಮುದಾಯಗಳಲ್ಲಿ ಮಹಿಳೆ ಹಾಗೂ ಮಕ್ಕಳ ದುಡಿಮೆಯ ಸಹಭಾಗಿತ್ವ ಮತ್ತು ಅವಲಂಬನೆಗೆ ಗಣಿಗಾರಿಕೆಗೆ ಹತ್ತಾರು ಅವಕಾಶ ಮತ್ತು ಕಾರಣಗಳನ್ನು ಒದಗಿಸಿಕೊಡುತ್ತದೆ.

## ೪.೪. ಆರೋಗ್ಯ

ಆರೋಗ್ಯವಂಥ ಮೆದುಳಿನಲ್ಲಿ ಯಾವಾಗಲೂ ಪ್ರಯೋಜನಕಾರಿ ಯೋಜನೆಗಳೇ ಉದ್ಭವಿಸುತ್ತವೆ ಎಂಬ ನಾಣ್ಣುಡಿಯಂತೆ ಪ್ರತಿಯೊಬ್ಬ ವ್ಯಕ್ತಿಯು ತನ್ನ ಆರೋಗ್ಯವನ್ನು ಮಹಾಭಾಗ್ಯವೆಂದೇ ಪರಿಗಣಿಸುತ್ತಾನೆ. ಆರೋಗ್ಯವಂಥ ಹಾಗೂ ಧೃಡಕಾಯ ಮಾನವ ಸಂಪನ್ಮೂಲವನ್ನು ಆಯಾ ದೇಶದ ಅಭಿವೃದ್ಧಿಯ ಅಡಿಪಾಯವೆಂದೇ ಕರೆಯಲಾಗುತ್ತದೆ. ಜಾಗತೀಕರಣದ ಸನ್ನಿವೇಶವು ಆಧುನೀಕರಣ, ತಂತ್ರಜ್ಞಾನ ಮತ್ತು ನಗರೀಕರಣವು ವ್ಯಾಪಕವಾಗಿ ವಿಸ್ತಾರಗೊಳ್ಳುತ್ತಾ ಸಮಾಜದ ಹಾಗೂ ಮಾನವನ ವಿಚಾರಶಕ್ತಿಯನ್ನೇ ಬದಲಾಯಿಸಿದೆ. ಯಾವುದೇ ಉತ್ಪಾದನಾ ರಂಗ ಅಥವಾ ಸೇವಾ ರಂಗವನ್ನು ಗಣನೆಗೆ ತೆಗೆದುಕೊಂಡರೂ ಎಲ್ಲಾ ರಂಗಗಳಲ್ಲೂ ಅತ್ಯಧಿಕ ಉತ್ಪಾದನೆ, ವಿತರಣೆ, ತೀವ್ರ ಪೈಪೋಟಿ ಹಾಗೂ ಅತ್ಯಧಿಕ ಲಾಭ ಇತ್ಯಾದಿ ಪ್ರಕ್ರಿಯೆಗಳು ಸಹಜವಾಗಿರುವಂತೆ ಸಮಾಜದಲ್ಲಿ ಪ್ರತಿಯೊಬ್ಬ ನಾಗರಿಕನು ತನ್ನ ದಿನನಿತ್ಯದ ಜೀವನಕ್ಕಾಗಿ ಉದ್ಯೋಗ, ಆದಾಯ, ವಸತಿ, ಶಿಕ್ಷಣ, ಸಾರಿಗೆ ಮತ್ತು ಸಂಪರ್ಕ

ಮಾಧ್ಯಮಗಳನ್ನು ತನ್ನದಾಗಿಸಿಕೊಳ್ಳಲು ಪರಸ್ಪರ ಪೈಪೋಟಿ ಹಾಗೂ ಅನೇಕ ಒತ್ತಡಗಳಿಗೆ ಬಲಿಯಾಗಿದ್ದಾನೆ. ಇದರಿಂದ ಸಮಾಜದಲ್ಲಿ ಶಾಂತಿ, ಸಹಬಾಳ್ವೆ ಮತ್ತು ಸಹಕಾರವೆಂಬುದು ಕನಸಿನ ಮಾತಾಗುತ್ತಿದೆ. ಮತ್ತೊಂದೆಡೆ ಜಾಗತೀಕರಣದ ಸಮೂಹ ಸನ್ನಿಗೆ ಒಳಗಾಗಿರುವ ಸಮಾಜಕ್ಕೆ ಯಾವುದೇ ಅಧಿಕಾರ ಹಾಗೂ ಅಂತಸ್ತುಗಳಿಗಿಂತಲೂ ಶಾಂತಿ, ಸಹಕಾರ, ಸಹಬಾಳ್ವೆ ಹಾಗೂ ಆರೋಗ್ಯವೇ ಪ್ರಧಾನವೆಂದೂ ಪರಿಭಾವಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಗಣಿಗಾರಿಕೆಯು ತಾಂತ್ರಿಕೃತಗೊಂಡು ಕಾರ್ಮಿಕರಲ್ಲಿ ನಿರುದ್ಯೋಗ, ಬಡತನ ಅನಾರೋಗ್ಯ ಹಾಗೂ ಅಸಮರ್ಥತೆಗಳಿಗೆ ಎಡೆಮಾಡಿಕೊಟ್ಟಿರುವುದರಿಂದ ಗಣಿಕಾರ್ಮಿಕರ ಆರೋಗ್ಯದ ಸ್ವರೂಪವನ್ನು ತಿಳಿಯುವುದು ಅತ್ಯವಶ್ಯಕ.

ಗಣಿ ಕಾರ್ಮಿಕರ ಗುಣಮಟ್ಟವನ್ನು ವಿಶ್ಲೇಷಣೆಗೊಳಪಡಿಸುವುದಾದರೆ ಮುಖ್ಯವಾಗಿ ಕಾರ್ಮಿಕರು ದುಡಿಯುವ ಕೆಲಸದ ಸ್ವರೂಪ, ಕೂಲಿಯ ಪ್ರಮಾಣ, ವಸತಿಯ ಸ್ವರೂಪ, ಕುಟುಂಬದ ಗಾತ್ರ ಮತ್ತು ವೈದ್ಯಕೀಯ ಸೌಲಭ್ಯ ಇತ್ಯಾದಿ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿದರೆ ಕಾರ್ಮಿಕರ ಆರೋಗ್ಯದ ಪ್ರಮಾಣವನ್ನು ಗುರುತಿಸಲು ಸಾಧ್ಯವಾಗುತ್ತದೆ. ಜಿಲ್ಲೆಯ ಗಣಿಗಾರಿಕೆಯು ತೆರೆದ ಗಣಿಗಾರಿಕೆಯಾಗಿರುವುದರಿಂದ ಗಣಿಯಲ್ಲಿ ಬ್ಲಾಸ್ಟಿಂಗ್, ಡ್ರಿಲ್ಲಿಂಗ್, ಸಾರ್ಟಿಂಗ್, ಸ್ಟಾಕಿಂಗ್, ಕ್ರಷಿಂಗ್ ಹಾಗೂ ಲೋಡಿಂಗ್ ಚಟುವಟಿಕೆಗಳು ತೀವ್ರವಾಗಿರುವುದರಿಂದ ಶುದ್ಧವಾದ ಗಾಳಿ, ಕುಡಿಯುವ ನೀರು, ಹವಾಮಾನ ಇತ್ಯಾದಿ ಕಲುಶಿತಗೊಂಡು, ದಟ್ಟವಾದ ಧೂಳು, ಮಣ್ಣುಗಳೊಂದಿಗೆ ದಿನನಿತ್ಯ, ನಿರಂತರವಾಗಿ ಗಣಿಕೆಲಸದಲ್ಲಿ ಕಾರ್ಮಿಕರು ತೊಡಗಬೇಕಾಗುವುದರಿಂದ, ಅವರು ಅನಾರೋಗ್ಯಕ್ಕೆ ಒಳಗಾಗುವುದು ಸ್ವಾಭಾವಿಕ. ಹಾಗೆಯೇ ಜಿಲ್ಲೆಯ ಅತ್ಯಧಿಕ ಗಣಿ ಸಂಸ್ಥೆಗಳು ತಮ್ಮ ಉತ್ಪಾದನೆ ಹಾಗೂ ವಿತರಣೆಗೆ ಅನುಕೂಲವಾಗಲು ಗಣಿ ಉತ್ಪಾದನಾ ಸ್ಥಳಗಳಿಂದ ಆದಷ್ಟೂ ಕಡಿಮೆ ಅಂತರದಲ್ಲಿಯೇ ಕಾರ್ಮಿಕರ ವಸತಿ ವ್ಯವಸ್ಥೆಯನ್ನು ನಿರ್ಮಿಸಿರುವುದರಿಂದ, ಕಾರ್ಮಿಕರ ವಾಸಸ್ಥಳವು ಅತ್ಯಧಿಕ ಸಾರಿಗೆ ಸಂಪರ್ಕ, ಕಚ್ಚಾ ಸರಕಿನ ಸಂಗ್ರಹ, ವಿಲೇವಾರಿ, ಕಚ್ಚಾ ಸರಕನ್ನು ಕ್ರಷರ್‌ಯಂತ್ರದಿಂದ ಬೇರ್ಪಡಿಸುವ ಹಲವಾರು ಕಾರ್ಯಚಟುವಟಿಕೆಗಳಿಂದಾಗಿ ದಿನನಿತ್ಯ ಕಲುಶಿತ ವಾತಾವರಣದಲ್ಲಿ ಕಾರ್ಮಿಕರು ತಮ್ಮ ಬದುಕನ್ನು ಕಂಡುಕೊಳ್ಳಬೇಕಾಗಿದೆ. ಇದರಿಂದ ಅವರ ಆರೋಗ್ಯವು ಅನಿಶ್ಚಿತತೆ ಹಾಗೂ ಏರು ಪೇರುಗಳಿಗೆ ಒಳಗಾಗುವುದು ಸಹಜವಾಗಿರುತ್ತದೆ. ಮುಖ್ಯವಾಗಿ ಗಣಿಕಾರ್ಮಿಕರು ನಿರ್ವಹಿಸುವ ಕೆಲಸದ ಸ್ಥಿತಿ ಗತಿಯನ್ನು ಪರಿಶೀಲಿಸುವುದಾದರೆ ತೆರೆದ ಗಣಿಗಾರಿಕೆಯ ಉತ್ಪಾದನೆಯಲ್ಲಿ ಯಂತ್ರಗಳೇ ಅತ್ಯಧಿಕ ಕೆಲಸ ಕಾರ್ಯಗಳನ್ನು ನಿರ್ವಹಿಸುವುದರಿಂದ, ಅವುಗಳ ಕಾರ್ಯ ವೈಖರಿ ಮತ್ತು ಅವುಗಳಿಂದ ಹೊರಬರುವ ಕರ್ಕಶ ಶಬ್ದ, ಧೂಳುಮಿಶ್ರಿತ ಗಾಳಿ ಸೇವನೆ, ಅಶುದ್ಧ ಕುಡಿಯುವ ನೀರು ಹಾಗೂ ಅಗತ್ಯ ರಕ್ಷಾಕವಚಗಳಿಲ್ಲದೇ ಕಾರ್ಮಿಕರೂ ಕೆಲಸದಲ್ಲಿ ತೊಡಗುವುದರಿಂದ ಗಣಿ ಕಾರ್ಮಿಕನು

ಬಹುಬೇಗನೆ ಅನಾರೋಗ್ಯಕ್ಕೆ ಈಡಾಗುತ್ತಾನೆ. ಅಲ್ಲದೆ ಕಾರ್ಮಿಕರು ದುಡಿಯುವ ಪ್ರದೇಶಗಳಲ್ಲಿ, ವಿಶ್ರಾಂತಿ ಗೃಹಗಗಳಾಗಲೀ, ಶುದ್ಧವಾದ ಕುಡಿಯುವ ನೀರಿನ ಪೂರೈಕೆ, ವೈದ್ಯಕೀಯ ಸೌಲಭ್ಯಗಳಾಗಲೀ ಇಲ್ಲದ್ದರಿಂದ ಅನಾರೋಗ್ಯವು ಬೇತಾಳದಂತೆ ಕಾರ್ಮಿಕರ ಬೆನ್ನಿಗಂಟಿಕೊಂಡಿರುತ್ತದೆ. ಇತ್ತೀಚಿನ ದಿನಗಳಲ್ಲಿ ಗಣಿಯ ಉತ್ಪಾದನೆ ಹಾಗೂ ವಿತರಣೆಯ ಕಾರ್ಯಗಳಲ್ಲಿ ಯಂತ್ರಗಳೇ ಅತ್ಯಧಿಕವಾಗಿ ಕಂಡುಬರುವುದರಿಂದ, ಗಣಿಯನ್ನು ಅವಲಂಬಿಸಿದ್ದ ಕಾರ್ಮಿಕರಿಗೆ ಕೆಲಸದ ಅವಕಾಶಗಳು ಕಡಿಮೆಯಾಗಿವೆ. ಗಣಿಯ ಕೆಲಸ ಕಾರ್ಯಗಳಲ್ಲಿ ಮಾನವ ಶಕ್ತಿಗೆ ಯಾವುದೇ ಪ್ರಾಮುಖ್ಯತೆಯಿಲ್ಲದಂತಾಗಿದೆ. ದುಡಿಮೆಯ ಅಭದ್ರತೆ, ಕಡಿಮೆ ಕೂಲಿ, ಬಡತನ, ನಿರುದ್ಯೋಗಗಳಿಂದಾಗಿ ಕಾರ್ಮಿಕರಿಗೆ ತಗಲುವ ಸಣ್ಣ-ಪುಟ್ಟ ರೋಗಗಳಿಗೂ ಚಿಕಿತ್ಸೆಯನ್ನು ಪಡೆಯಲು ಆಗದಿರುವ ಪರಿಸ್ಥಿತಿ ನಿರ್ಮಾಣವು ಕಾರ್ಮಿಕರ ಅನಾರೋಗ್ಯಕ್ಕೆ ಒಂದು ಮೂಲಭೂತ ಕಾರಣವಾಗಿ ಕಂಡುಬರುತ್ತದೆ. ಕಾರ್ಮಿಕರ ವಸತಿಯ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸುವುದಾದರೆ ಪಟ್ಟಣ, ಪ್ರದೇಶಗಳಲ್ಲಿ ವಸತಿಯ ನಿರ್ಮಾಣಕ್ಕೆ ಕೊಡುವ ಮಾನಸಿಕ ಹಾಗೂ ಬೌದ್ಧಿಕ ಶ್ರಮಗಳೆಲ್ಲವೂ ಇವರ ವಸತಿ ಸ್ವರೂಪದ ಮುಂದೆ ನಿಷ್ಪ್ರಯೋಜಕವೆನಿಸುತ್ತವೆ. ಏಕೆಂದರೆ ಒಂದು ವ್ಯವಸ್ಥಿತವಾದ ಅಥವಾ ಯಾವುದೇ ಮಾದರಿಯುಳ್ಳ ನಿರ್ಧಿಷ್ಟ ಸ್ವರೂಪಗಳಿಲ್ಲದ ಒಂದು ಚಿಕ್ಕ ಗುಡಿಸಲಲ್ಲಿ ಗಣಿಕಾರ್ಮಿಕರು ವಾಸಿಸುತ್ತಿದ್ದಾರೆ. ಅದರಲ್ಲಿ ಮಣ್ಣು ಧೂಳು, ಗಾಳಿ, ಬೆಳಕುಗಳಿಗೆ ಮುಕ್ತವಾದ ಅವಕಾಶವಿದೆ ಹಾಗೂ ಅವರ ವಸತಿಯ ಸುತ್ತಮುತ್ತ ಗಣಿ ಉತ್ಪಾದನೆಯ ಹತ್ತಾರು ಉಪ ಕಾರ್ಯಗಳನ್ನು ನಿರಂತರವಾಗಿ ನಡೆಯುತ್ತಿರುವುದರಿಂದ ಪರಿಸರ ಮಾಲಿನ್ಯದ ಮಧ್ಯೆಯೇ ವಸತಿಯ ಅಸ್ತಿತ್ವವು ಕಾರ್ಮಿಕರ ಅನಾರೋಗ್ಯಕ್ಕೆ ಪ್ರೋತ್ಸಾಹಿಸುವಂತಿದೆ. ಗಣಿ ಕಾರ್ಮಿಕರು ಮೂಲತಃ ಅನಕ್ಷರಸ್ಥರಾಗಿರುವುದರಿಂದ, ಅವರು ಹೆಚ್ಚೂ ಮಕ್ಕಳನ್ನು ಪಡೆಯುವುದು ಭಾರವೆಂದೂ ಪರಿಗಣಿಸಿಲ್ಲ. ಏಕೆಂದರೆ ಕುಟುಂಬದಲ್ಲಿ ಹೆಚ್ಚೂ ಹೆಚ್ಚೂ ಮಕ್ಕಳನ್ನು ಪಡೆದಂತೆ, ದುಡಿಯುವ ಕೈಗಳು ಹೆಚ್ಚಾಗಿ, ತಮ್ಮ ಕುಟುಂಬವನ್ನು ಕಾಡುವ ಬಡತನದಿಂದ ಮುಕ್ತಿಹೊಂದಬಹುದೆಂಬ ಮೂಢನಂಬಿಕೆ ಕಾರ್ಮಿಕರಲ್ಲಿದೆ. ಹೀಗಾಗಿ ಪ್ರತಿಯೊಂದು ಕಾರ್ಮಿಕ ಕುಟುಂಬವು ೪ ರಿಂದ ೫ ಮಕ್ಕಳವರೆಗೆ ಸಹ ಸದಸ್ಯರನ್ನು ಪಡೆದಿರುವುದು ಸಹಜವಾಗಿ ಕಂಡುಬರುತ್ತದೆ. ಇದರಿಂದ ಕಡಿಮೆ ಕೂಲಿ, ಅತಂತ್ರ ದುಡಿಮೆಯ ಪ್ರಮಾಣ ಇತ್ಯಾದಿಗಳಿಂದ ಕಾರ್ಮಿಕರ ಬಡತನವು ಮತ್ತಷ್ಟು ಬಲಿಷ್ಟಗೊಂಡಿದೆ. ಈ ಹಿನ್ನೆಲೆಯಲ್ಲಿ ಗಣಿ ಕಾರ್ಮಿಕರು ಅನುಭವಿಸುತ್ತಿರುವ ನೋವುಗಳ ಬಗ್ಗೆ ಕ್ಷೇತ್ರಕಾರ್ಯದ ಸಂದರ್ಶನದಿಂದ ತಿಳಿದುಬರುವಂತೆ ಅನೇಕ ರೋಗಗಳಿಗೆ ತುತ್ತಾಗಿರುವುದು ಈ ಕೆಳಗಿನ ಕೋಷ್ಟಕ ೪.೧೭ರಲ್ಲಿ ಕಾಣಬಹುದು.

ಕೋಷ್ಟಕ ೪.೧೭ : ಗಣಿ ಕಾರ್ಮಿಕರಲ್ಲಿ ಕಂಡುಬರುವ ವಿವಿಧ ರೋಗಗಳ ಪ್ರಮಾಣ

| ಕ್ರ.ಸಂ. | ರೋಗದ ಲಕ್ಷಣಗಳು | ಕಾರ್ಮಿಕರ ಸಂಖ್ಯೆ | | | ಶೇಕಡವಾರು |
|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | |
| ೧ | ಕ್ಷಯರೋಗ | ೫೦ | ೭೦ | ೧೨೦ | ೬೦ |
| ೨ | ಆಸ್ತಮ | ೬೫ | ೭೮ | ೧೪೩ | ೭೧.೫ |
| ೩ | ರಕ್ತಹೀನತೆ | ೨೦ | ೮೦ | ೧೦೦ | ೫೦ |
| ೪ | ಎದೆನೋವು | ೭೦ | ೬೦ | ೧೩೦ | ೬೫ |
| ೫ | ಸಂಧಿವಾತ | ೪೨ | ೬೩ | ೧೦೫ | ೫೨.೫ |
| ೬ | ಋತುಚಕ್ರ ವ್ಯತ್ಯಯ | | ೭೫ | ೭೫ | ೩೭.೫ |
| ೭ | ಮಲೇರಿಯಾ | ೪೫ | ೫೪ | ೯೯ | ೪೯.೫ |
| ೮ | ಇತರೆ | ೧೫ | ೧೮ | ೩೩ | ೧೬.೫ |

ಈ ಮೇಲ್ಕಾಣಿಸಿದ ಕೋಷ್ಟಕವು ಗಣಿಕಾರ್ಮಿಕರಲ್ಲಿ ಕಂಡುಬರುವ ವಿವಿಧ ರೋಗದ ಲಕ್ಷಣಗಳನ್ನು ಗಮನಿಸಿದಾಗ ಮೂಲತಃ ಗಣಿಕಾರ್ಮಿಕರು ಪ್ರದೂಷಿತ ವಲಯದಲ್ಲಿ ಕೆಲಸ ನಿರ್ವಹಿಸುತ್ತಿರುವುದರಿಂದ ಅತಿ ಹೆಚ್ಚಾಗಿ ಶೇ. ೭೧.೫ ರಷ್ಟು ಕಾರ್ಮಿಕರು ಆಸ್ತಮ ರೋಗಕ್ಕೆ ಒಳಗಾಗಿರುವುದನ್ನು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದುಬರುತ್ತದೆ. ಇದರಂತೆಯೇ ಶೇ. ೫೨.೫ರಷ್ಟು ಕಾರ್ಮಿಕರು ಸಂಧಿವಾತ ರೋಗಕ್ಕೆ ತುತ್ತಾಗಿರುವುದು ಕಾಣಸಿಗುತ್ತದೆ. ಇದಕ್ಕೆ ಕೆಲಸದ ವ್ಯಾಪ್ತಿಯಲ್ಲಿ ದೊರೆಯುವ ಕುಡಿಯುವ ನೀರು, ಅಶುಚಿತ ಗಾಳಿ, ಅಪೌಷ್ಠಿಕ ಆಹಾರ ಹಾಗೂ ನೈರ್ಮಲ್ಯದ ಅಭಾವದಿಂದಾಗಿ ಸಂಧಿವಾತದ ರೋಗದ ಪ್ರಮಾಣವನ್ನು ಗುರುತಿಸಬಹುದು. ಹೀಗೆಯೇ ಕ್ಷಯರೋಗ, ಎದೆನೋವು, ರಕ್ತಹೀನತೆ, ಹಾಗೂ ಮಲೇರಿಯಾದಂತಹ ಅನೇಕ ರೋಗಗಳು ನಿರಂತರ ದುಡಿಮೆ, ಅಶುದ್ಧ ವಾತಾವರಣ, ವಿವಿಧ ದುಶ್ಚಟಗಳಾದ ಗುಟಾಕ ಸೇವಾನೆ, ತಂಬಾಕು, ಬೀಡಿ, ಮಧ್ಯಪಾನದಿಂದ ಶೇ. ೪೦ ಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ರೋಗದ ಲಕ್ಷಣಗಳನ್ನು ಕಾಣಬಹುದು. ಕೊನೆಯದಾಗಿ ಶೇ. ೧೬.೫ರಷ್ಟು ಇತರೆ ರೋಗದ ಲಕ್ಷಣಗಳಲ್ಲಿ ಕಂಡಬರುವ ಕ್ಯಾನ್ಸರ್, ಕುಷ್ಠ ಹಾಗೂ ಏಡ್ಸ್‌ನಂತಹ ಮಾರಕ ರೋಗದ ಲಕ್ಷಣಗಳನ್ನು ಕ್ಷೇತ್ರಕಾರ್ಯದ ಸಂದರ್ಶನದಲ್ಲಿ ಗುರುತಿಸಲಾಗಿದೆ. ಈ ಹಿನ್ನೆಲೆಯಲ್ಲಿ ಗಣಿಕಾರ್ಮಿಕರಿಗೆ ಜಿಲ್ಲೆಯಲ್ಲಿರುವ ಆಸ್ಪತ್ರೆಗಳ ಸೌಲಭ್ಯಗಳು ಹಾಗೂ ಚಿಕಿತ್ಸಾ ವಿಧಿವಿಧಾನಗಳು ಅವಶ್ಯಕವಾಗಿರುವುದರಿಂದ ಈ ಅಧ್ಯಾಯದ ಮುಂದಿನ ಭಾಗದಲ್ಲಿ ಜಿಲ್ಲೆಯಲ್ಲಿ ಲಭ್ಯವಿರುವ ವೈದ್ಯಕೀಯ ಸೇವೆಗಳ ಬಗ್ಗೆ ಕೂಲಂಕುಷವಾಗಿ ಚರ್ಚಿಸಲಾಗಿದೆ.

ಪ್ರಮುಖವಾಗಿ ಗಣಿಕಾರ್ಮಿಕರ ಆರೋಗ್ಯದ ಗುಣಮಟ್ಟಕ್ಕೆ ಸಂಬಂಧಿಸಿದಂತೆ ಚರ್ಚೆಗೆ ಒಳಪಡಿಸುವಾಗ ಮುಖ್ಯವಾಗಿ ಗಣಿಪ್ರದೇಶದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಲಭ್ಯವಿದ್ದ ಆರೋಗ್ಯ ಕೇಂದ್ರಗಳ

ಮಾಹಿತಿಯನ್ನು ಪರಿಶೀಲಿಸಿಸುವುದು ಅಗತ್ಯ. ಅವುಗಳಲ್ಲಿ ಕೇವಲ ಗಣಿ ಕಾರ್ಮಿಕರಿಗೆ ಮೀಸಲಾಗಿರುವ ಆಸ್ಪತ್ರೆಗಳೆಷ್ಟು? ಎಂಬುದನ್ನು ತುಲಾನಾತ್ಮಕವಾಗಿ ಪರೀಕ್ಷಿಸಿದಾಗ ಗಣಿ ಕಾರ್ಮಿಕರ ಆರೋಗ್ಯವನ್ನು ಕಾಪಾಡಲು ಯಾವ ಪ್ರಮಾಣದಲ್ಲಿ ವೈದ್ಯಕೀಯ ಸೌಕರ್ಯಗಳ ಅವಕಾಶಗಳಿವೆ. ಅವುಗಳಲ್ಲಿರುವ ಸೌಲಭ್ಯಗಳಾವುವು? ವೈದ್ಯರ ಪ್ರಮಾಣವೆಷ್ಟು? ಗಣಿ ಕಾರ್ಮಿಕರೊಂದಿಗೆ ಆಸ್ಪತ್ರೆ, ಸಿಬ್ಬಂಧಿಗಳ ವರ್ತನೆ ಹೇಗಿರುತ್ತದೆ ಎಂಬ ಸಂಗತಿಗಳನ್ನು ಅರಿತಾಗ ಕಾರ್ಮಿಕರ ಆರೋಗ್ಯಕ್ಕೆ ಸಂಬಂಧಿಸಿದಂತೆ ನ್ಯಾಯ ಒದಗಿಸಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಈ ಕೆಳಗಿನ ಕೋಷ್ಟಕವು ಗಣಿ ಕೇಂದ್ರಿಕೃತಗೊಂಡ ತಾಲೂಕುಗಳಲ್ಲಿರುವ ವೈದ್ಯಕೀಯ ಸೌಲಭ್ಯಗಳನ್ನು ಕೋಷ್ಟಕ ೪.೧೮ರಲ್ಲಿ ತೋರಿಸುತ್ತದೆ.

**ಕೋಷ್ಟಕ ೪.೧೮ : ಗಣಿ ಸಂಬಂಧಿತ ಪ್ರದೇಶಗಳಲ್ಲಿನ ಆರೋಗ್ಯ ಕೇಂದ್ರಗಳ ವಿವರ**

| ಕ್ರ. ಸಂ. | ತಾಲೂಕುಗಳ ಹೆಸರು | ಆಲೋಪತಿ ಆಸ್ಪತ್ರೆ | ನರ್ಸಿಂಗ್ ಹೋಂ ಖಾಸಗಿ | ಪ್ರಾಥಮಿಕ ಆರೋಗ್ಯ ಕೇಂದ್ರ | ಸಮುದಾಯ ಕೇಂದ್ರ | ಬ್ಲಡ್ ಬ್ಯಾಂಕ್ | ಔಷಧಿ ಅಂಗಡಿಗಳು |
|---|---|---|---|---|---|---|---|
| ೧. | ಬಳ್ಳಾರಿ | ೨೪ | ೪೧ | ೧೩ | -- | ೨ | ೨೭೧ |
| ೨. | ಹೊಸಪೇಟೆ | ೧೩ | ೨೦ | ೦೭ | -- | ೦೧ | ೧೧೨ |
| ೩. | ಸಂಡೂರು | ೦೬ | ೦೨ | ೦೫ | ೦೧ | -- | ೨೩ |
| | ಒಟ್ಟು | ೪೩ | ೬೩ | ೨೫ | ೦೧ | ೦೩ | ೪೦೬ |

ಮೂಲ : ಬಳ್ಳಾರಿ ಜಿಲ್ಲಾ ಅಂಕಿ-ಅಂಶಗಳ ಸಂಗ್ರಹ, ೨೦೦೩-೦೪

ಕೋಷ್ಟಕ ೪.೧೮ರ ಪ್ರಕಾರ ಜಿಲ್ಲೆಯಲ್ಲಿ ಗಣಿ ಸಂಪನ್ಮೂಲವು ಕೇಂದ್ರೀಕೃತಗೊಂಡ ನಿರ್ಧಿಷ್ಟ ತಾಲೂಕುಗಳಲ್ಲಿ ಲಭ್ಯವಿರುವ ಸರ್ಕಾರಿ ಹಾಗೂ ಖಾಸಗಿ ಆರೋಗ್ಯ ಕೇಂದ್ರಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಮೇಲಿನ ಮೂರು ತಾಲೂಕುಗಳಲ್ಲಿ ಒಟ್ಟಾರೆಯಾಗಿ ೧೨ ಲಕ್ಷಕ್ಕೂ ಹೆಚ್ಚು ಮಾನವ ಸಂಪನ್ಮೂಲ ಅಸ್ಥಿತ್ವದಲ್ಲಿದೆ. ಆದರೆ ಆ ಎಲ್ಲಾ ಜನರ ಆರೋಗ್ಯವನ್ನು ರಕ್ಷಿಸಲು ಕೇವಲ ೪೩ ಆಲೋಪತಿ ಆಸ್ಪತ್ರೆಗಳು ೬೩ ಖಾಸಗಿ ನರ್ಸಿಂಗ್ ಹೋಮ್ ಸೇರಿದಂತೆ ಜಿಲ್ಲೆಯ ೮೪ ಗ್ರಾಮಪಂಚಾಯಿತಿಗಳು ಸೇರಿದಂತೆ ೦೫ ಪುರಸಭೆ ಹಾಗೂ ಪಟ್ಟಣ ಪಂಚಾಯಿತಿಗೆ ಕೇವಲ ೬೦ ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ೦೧ ಸಮುದಾಯ ಆರೋಗ್ಯಕೇಂದ್ರವನ್ನು ಕಾಣಬಹುದಾಗಿದೆ. ಈ ಮೇಲಿನ ಕೋಷ್ಟಕದಲ್ಲಿ ವಿಚಿತ್ರವಾಗಿ ಕಂಡುಬರುವ ಸಂಗತಿಯೆಂದರೆ ರಕ್ತ ಪರೀಕ್ಷಾ ಪ್ರಯೋಗಾಲಯ ಮತ್ತು ರಕ್ತ ನಿಧಿ ಕೇಂದ್ರಗಳ ಪ್ರಮಾಣ ಇಡೀ ಜಿಲ್ಲೆಗೆ ಕೇವಲ ೦೩ ಇರುವುದನ್ನು ಗಮನಿಸಿದಾಗ ಜಿಲ್ಲೆಯಲ್ಲಿ ನಡೆದಿರುವ ತೀವ್ರ ಗಣಿಗಾರಿಕೆಯಿಂದಾಗಿ ಮಿತಿಮೀರಿದ ಸಾರಿಗೆ-ಸಂಪರ್ಕ, ಅತ್ಯಧಿಕ

ಯಂತ್ರೋಪಕರಣಗಳ ಬಳಕೆ, ಗಣಿಗಾರಿಕೆಯಲ್ಲಿ ಬಳಸುವ ಸ್ಫೋಟಕ ಸಾಮಗ್ರಿಗಳಿಂದಾಗಿ ಮೂರು ತಾಲೂಕುಗಳಲ್ಲಿ ಅಪಘಾತಗಳ ಪ್ರಮಾಣವು ಹೆಚ್ಚಾಗಿದೆ. ಆದರೆ ಅಪಘಾತಗಳಲ್ಲಿ ಗಾಯ ಗೊಂಡವರಿಗೆ ಪ್ರಥಮ ಚಿಕಿತ್ಸೆ ಹಾಗೂ ಜೀವದಾನಕ್ಕೆ ಅವಶ್ಯಕವಾದ ರಕ್ತ ಸಂಗ್ರಹ ನಿಧಿಗಳು ಅತ್ಯಲ್ಪವಾಗಿರುವುದು ದುರಂತವೆಂದೇ ಹೇಳಬಹುದು. ಬಳ್ಳಾರಿ ಜಿಲ್ಲೆಯ ಸಮಸ್ತ ಜನರು ತಮ್ಮ ಆರೋಗ್ಯದ ಸಂರಕ್ಷಣೆಗೆ ನೀಡಿರುವ ಕಡಿಮೆ ಪ್ರಾಮುಖ್ಯತೆ ಹಾಗೂ ನಿರ್ಲಕ್ಷತೆಯ ಧೋರಣೆಯಿಂದಾಗಿ ಈ ಭಾಗದಲ್ಲಿ ಆರೋಗ್ಯದ ಸೌಲಭ್ಯಗಳು ಕಡಿಮೆಯಾಗಿವೆ ಹಾಗೂ ಅದನ್ನು ೪.೧೯ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೪.೧೯ : ೨೦೦೩-೦೪ನೇ ಸಾಲಿನ ಜಿಲ್ಲೆಯ ಅಪಘಾತಗಳ ಪ್ರಮಾಣ**

| ಕ್ರ.ಸಂ. | ತಾಲೂಕು | ಅಪಘಾತಗಳ ಸಂಖ್ಯೆ | ಗಾಯಗೊಂಡವರ ಸಂಖ್ಯೆ | ಮೃತಪಟ್ಟವರ ಸಂಖ್ಯೆ |
|---|---|---|---|---|
| ೧. | ಬಳ್ಳಾರಿ | ೬೧೨ | ೫೧೩ | ೫೮ |
| ೨. | ಹೊಸಪೇಟೆ | ೩೬೨ | ೨೮೫ | ೩೪ |
| ೩. | ಸಂಡೂರು | ೩೮೪ | ೫೫೭ | ೫೯ |
| ೪. | ಹಡಗಲಿ | ೫೧ | ೧೩೬ | ೦೯ |
| ೫. | ಹೆಚ್.ಬಿ.ಹಳ್ಳಿ | ೪೦ | ೪೮ | ೦೮ |
| ೬. | ಕೂಡ್ಲಿಗಿ | ೧೫೦ | ೧೬೮ | ೨೭ |
| ೭. | ಶಿರಗುಪ್ಪ | ೪೫ | ೯೫ | ೦೬ |
| | ಜಿಲ್ಲಾ ಮೊತ್ತ | ೧೬೪೪ | ೧೮೦೨ | ೨೦೧ |

ಮೂಲ : ಬಳ್ಳಾರಿ ಜಿಲ್ಲಾ ಅಂಕಿ-ಅಂಶಗಳ ಸಂಗ್ರಹ, ೨೦೦೩-೦೪

ಕೋಷ್ಟಕ ೪.೧೯ರ ಪ್ರಕಾರ ಜಿಲ್ಲೆಯಲ್ಲಿ ಕಂಡುಬರುವ ಅಪಾಘಾತಗಳ ಪ್ರಮಾಣವನ್ನು ತೋರಿಸುತ್ತದೆ. ಅಧಿಕೃತ ದಾಖಲೆಗಳ ಪ್ರಕಾರ ಕೇವಲ ೨೦೦೩-೦೪ ಸಾಲಿನಲ್ಲಿ ಜರುಗಿದ ಅಪಘಾತಗಳ ಒಟ್ಟು ಸಂಖ್ಯೆ ೧೬೪೪ರಷ್ಟಿದೆ. ಅದರಲ್ಲಿ ಬಳ್ಳಾರಿ, ಹೊಸಪೇಟೆ ಮತ್ತು ಸಂಡೂರು ವ್ಯಾಪ್ತಿಯಲ್ಲಿ ಜರುಗಿದ ಅಪಘಾತಗಳ ಸಂಖ್ಯೆ, ಗಾಯಗೊಂಡವರ ಸಂಖ್ಯೆ ಹಾಗೂ ಮೃತಪಟ್ಟವರ ಸಂಖ್ಯೆ ಉಳಿದ ತಾಲೂಕುಗಳಿಗಿಂತ ಹೆಚ್ಚಾಗಿದೆ. ಅದು ಅನುಕ್ರಮವಾಗಿ ಅಪಘಾತಗಳು ೬೧೨, ೩೬೨, ೩೮೪ ಆಗಿದೆ. ಗಾಯಾಳುಗಳು ೫೧೩, ೨೮೫, ೫೫೭ ಆಗಿದ್ದರೆ, ಮರಣ ಹೊಂದಿದವರು ೫೮, ೩೪, ೫೯ ಆಗಿರುವುದು ಕಂಡುಬರುತ್ತದೆ. ಹೀಗೆ ಅತ್ಯಧಿಕ ಪ್ರಮಾಣದ ಅಪಘಾತ ಹಾಗೂ ಮರಣದ ಸನ್ನಿವೇಶಕ್ಕೆ ಅವಕಾಶವಿರುವ ಜಿಲ್ಲೆಯಲ್ಲಿ ರಕ್ತ ನಿಧಿ ಸಂಗ್ರಹ ಕೇಂದ್ರ ಮತ್ತು ಆಸ್ಪತ್ರೆಗಳು ತುಂಬಾ ಕಡಿಮೆಯೆಂದೇ ಹೇಳಬಹುದು. ಆರೋಗ್ಯ ಹಾಗೂ ವೈದ್ಯಕೀಯ ಸೌಲಭ್ಯಗಳ ದೃಷ್ಟಿಯಿಂದ

ಬಳ್ಳಾರಿ ಜಿಲ್ಲೆಯ ಸ್ಥಿತಿಯು ಆಶಾದಾಯಕವಾಗಿಲ್ಲ. ಈ ಜಿಲ್ಲೆಯಲ್ಲಿ ಪ್ರತಿ ಒಂದು ಲಕ್ಷ ಜನಸಂಖ್ಯೆಗೆ ೨೪ ವೈದ್ಯಕೀಯ ಸಂಸ್ಥೆಗಳಿವೆ. ಪ್ರತಿ ಒಂದು ಲಕ್ಷ ಜನಸಂಖ್ಯೆಗೆ ೯೨ ಹಾಸಿಗೆಗಳು, ಪ್ರತಿಯೊಂದು ಲಕ್ಷ ಜನಸಂಖ್ಯೆಗೆ ೬ ಸರ್ಕಾರಿ ವೈದ್ಯರಿದ್ದಾರೆ.[೬] ಎಂಬ ಸರ್ಕಾರಿ ದಾಖಲೆಗಳನ್ನು ಗಮನಿಸಿದರೆ ಗಣಿ ಕಾರ್ಮಿಕರ ಆರೋಗ್ಯವು ತುಂಬಾ ಕನಿಷ್ಠ ಮಟ್ಟದಲ್ಲಿರುತ್ತದೆಂಬ ತೀರ್ಮಾನಕ್ಕೆ ಬರಲು ಹೆಚ್ಚು ಸಾಕ್ಷಿಗಳನ್ನು ಒದಗಿಸುತ್ತದೆ. ಆಂತರಿಕವಾಗಿ ಜಿಲ್ಲೆಯ ಆಡಳಿತಾತ್ಮಕ ಹಾಗೂ ರಾಜಕೀಯ ಇಚ್ಛಾಶಕ್ತಿಯು ಜಿಲ್ಲೆಯ ಆರೋಗ್ಯಕ್ಕೆ ಅವಶ್ಯಕವಾದ ಮಾರ್ಗೋಪಾಯವನ್ನು ಕೈಗೊಳ್ಳುವಲ್ಲಿ ವಿಫಲವಾಗಿವೆ. ಜೊತೆಗೆ ಜಿಲ್ಲೆಯ ಜನ ಸಾಮಾನ್ಯರಲ್ಲಿಯು ಆರೋಗ್ಯದ ವಿಷಯಕ್ಕೆ ಸಂಬಂಧಿಸಿದಂತೆ ಜನಜಾಗೃತಿಯು ಸಹ ತೀರ ಹಿಂದುಳಿದಿದೆ. ಆದರೆ ಜಿಲ್ಲೆಯ ಗಣಿ ಹಾಗೂ ಇನ್ನಿತರ ಸಂಪನ್ಮೂಲಗಳನ್ನು ಸಾಧ್ಯವಾದಷ್ಟು ಉತ್ಪಾದಿಸುವ ಹಾಗೂ ವಿತರಣೆ ಮಾಡುವ ಕಾರ್ಯಯೋಜನೆಗೆ ಮಾಲೀಕವರ್ಗ ಹಾಗೂ ಜಿಲ್ಲಾಡಳಿತವು ಹೆಚ್ಚು ಆಸಕ್ತಿಯನ್ನು ವಹಿಸಿರುವುದು ಕಂಡುಬರುತ್ತದೆ. ಜಿಲ್ಲೆಯ ಗಣಿ ಉತ್ಪಾದನೆಯು ಸಹ ಪ್ರತಿವರ್ಷ ಹೆಚ್ಚುತ್ತಾ ಸಾಗಿರುವುದರ ಬೆನ್ನಲ್ಲೇ, ಜಿಲ್ಲೆಯ ಬಳ್ಳಾರಿ, ಹೊಸಪೇಟೆ ಹಾಗೂ ಸಂಡೂರು ತಾಲೂಕುಗಳಿಂದ ಸರ್ಕಾರಕ್ಕೆ ಬರುವ ವರಮಾನವು ಪ್ರತಿವರ್ಷ ಹೆಚ್ಚುತ್ತಾ ಸಾಗಿದ್ದರೂ, ಸರ್ಕಾರ ಮಾತ್ರ ಈ ಭಾಗದ ಜನರ ಜೀವನಮಟ್ಟವನ್ನು ಸುಧಾರಿಸುವಲ್ಲಿ ಬಹಳಷ್ಟು ಹಿಂದೆ ಬಿದ್ದಿದೆ ಎಂಬುದು ಮೇಲಿನ ಅಂಕಿ-ಅಂಶಗಳು ದೃಢಪಡಿಸುತ್ತವೆ.

ಮೂಲತಃ ಗಣಿ ಕಾರ್ಮಿಕರು ನಿರ್ವಹಿಸುವ ಕೆಲಸವು ಅತ್ಯಂತ ಮಾಲಿನ್ಯದಿಂದ ಕೂಡಿದ್ದು, ಹತ್ತಾರು ರೋಗ-ರುಜಿನಗಳ ತಾಣವಾಗಿದೆ. ಹೇಗೆಂದರೆ ಕಾರ್ಮಿಕರು ಕೆಲಸ ಮಾಡುವ ಪ್ರದೇಶ ಹಾಗೂ ಅವರ ವಾಸವಾಗಿರುವ ಸ್ಥಳಗಳಲ್ಲಿ ಕುಡಿಯಲು ಶುದ್ಧವಾದ ಗಾಳಿ, ನಿರ್ಮಲವಾದ ವಾತಾವರಣ, ಸುಸಜ್ಜಿತವಾದ ವಸತಿ, ಪೌಷ್ಠಿಕವಾದ ಆಹಾರ, ವಿಶ್ರಾಂತಿ ಗೃಹ, ನಿರಂತರವಾದ ದುಡಿಮೆ ಹಾಗೂ ಕೆಲಸಕ್ಕೆ ತಕ್ಕಂತೆ ಕೂಲಿಯು ಸಿಗದಿದ್ದರಿಂದ, ಗಣಿ ಕಾರ್ಮಿಕರು ನಿರುದ್ಯೋಗ, ಅತಂತ್ರದುಡಿಮೆ, ಬಡತನಗಳಿಂದಾಗಿ ಬೇರೆ ಬೇರೆ ರೋಗಗಳಿಗೆ ಬಲಿಯಾಗಿದ್ದಾರೆ. ಜಿಲ್ಲೆಯ ಅಧಿಕೃತ ದಾಖಲೆಗಳ ಪ್ರಕಾರ ಜಿಲ್ಲೆಯ ಜನಸಮುದಾಯವು ವಿವಿಧ ರೋಗಗಳಿಗೆ ಬಲಿಯಾದ ಜನರ ಪ್ರಮಾಣವನ್ನು ಬಳ್ಳಾರಿ ಹೊಸಪೇಟೆ ಹಾಗೂ ಸಂಡೂರು ತಾಲೂಕುಗಳಲ್ಲಿ ಹೆಚ್ಚಾಗಿರುವುದನ್ನು ಮುಂದಿನ ಪುಟದಲ್ಲಿರುವ ೪.೨೦ರ ಕೋಷ್ಟಕದಿಂದ ತಿಳಿಯಬಹುದು.

ಕೋಷ್ಟಕ ೪.೨೦ರ ಪ್ರಕಾರ ಬಳ್ಳಾರಿ ಜಿಲ್ಲೆಯ ಬೇರೆ, ಬೇರೆ ತಾಲೂಕುಗಳಲ್ಲಿ ಹಲವು ರೋಗಗಳು ಯಾವ ಪ್ರಮಾಣದಲ್ಲಿ ಗುರುತಿಸಲಾಗಿದೆ ಎಂಬುದನ್ನು ತೋರಿಸುತ್ತದೆ. ಜಿಲ್ಲೆಯಲ್ಲಿರುವ ಗಣಿಗಾರಿಕೆಯು ತೆರೆದ ಗಣಿಗಾರಿಕೆಯಾಗಿದ್ದು, ಹಲವಾರು ಮಾಲಿನ್ಯಗಳ ತಾಣವಾಗಿದೆ. ಗಣಿಕೇಂದ್ರಿತ

ಕೋಷ್ಟಕ ೪.೨೦

೨೦೦೩-೦೪ನೇ ಸಾಲಿನಲ್ಲಿ ನೊಂದಾಯಿತ

ವಿವಿಧ ರೋಗಗಳಿಗೆ ಬಲಿಯಾದವರ ಪ್ರಮಾಣ

| ಕ್ರ.ಸಂ. | ತಾಲೂಕುಗಳು | ಕ್ಯಾನ್ಸರ್ | ಕುಷ್ಟರೋಗ | ಟಿ.ಬಿ. | ಮಲೇರಿಯಾ |
|---|---|---|---|---|---|
| ೧. | ಬಳ್ಳಾರಿ | ೪೦ | ೩೬೫ | ೩೮೯ | ೧೪೯ |
| ೨. | ಹೊಸಪೇಟೆ | ೩೨ | ೩೪೫ | ೪೯೩ | ೩೧೩ |
| ೩. | ಸಂಡೂರು | ೪೦ | ೧೩೨ | ೩೫೨ | ೩೫೨ |
| ೪. | ಹಡಗಲಿ | ೨೦ | ೮೪ | ೨೭೦ | ೦೨ |
| ೫. | ಕೂಡ್ಲಿಗಿ | ೨೦ | ೧೦೯ | .. | ೪೨ |
| ೬. | ಹೆಚ್.ಬಿ.ಹಳ್ಳಿ | ೧೬ | ೭೫ | .. | ೦೧ |
| ೭. | ಸಿರುಗುಪ್ಪ | ... | ೮೩ | ... | ೦೬ |

ಮೂಲ : ಬಳ್ಳಾರಿ ಜಿಲ್ಲಾ ಅಂಕಿ-ಅಂಶಗಳ ನೋಟ, ೨೦೦೨-೦೩

ತಾಲೂಕುಗಳಾದ ಸಂಡೂರು, ಹೊಸಪೇಟೆ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿ ಮಿತಿಮೀರಿದ ಅರಣ್ಯನಾಶ, ಕೆಂಪು ಮಿಶ್ರಿತ ಧೂಳು, ಪ್ಲೋರೋಸಿಸ್ ಅಂಶವುಳ್ಳ ಕುಡಿಯುವ ನೀರು ಹಾಗೂ ಮಿತಿಮೀರಿದ ವಾಹನ ಸಂಚಾರದಿಂದಾಗಿ ಈ ತಾಲೂಕುಗಳು ವಿಪರೀತವಾದ ಪರಿಸರ ಮಾಲಿನ್ಯದಿಂದ ಕಲುಷಿತಗೊಂಡಿವೆ. ಹೀಗಾಗಿ ಬಳ್ಳಾರಿ ಜಿಲ್ಲೆಯ ಬೇರೆ ತಾಲೂಕುಗಳಿಗಿಂತ, ಗಣಿ ಆಧಾರಿತ ತಾಲೂಕುಗಳಲ್ಲಿರುವ ಕ್ಯಾನ್ಸರ್ ಪೀಡಿತ ರೋಗಿಗಳ ಪ್ರಮಾಣ ಹೆಚ್ಚಾಗಿದೆ. ಅದು ಬಳ್ಳಾರಿಯಲ್ಲಿ ೪೦, ಹೊಸಪೇಟೆಯಲ್ಲಿ ೩೨ ಹಾಗೂ ಸಂಡೂರು ವ್ಯಾಪ್ತಿಯಲ್ಲಿ ೪೦ ಪ್ರಕರಣಗಳು ೨೦೦೩ರ ಅಂಕಿಅಂಶಗಳ ಪ್ರಕಾರ ದಾಖಲಾಗಿದೆ. ಹಾಗೆಯೇ ಜಿಲ್ಲೆಯಲ್ಲಿರುವ ಕುಷ್ಟರೋಗವು ಅನುಕ್ರಮವಾಗಿ ೩೬೫, ೩೪೫ ಹಾಗೂ ೧೩೨ ಎಂಬುದಾಗಿ ತಿಳಿದುಬರುತ್ತದೆ. ಕ್ಷಯರೋಗದ ಅಥವಾ ಟಿ.ಬಿ. ಪ್ರಮಾಣವು ೩೮೯, ೪೯೩ ಹಾಗೂ ೩೫೨ ಮತ್ತು ಮಲೇರಿಯಾ ರೋಗವು ೧೪೯, ೩೧೩ ಹಾಗೂ ೩೫೨ ಪ್ರಕರಣಗಳು ಪತ್ತೆಯಾಗಿರುವುದಾಗಿ ತಿಳಿದುಬರುತ್ತದೆ. ಮುಖ್ಯವಾಗಿ ಜಿಲ್ಲೆಯ ಗಣಿಕೇಂದ್ರೀತ ತಾಲೂಕುಗಳಲ್ಲಿ ರೋಗದ ಪ್ರಕರಣಗಳ ಹೆಚ್ಚಳಕ್ಕೆ ಈ ಭಾಗದಲ್ಲಿ ನಡೆದಿರುವ ತೀವ್ರತರವಾದ ಗಣಿಗಾರಿಕೆಯಿಂದಾಗಿ ಪರಿಸರ ಮಾಲಿನ್ಯಗೊಂಡಿದೆ, ಇಲ್ಲಿನ ನಾಗರೀಕರಿಗೆ ಶುದ್ಧವಾದ ಕುಡಿಯುವ ನೀರು, ಗಾಳಿ, ಆಹಾರ, ದೊರೆಯದಂತ ಸನ್ನಿವೇಶದ ಸೃಷ್ಟಿಯಿಂದಾಗಿ ದಾಖಲೆಗಿಂತಲೂ ಅತ್ಯಧಿಕ ಪ್ರಮಾಣದಲ್ಲಿ ಹಲವಾರು ರೋಗದ ಪ್ರಕರಣಗಳ ಕಂಡುಬರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಇತ್ತೀಚಿನ ಜಾಗತೀಕ ಮಟ್ಟದಲ್ಲಿ ಬಹುಚರ್ಚಿತ ರೋಗವಾದ ಏಡ್ಸ್ ರೋಗವು ಅಭಿವೃದ್ಧಿಶೀಲ

ರಾಷ್ಟ್ರಗಳಲ್ಲಂತೂ ಕ್ರಮೇಣ ವೃದ್ಧಿಗೊಳ್ಳುತ್ತಾ ಸಾಗಿದೆ. ಇಂತಹ ಮಹಾಮಾರಿ ಏಡ್ಸ್ ರೋಗವು ಭಾರತದ ಸಾಮಾಜಿಕ ಸಂದರ್ಭದಲ್ಲಿ ಭಯ, ಆತಂಕವನ್ನುಂಟು ಮಾಡುವ ಮೂಲಕ ಜನಸಮುದಾಯಗಳಲ್ಲಿ ಈ ರೋಗದ ಬಗ್ಗೆ ಸಾಮಾಜಿಕ ಕೀಳರಿಮೆಯನ್ನು ಸೃಷ್ಟಿಸಿದೆ. ಇಂತಹ ಬೆಳವಣಿಗೆಯು ಅಭಿವೃದ್ಧಿಯ ಹೆಸರಿನಲ್ಲಿ ನಡೆದಿರುವ ಕೊಡು ಕೊಳ್ಳುವಿಕೆಯ ನಿರಿತಿಯಿಂದಾಗಿ ಏಡ್ಸ್ ರೋಗಕ್ಕೆ ವಿಸ್ತೃತ ಆಯಾಮಗಳು ಲಭ್ಯವಾಗಿವೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯು ಗಣಿಗಾರಿಕೆಯು ಇಡೀ ವಿಶ್ವದ ಗಮನವನ್ನು ಸೆಳೆದಿದ್ದಲ್ಲದೆ ಹಲವಾರು ಆಮದು ಚಟುವಟಿಕೆಯ ಜೊತೆಗೆ ಜನರ ವಲಸೆಯ ಪ್ರಮಾಣವು ಹೆಚ್ಚುತ್ತಾ ಸಾಗಿರುವುದರಿಂದ ಜಿಲ್ಲೆಯಲ್ಲಿ ಸರಾಸರಿ ಏಡ್ಸ್ ರೋಗದ ಪ್ರಕರಣಗಳು ಹೆಚ್ಚುತ್ತಾ ಸಾಗಿವೆ. ಇದನ್ನು ೪.೨೧ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೪.೨೧**

**೨೦೦೫ರ ಸಾಲಿನಲ್ಲಿ ಜಿಲ್ಲೆಯಲ್ಲಿ ನೋಂದಾಯಿತ ಏಡ್ಸ್ ರೋಗದ ವಿವರ**

| ವರ್ಷಗಳು | ಪರೀಕ್ಷೆಗೊಳಪಟ್ಟವರು | ಹೆಚ್.ಐ.ವಿ. ಸೋಂಕು ತಗಲಿದವರು | ಶೇಕಡವಾರು |
|---|---|---|---|
| ೧೯೯೯ | ೪೨೦ | ೧೪೮ | ೩೫.೨೩ |
| ೨೦೦೦ | ೧೧೫೯ | ೨೨೯ | ೨೫.೭೯ |
| ೨೦೦೧ | ೧೬೬೪ | ೫೨೪ | ೩೧.೪೯ |
| ೨೦೦೨ | ೧೭೭೯ | ೬೦೫ | ೩೪.೦೦ |
| ೨೦೦೩ | ೨೫೮೦ | ೭೪೪ | ೨೮.೮೩ |
| ೨೦೦೪ | ೩೫೭೬ | ೯೩೭ | ೨೬.೭೪ |
| ಒಟ್ಟು | ೧೧,೧೭೮ | ೩,೨೫೭ | ೨೯.೧೩ |

ಆಧಾರ: ವಿ.ಐ.ಎಂ,ಎಸ್., ಬಳ್ಳಾರಿ, ೧೮.೫.೨೦೦೫.

ಕೋಷ್ಟಕ ೪.೨೧ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಕಳೆದ ೬ ವರ್ಷಗಳಿಂದ ಕಂಡುಬರುತ್ತಿರುವ ಏಡ್ಸ್ ರೋಗದ ಪ್ರಮಾಣವನ್ನು ಸೂಚಿಸುತ್ತದೆ. ೧೯೯೯ರಿಂದ ಹಿಡಿದು ೨೦೦೪ರ ವರೆಗಿನ ಅವಧಿಗಳಲ್ಲಿ ಜಿಲ್ಲೆಯಲ್ಲಿ ಕಂಡುಬರುತ್ತಿರುವ ಏಡ್ಸ್ ರೋಗದ ಪ್ರಕರಣಗಳ ಸಂಖ್ಯೆ ಕ್ರಮೇಣ ಬೆಳೆಯುತ್ತಾ ಸಾಗಿದೆ. ೧೯೯೯ರಲ್ಲಿ ಕೇವಲ ೪೨೦ ಜನರನ್ನು ಏಡ್ಸ್ ರೋಗದ ತಪಾಸಣೆಗೆ ಒಳಪಡಿಸಿದಾಗ ಅವರಲ್ಲಿ ಸುಮಾರು ೧೪೮ ಜನರಿಗೆ ಎಚ್.ಐ.ವಿ. ಇರುವುದು ಕಂಡುಬರುತ್ತದೆ. ಕಲಾಕ್ರಮೇಣ ಜಿಲ್ಲೆಯಲ್ಲಿ ಪ್ರತಿವರ್ಷವು ಏಡ್ಸ್ ಪ್ರಕರಣಗಳು ಹೆಚ್ಚಾಗುತ್ತಾ ಸಾಗಿದೆ. ಇಂತಹ ಬೆಳವಣಿಗೆಯು

ಸಮಾಜದಲ್ಲಿ ಭೀತಿಯನ್ನು ಮೂಡಿಸಿದೆ. ೧೯೯೯ರಲ್ಲಿ ೧೪೪ ಏಡ್ಸ್ ರೋಗಿಗಳ ಸಂಖ್ಯೆ ಇದ್ದದ್ದೂ, ೨೦೦೪ರ ಹೊತ್ತಿಗೆ ೯೩೭ಕ್ಕೆ ಬಂದು ತಲುಪಿದೆ. ಇದು ಕೇವಲ ಕಡಿಮೆ ಪ್ರಮಾಣದ ಜನರನ್ನು ಚಿಕಿತ್ಸೆಗೆ ಒಳಪಡಿಸಿದಾಗ ತಿಳಿದುಬಂದಂತಹ ಫಲಿತಾಂಶ ಆತಂಕಕಾರಿ ವಿಷಯವಾಗಿದೆ. ಇಂತಹ ಚಿಕಿತ್ಸೆಗೆ ಒಳಪಡಿಸಿದವರಲ್ಲಿ ಹೆಚ್ಚಾಗಿ ಗಣಿಗಳಲ್ಲಿ ದುಡಿಯುತ್ತಿರುವ ಮಹಿಳೆಯರು, ಪುರುಷ ಕಾರ್ಮಿಕರು, ಡ್ರೈವರ್, ಆಪರೇಟರ್ಸ್‌ಗಳು ಇರುವುದಾಗಿ ತಿಳಿದುಬರುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಬಳ್ಳಾರಿ ಜಿಲ್ಲೆಯಲ್ಲಿರುವ ಏಡ್ಸ್ ರೋಗಿಗಳ ಸರಾಸರಿ ಪ್ರಮಾಣವು ಕರ್ನಾಟಕ ರಾಜ್ಯಕ್ಕೆ ಹೋಲಿಸಿಕೊಂಡರೆ, ರಾಜ್ಯಮಟ್ಟದಲ್ಲಿ ಪ್ರತಿ ಸಾವಿರ ಜನರಲ್ಲಿ ೧೭ ಜನರು ಏಡ್ಸ್ ಪೀಡಿತರಾಗಿದ್ದಾರೆ, ಬಳ್ಳಾರಿ ಜಿಲ್ಲೆಯಲ್ಲಿ ಪ್ರತಿ ೧೦೦೦ ಜನರಿಗೆ ೧೯ ಜನರು ಏಡ್ಸ್ ರೋಗಕ್ಕೆ ಬಲಿಯಾಗುತ್ತಿದ್ದಾರೆ. ಅಂದರೆ ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತಿರುವ ಏಡ್ಸ್ ಹರಡುವಿಕೆಯ ಪ್ರಮಾಣವು ಕರ್ನಾಟಕದಲ್ಲಿಯೇ ೩ನೇ ಸ್ಥಾನದಲ್ಲಿರುವುದನ್ನು ಗಂಭೀರವಾಗಿ ಪರಿಗಣಿಸುವುದಾದರೆ ಜಿಲ್ಲೆಯಲ್ಲಿ ಸಮಾರೋಪಾದಿಯಲ್ಲಿ ಸಾಗಿರುವ ಗಣಿಗಾರಿಕೆಯ ಸಾಧಕ ಬಾಧಕಗಳು ಒಂದು ರೀತಿಯಲ್ಲಿ ಕಾರಣವೆಂಬುದನ್ನು ಸ್ಪಷ್ಟವಾಗಿ ವಿಶ್ಲೇಷಿಸಬಹುದು.

ಬಳ್ಳಾರಿ, ಹೊಸಪೇಟೆ ಮತ್ತು ಸಂಡೂರು ತಾಲೂಕುಗಳಲ್ಲಿ ಗಣಿ ಆಧಾರಿತ ಗ್ರಾಮಗಳಲ್ಲಿ ಒಳ್ಳೆಯ ಶುದ್ಧವಾದ ಕುಡಿಯುವ ನೀರು ಸಿಗುತ್ತಿಲ್ಲ. ಒಂದು ಅಂಕಿ-ಅಂಶಗಳ(ಕೋಷ್ಟಕ ೪.೧೪ರ ಪ್ರಕಾರ) ಹೊಸಪೇಟೆ ಹಾಗೂ ಸಂಡೂರು ತಾಲೂಕುಗಳಲ್ಲಿ ಫ್ಲೋರೋಸಿಸ್ ಅಂಶ ನೀರಿನಲ್ಲಿ ಹೆಚ್ಚಾಗಿರುವುದು ನಾನಾ ಸಮೀಕ್ಷೆಗಳಿಂದ ಧೃಡಪಟ್ಟಿದೆ. ಹೀಗಾಗಿ ಈ ತಾಲೂಕುಗಳಲ್ಲಿ ಮೇಲಿನ ಅಧಿಕೃತ ದಾಖಲೆಗಳಿಗಿಂತಲೂ ಹೆಚ್ಚಾಗಿ ಕುಷ್ಠ ರೋಗ, ಟಿ.ಬಿ. ಮತ್ತು ಮಲೇರಿಯಾ ರೋಗಿಗಳ ಸಂಖ್ಯೆ ಸಂಡೂರು ತಾಲೂಕಿನಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ಅದು ಬಳ್ಳಾರಿಯಲ್ಲಿ ೧೪೯, ಹೊಸಪೇಟೆಯಲ್ಲಿ ೩೧೩, ಸಂಡೂರಿನಲ್ಲಿ ೩೫೨ ಇರುವುದು ದಾಖಲೆಗಳಿಂದ ವ್ಯಕ್ತವಾಗುತ್ತದೆ. ಮತ್ತೊಂದು ಅಂಕಿ ಅಂಶಗಳ ಪ್ರಕಾರ ಜಿಲ್ಲೆಯ ವಿಪರೀತ ಗಣಿಗಾರಿಕೆಯಿಂದ ಮಿತಿಮೀರಿದ ಸಾರಿಗೆ ವ್ಯವಸ್ಥೆ, ಯಂತ್ರೋಪಕರಣಗಳಿಂದ ಹೊರ ಉಗುಳುವ ಹೊಗೆ, ದಟ್ಟವಾದ ದೂಳಿನಿಂದಾಗಿ ಬಳ್ಳಾರಿ ಜಿಲ್ಲೆಯಾದ್ಯಂತ ಕ್ಷಯ ರೋಗಿಗಳ ಪ್ರಮಾಣ ಅಧಿಕಾವಾಗಿದೆ. ದಾಖಲೆಗಳಲ್ಲಿ ಬಳ್ಳಾರಿ, ಹೊಸಪೇಟೆ, ಸಂಡೂರಿನಲ್ಲಿ ಅನುಕ್ರಮವಾಗಿ ೩೪೯, ೪೯೩, ೩೫೨ಕ್ಕಿಂತಲೂ ೪ ಪಟ್ಟು ಹೆಚ್ಚಾಗಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಹೀಗೆ ಜಿಲ್ಲೆಯ ಅಂಕಿಅಂಶಗಳ ಪ್ರಕಾರ ಕೆಲವೇ ರೋಗಗಳ ಬಗ್ಗೆ ಮಾಹಿತಿಯನ್ನು ಅರಿತಾದ ಮೇಲೆ ದಾಖಲೆಗೆ ಸಿಗದ ಇನ್ನು ಹತ್ತಾರು ರೋಗಗಳು ಗಣಿ ಕಾರ್ಮಿಕರನ್ನು ಬಾದಿಸುತ್ತಿವೆ.

ಮಹಾಪ್ರಬಂಧದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಾರ್ಮಿಕರಿಂದ ವ್ಯಕ್ತವಾದ ರೋಗಗಳ

ಸ್ವರೂಪವು ಈ ಕೆಳಗಿನಂತೆ ಕಂಡುಬರುತ್ತದೆ. ಅವುಗಳೆಂದರೆ, ೧. ಅಸ್ತಮ, ೨. ಅನಿಮೀಯಾ (ರಕ್ತಹೀನತೆ), ೩. ಸ್ನಾಯು ಸೆಳೆತ, ೪. ಮಂಡಿನೋವು, ೫. ಹಲವು ಗುಹ್ಯ ರೋಗಗಳು, ೬. ಚರ್ಮದ ಕಾಯಿಲೆ, ೭. ಟಿ.ಬಿ., ೮. ಏಡ್ಸ್, ೯. ಕ್ಯಾನ್ಸರ್, ೧೦. ಎದೆನೋವು, ೧೧. ಹೃದಯಘಾತ, ೧೨. ಮಂಡಿನೋವು, ೧೩. ಕಾಮಲೆ ಇತ್ಯಾದಿಗಳು ಗಣಿಕಾರ್ಮಿಕರನ್ನು ಯತೇಚ್ಛವಾಗಿ ಕಾಡುತ್ತಿವೆ. ಇಂತಹವುಗಳ ನಿವಾರಣೆಗೆ ಕಾರ್ಮಿಕರು ಹೆಚ್ಚಾಗಿ ಖಾಸಗಿ ಸಣ್ಣ-ಪುಟ್ಟ ವೈದ್ಯರನ್ನೇ ಆಶ್ರಯಿಸಿದ್ದಾರೆ. ಮಹಿಳೆಯರಲ್ಲಿ ಹೆಚ್ಚಾಗಿ ಅನಿಮೀಯಾ (ರಕ್ತಹೀನತೆ) ರೋಗವು ಕಂಡುಬರುತ್ತದೆ. ಇದಕ್ಕೆ ಪೌಷ್ಟಿಕ ಆಹಾರದ ಕೊರತೆ, ಮೇಲಿಂದ ಮೇಲೆ ಸಂತಾನ ಕ್ರಿಯೆಗೆ ಒಳಗಾಗುವುದು, ಬಾಣಂತಿಯ ಆರೈಕೆಯ ಕೊರತೆ, ಬಡತನ, ಅಶುದ್ಧವಾದ ವಾತಾವರಣ ಇತ್ಯಾದಿಗಳಿಂದ ಮಹಿಳಾ ಕಾರ್ಮಿಕರಿಗೆ ಸಹಜವೆಂಬಂತೆ ರಕ್ತಹೀನತೆ, ಎದೆನೋವು, ಮಂಡಿನೋವು, ಬಿಳಿ ಸೆರಗು, ಮೂಲವ್ಯಾದಿ, ಕಜ್ಜಿ ಇತ್ಯಾದಿಗಳು ಹೆಚ್ಚಾಗಿ ಕಂಡುಬರುತ್ತವೆ.

ಹೊಸಪೇಟೆ ಮತ್ತು ಸಂಡೂರು ತಾಲೂಕುಗಳಲ್ಲಿರುವ ಸರ್ಕಾರಿ ಹಾಗೂ ಖಾಸಗಿ ವೈದ್ಯರನ್ನು ಸಂಪರ್ಕಿಸಿ, ತಮ್ಮ ಹತ್ತಿರ ಚಿಕಿತ್ಸೆ ಪಡೆಯಲು ಬರುವ ಗಣಿ ಕಾರ್ಮಿಕರಿಗೆ ಹೆಚ್ಚಾಗಿ ಕಂಡುಬರುವ ರೋಗಗಳ ಬಗ್ಗೆ ಕೇಳಿದಾಗ, ಪ್ರತಿಯೊಬ್ಬರಿಂದಲೂ ಅತ್ಯಂತ ಸರಳವಾದ ಹಾಗೂ ನಿರ್ಲಕ್ಷತೆಯಿಂದೂಡ ಗೂಡಿದ ಉತ್ತರಗಳು ವ್ಯಕ್ತವಾದವು. ಅವರೆಲ್ಲಾರು ಗಣಿಕಾರ್ಮಿಕರಿಗೆ ಕೇವಲ ಸಣ್ಣ ಪುಟ್ಟ ರೋಗಗಳು ಮಾತ್ರ ಕಂಡುಬರುತ್ತವೆ ಹಾಗೂ ದೈಹಿಕವಾಗಿ ಅವರೆಲ್ಲಾ ಸಧೃಢರಾಗಿರುತ್ತಾರೆ. ರೋಗ ನಿರೋಧಕ ಶಕ್ತಿ ಅವರಲ್ಲಿ ಹೆಚ್ಚಾಗಿರುತ್ತದೆ ಎಂಬ ಹಾರಿಕೆಯ ಉತ್ತರಗಳನ್ನು ಕೇಳಿದಾಗ ಜಿಲ್ಲೆಯಲ್ಲಿ ನಡೆಯುವ ಗಣಿ ಮಾಫೀಯಾ ನಮ್ಮ ಸುತ್ತಲಿನ ವ್ಯವಸ್ಥೆಯ ಪ್ರತಿಯೊಂದು ಆಯಾಮಗಳ ಬಾಯಿಯನ್ನು ಮುಚ್ಚಿಸುವ ಮೂಲಕ, ನೈಜತೆಯನ್ನು ಹೇಗೆ ಮರೆ ಮಾಚಲು ಸಮರ್ಥವಾಗಿದೆ ಎಂಬುದನ್ನು ಇದರಿಂದ ಅರಿಯಬಹುದು.

ಗಣಿಕಾರ್ಮಿಕರು ವಿವಿಧ ರೋಗಗಳಿಗೆ ಈಡಾಗಲು ಮುಖ್ಯವಾಗಿ ಕಾರ್ಮಿಕರ ದೈಹಿಕ ಸಾಮರ್ಥ್ಯವನ್ನು ಪ್ರತಿನಿಧಿಸುವ ಅವರ ವಯಸ್ಸು, ಪರಿಸರ, ವಿವಿಧ ಹವ್ಯಾಸ ಹಾಗೂ ಅವರಲ್ಲಿರುವ ಅನಾರೋಗ್ಯಕರ ಚಟಗಳು ಸಹ ಕಾರಣವೆಂದೇ ಹೇಳಬೇಕಾಗುತ್ತದೆ. ಕಾರ್ಮಿಕರು ತಮ್ಮ ಶ್ರಮದಾಯಕ ಕೆಲಸಗಳಿಂದ ಬೇಸತ್ತು ವಿಶ್ರಾಂತಿಗಾಗಿ ದೂಮಪಾನ, ಮಧ್ಯಪಾನ, ಗಾಂಜಸೇವನೆ, ಗುಟ್ಕಸೇವನೆ, ತಂಬಾಕು, ನಶ್ಯದ ಬಳಕೆ, ವೇಶ್ಯಾವೃತ್ತಿ, ಇಸ್ಪೀಟ್ ಮತ್ತು ಓ.ಸಿ. ಮಟ್ಕ ಹಾಗೂ ಜೂಜುಗಳಂತಹ ಕೆಲಸಗಳಲ್ಲಿ ತೊಡಗಿ ಅವರು ಇನ್ನಷ್ಟು ದೈಹಿಕವಾಗಿ ಹಾಗೂ ಮಾನಸಿಕವಾಗಿ ಜರ್ಜಿತಗೊಂಡಿದ್ದಾರೆ. ಹೀಗಾಗಿ

ಅನಾರೋಗ್ಯಕ್ಕೆ ಒಳಗಾದ ಕಾರ್ಮಿಕರಿಗೆ ಸೂಕ್ತವಾದ ಚಿಕಿತ್ಸೆಯನ್ನು ಪಡೆಯಲು ಅಗತ್ಯವಾದ ಆದಾಯ, ಕೆಲಸಕ್ಕೆ ತಕ್ಕ ಕೂಲಿ, ವೈದ್ಯಕೀಯ ಅವಕಾಶಗಳು ಅವಶ್ಯಕತೆಗೆ ತಕ್ಕಂತೆ ದೊರಕದ ಕಾರಣ ಮತ್ತಷ್ಟೂ ಅನಾರೋಗ್ಯಕ್ಕೆ ಈಡಾಗಲೂ ಕಾರಣವಾಗಿದೆ. ಕಾರ್ಮಿಕರ ಅನಾರೋಗ್ಯಕ್ಕೆ ಮುಖ್ಯವಾಗಿ ಅವರಲ್ಲಿರುವ ದೈಹಿಕ ಸಾಮರ್ಥ್ಯತೆ ಒಂದು ಕಾರಣವಾಗಿದೆ. ಗಣಿ ಕೆಲಸವು ಹೆಚ್ಚು ಶ್ರಮದಾಯಕ ಉದ್ಯೋಗವಾಗಿರುವುದರಿಂದ ಕಾರ್ಮಿಕರು ಮಧ್ಯವಯಸ್ಕರಾದ ಮೇಲೆ ಅವರನ್ನು ಅನೇಕ ಆನಾರೋಗ್ಯದ ಸಮಸ್ಯೆಗಳು ಕಾಡಲು ಪ್ರಾರಂಭಿಸುತ್ತವೆ. ಬಾಲ್ಯದಿಂದ ಹಿಡಿದು ವೃದ್ಧಾಪ್ಯದವರೆಗೆ ಜಿಲ್ಲೆಯ ಗಣಿಯಲ್ಲಿ ತೊಡಗಿರುವ ಕೆಲವು ಕಾರ್ಮಿಕರನ್ನು ಸಂದರ್ಶಿಸಿದಾಗ, ಅವರು ತಮ್ಮ ಮಧ್ಯವಯಸ್ಸಿನತನಕ ಏನೂ ತೊಂದರೆ ಇರಲಿಲ್ಲ. ನಂತರ ದೈಹಿಕವಾಗಿ ಬೇಗ ಬಳಲುವ, ಚಿಕ್ಕ ಪುಟ್ಟ, ಕೆಲಸಗಳಿಗೂ ಆಯಾಸ, ಕೆಮ್ಮು, ಅಸ್ತಮ, ಬಳಲಿಕೆ, ನಿಶ್ಯಕ್ತಿ, ಮೂರ್ಛೆ, ಭಯ, ಗೊಂದಲಗಳು ತಲೆದೂರುತ್ತವೆ ಎಂಬ ಆತಂಕವನ್ನು ವ್ಯಕ್ತಪಡಿಸುತ್ತಾರೆ.

ಈ ಹಿಂದೆಯೇ ಕೇಂದ್ರ ಭೂ ವಿಜ್ಞಾನ ಮತ್ತು ಗಣಿ ಮಂತ್ರಾಲಯವು ವಿವಿಧ ಅಪಾಯಕಾರಿ ಗಣಿಗಳಲ್ಲಿ ಸೇವೆ ಸಲ್ಲಿಸುವ ಕಾರ್ಮಿಕರಿಗಾಗಿ ವಿಶೇಷ ವೈದ್ಯಕೀಯ ಸೇವಾ ವ್ಯವಸ್ಥೆಯನ್ನು ಜಿಲ್ಲೆಯ ಸಂಡೂರು ಹಾಗೂ ಹೊಸಪೇಟೆ ತಾಲೂಕುಗಳಲ್ಲಿ ಆರಂಭಿಸಿದೆ. ಇಂತಹ ಗಣಿಕಾರ್ಮಿಕ ಆಸ್ಪತ್ರೆಗಳಲ್ಲಿ ಸೇವೆಯನ್ನು ಸಲ್ಲಿಸುವ ವೈದ್ಯರು ಹಾಗೂ ಸಿಬ್ಬಂದಿಗಳು ಹೇಗೆ ಗಣಿಕಾರ್ಮಿಕರನ್ನು ತಪಾಸಣೆಗೈಯುತ್ತಾರೆ ಅಲ್ಲಿರುವ ಬೇರೆ, ಬೇರೆ ಸೌಲಭ್ಯಗಳಾವುವು ಕಾರ್ಮಿಕರ ವಸತಿ ಗೃಹಗಳಿಗೆ ಸಂದರ್ಶನ ಕೊಡುತ್ತಾರೋ ಇಲ್ಲವೋ ಎಂಬುದನ್ನು ತಿಳಿಯುವ ಮೂಲಕ ಗಣಿ ಕಾರ್ಮಿಕರ ಆರೋಗ್ಯದ ವಿವಿಧ ಸೌಲಭ್ಯಗಳನ್ನು ಸ್ಪಷ್ಟವಾಗಿ ಅರಿಯಬಹುದು. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಗಣಿ ಪ್ರದೇಶ ಹಾಗೂ ಕಾರ್ಮಿಕ ಕ್ಯಾಂಪ್‌ಗಳಿಗೆ ವೈದ್ಯರ ಸೇವೆ, ಸಲಹೆ ಮತ್ತು ಸಂದರ್ಶನ ಕಾರ್ಯಗಳ ಬಗ್ಗೆ ಕಾರ್ಮಿಕರನ್ನು ಪ್ರಶ್ನಿಸಿದಾಗ ದೊರೆತ ಉತ್ತರವು ಕೋಷ್ಟಕ ೪.೨೨ರಂತೆ ಕಂಡುಬರುತ್ತದೆ.

**ಕೋಷ್ಟಕ ೪.೨೨ : ಗಣಿ ವೈಧ್ಯಾಧಿಕಾರಿಗಳ ಸಂದರ್ಶನದ ವಿವರ**

| ಕ್ರ. ಸಂ. | ವೈದ್ಯ ಸಿಬ್ಬಂದಿಗಳ ಭೇಟಿಯ ಅವಧಿ | ವಾರ ಕೊಮ್ಮೆ | ೧೫ ರಿಂದ ತಿಂಗಳಿಗೊಮ್ಮೆ | ೧ ತಿಂಗಳಿ ಗೊಮ್ಮೆ | ೨ ಕ್ಕಿಂತಲೂ ಹೆಚ್ಚು ತಿಂಗಳು | ೩ ಕ್ಕಿಂತ ಹೆಚ್ಚು ತಿಂಗಳು | ಒಟ್ಟು |
|---|---|---|---|---|---|---|---|
| ೧. | ಕಾರ್ಮಿಕರ ಸಂಖ್ಯೆ | -- | ೩೦ | ೭೦ | ೭೫ | ೨೫ | ೨೦೦ |
| ೨. | ಶೇಕಡವಾರು | -- | ೧೫ | ೩೫ | ೩೭.೫ | ೧೨.೫ | ೧೦೦ |

ಮೂಲ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಕೋಷ್ಟಕ ೪.೨೨ರ ಪ್ರಕಾರ ಜಿಲ್ಲೆಯಲ್ಲಿ ಗಣಿಪ್ರದೇಶದಲ್ಲಿ ಕೆಲಸ ಮಾಡುವ ಕಾರ್ಮಿಕರನ್ನು ಪರೀಕ್ಷಿಸಲು, ಆರೋಗ್ಯ ತಿಳುವಳಿಕೆ ನೀಡಲು ಮತ್ತು ಕಾರ್ಮಿಕರನ್ನು ತಪಾಸಿಸಲು ಗಣಿ ಮಂತ್ರಾಲಯದ ವೈದ್ಯರು ಎಷ್ಟು ದಿನಗಳಿಗೊಮ್ಮೆ ಭೇಟಿ ನೀಡಲಿದ್ದಾರೆ ಎಂಬುದಕ್ಕೆ ವಿವಿಧ ಗಣಿಗಳಲ್ಲಿ ದುಡಿಯುತ್ತಿರುವ ಕಾರ್ಮಿಕರನ್ನು ಕೇಳಿದಾಗ ದೊರೆತ ಉತ್ತರಗಳಾಗಿವೆ.

ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡ ವಿವಿಧ ಗಣಿಸಂಸ್ಥೆಗಳಿಗೆ ಹಾಗೂ ಕಾರ್ಮಿಕ ಕ್ಯಾಂಪ್‌ಗಳಿಗೆ ಶೇಕಡ ೧೫ರಷ್ಟು ಕಾರ್ಮಿಕರು ಕಾರ್ಮಿಕ ಆಸ್ಪತ್ರೆಯ ವೈದ್ಯಾಧಿಕಾರಿ ಹಾಗೂ ಸಿಬ್ಬಂಧಿಗಳು ೧೫ ದಿನಗಳಿಗೊಮ್ಮೆ ಗಣಿ ಪ್ರದೇಶಕ್ಕೆ ಭೇಟಿಯಿತ್ತು, ಆರೋಗ್ಯದ ಬಗ್ಗೆ ತಿಳುವಳಿಕೆಯನ್ನು ನೀಡುತ್ತಾರೆ. ಜೊತೆಗೆ ಚಿಕ್ಕ ಪುಟ್ಟ ರೋಗಗಳಿಗೆ ಗುಳಿಗೆ, ಔಷಧಿಗಳನ್ನು ಕೊಡಲಾಗುತ್ತದೆ ಎಂದು ಹೇಳುತ್ತಾರೆ. ಉಳಿದ ಶೇಕಡ ೩೫ರಷ್ಟು ಗಣಿ ಕಾರ್ಮಿಕರು ತಿಂಗಳಿಗೊಮ್ಮೆ ಆಸ್ಪತ್ರೆಯ ಸಿಬ್ಬಂಧಿಯು ಭೇಟಿಯಿತ್ತು ಔಷಧಿಗಳನ್ನು, ಕೆಲವೊಮ್ಮೆ ಇಂಜೆಕ್ಷನ್‌ಗಳನ್ನು ನೀಡಲಾಗುತ್ತದೆ. ಆದರೆ ವೈದ್ಯರು ಅಥವಾ ಸಿಬ್ಬಂಧಿಗಳ ವರ್ತನೆಯು ಬೇಜವಾಬ್ದಾರಿಯಿಂದ ಕೂಡಿದ್ದು, ಗಣಿ ಪ್ರದೇಶದ ಸಂದರ್ಶನದ ಅವಧಿಯು ತುಂಬಾ ಅನಿಶ್ಚಿತತೆಯಿಂದ ಕೂಡಿರುತ್ತದೆ ಎಂದು ಅಭಿಪ್ರಾಯಪಡುತ್ತಾರೆ. ಇನ್ನೂ ಶೇಕಡ ೩೭.೫ ರಷ್ಟು ಕಾರ್ಮಿಕರು ೧ ರಿಂದ ೨ ತಿಂಗಳೊಳಗೆ ಗಣಿ ಪ್ರದೇಶಗಳಿಗೆ ಹೆಸರಿಗೆ ಮಾತ್ರ ಭೇಟಿ ನೀಡುವ ದಿನಚರಿಯನ್ನು ಪೂರೈಸಲಾಗುತ್ತದೆ ಎಂಬ ನಿರಾಶದಾಯಕವಾದ ಉತ್ತರಗಳು ಕೇಳಿಬರುತ್ತವೆ. ಉಳಿದ ಶೇಕಡ ೧೨.೫ರಷ್ಟು ಕಾರ್ಮಿಕರು ಆಸ್ಪತ್ರೆಯ ಸಿಬ್ಬಂಧಿಗಳು ಕೆಲವೊಮ್ಮೆ ೩ ತಿಂಗಳಿಗೊಮ್ಮೆ ಸಂದರ್ಶನ ನೀಡುವ ಪರಿಪಾಠವನ್ನಿಟ್ಟುಕೊಂಡಿದ್ದಾರೆಂದೂ ಅಭಿಪ್ರಾಯಪಡುತ್ತಾರೆ. ಒಟ್ಟಾರೆಯಾಗಿ ಕಾರ್ಮಿಕರ ಅಭಿಪ್ರಾಯವನ್ನು ದಾಖಲಿಸುವುದಾದರೆ ಗಣಿ ಆಸ್ಪತ್ರೆಯ ಸಿಬ್ಬಂಧಿಗಳಲ್ಲಿ ಕಾರ್ಮಿಕರ ಬಗ್ಗೆ ವೈದ್ಯರು ತೋರುವ ನಿಷ್ಕಾಳಜಿ ಹಾಗೂ ನಿರ್ಲಕ್ಷತೆಯ ಮನೋಭಾವನೆಯ ಬಗ್ಗೆ ಕಾರ್ಮಿಕ ವರ್ಗದಲ್ಲಿ ಅಸಮಾಧಾನವಿದೆ. ಹಾಗೆಯೇ ಆಸ್ಪತ್ರೆಗಳಲ್ಲಿ ಎಕ್ಸ್‌ರೇ, ರಕ್ತಪರೀಕ್ಷೆ, ಮೂತ್ರ ಪರೀಕ್ಷೆಯ ಸೌಲಭ್ಯಗಳು ಇರುವುದಿಲ್ಲ. ಗಣಿ ಕಾರ್ಮಿಕರನ್ನು ಪ್ರೀತಿ ಗೌರವ ಆಧಾರಗಳೊಂದಿಗೆ ಕಾಣುವ ಮನಸ್ಥಿತಿಯೇ ಸಿಬ್ಬಂಧಿಯಲ್ಲಿ ಇಲ್ಲವಾಗಿರುವುದರಿಂದ ಬಹುತೇಕ ಗಣಿಕಾರ್ಮಿಕರು ಖಾಸಗಿ ಆಸ್ಪತ್ರೆಗಳನ್ನು ಅವಲಂಬಿಸಿರುವುದಾಗಿ ತಿಳಿಸುತ್ತಾರೆ.

ಈ ಮೇಲಿನ ಕಾರ್ಮಿಕರ ಎಲ್ಲಾ ಅಹವಾಲುಗಳನ್ನು ಗಣಿ ಆಸ್ಪತ್ರೆಯ ಸಿಬ್ಬಂಧಿಗಳ ಮುಂದಿಟ್ಟಾಗ ಪ್ರತಿನಿತ್ಯ ಬೇರೆ ಬೇರೆ, ಮೈನಿಂಗ್‌ಗಳಿಗೆ ಸಂದರ್ಶನಕೊಡಬೇಕಾಗಿರುವುದರ ಜೊತೆಗೆ ಗಣಿಯಲ್ಲಿರುವ ಕಾರ್ಮಿಕ ಕುಟುಂಬದವರ ಆರೋಗ್ಯಕ್ಕೆ ಸಂಬಂಧಿಸಿದಂತೆ ಚಿಕಿತ್ಸೆಯನ್ನು ದಿನನಿತ್ಯ ನೀಡಲಾಗುತ್ತಿದೆ. ಇಂತಹ ಸನ್ನಿವೇಶದಲ್ಲಿ ಕಾರ್ಮಿಕರಲ್ಲಿರುವ ವಿವಿಧ ರೋಗಗಳ ಬಗ್ಗೆ ವಿಶೇಷ ಕಾಳಜಿಯನ್ನು

ವಹಿಸುವುದು ಕಷ್ಟಕರ. ಅಲ್ಲದೇ ಕಾರ್ಮಿಕ ಆಸ್ಪತ್ರೆಗೆ ಸರ್ಕಾರವು ಪೂರೈಸುವ ಔಷಧಿಗಳಾಗಲೀ ಇನ್ನಿತರ ಅವಶ್ಯಕ ಸೌಲಭ್ಯಗಳಾಗಲೀ ಇಲ್ಲದಿರುವಾಗ, ಬಹಳಷ್ಟು ದಿನಗಳವರೆಗೆ ಒಂದೇ ಸ್ವರೂಪದ ಔಷಧಿಗಳನ್ನು, ಕಾರ್ಮಿಕರಿಗೆ ವಿತರಿಸುವುದರಿಂದ ವೈದ್ಯರ ಬಗ್ಗೆಯಾಗಲೀ ಅಥವಾ ಸಿಬ್ಬಂಧಿಯವರ ಬಗ್ಗೆಯಾಗಲೀ ಗಣಿಕಾರ್ಮಿಕರಲ್ಲಿ ತಿರಸ್ಕಾರದ ಮನೋಭಾವನೆ ಕಂಡುಬರುವುದು ಸಹಜವಾಗಿರುತ್ತದೆಂಬ ವಿಚಾರವನ್ನು ಮಂಡಿಸುತ್ತಾರೆ.

ಹೊಸಪೇಟೆ ತಾಲೂಕಿನ ಕಾರಿಗನೂರು ಗ್ರಾಮದಲ್ಲಿರುವ ಮುಖ್ಯ ಕೇಂದ್ರ ಗಣಿ ಕಾರ್ಮಿಕರ ವೈದ್ಯಕೀಯ ಆಸ್ಪತ್ರೆಗೆ ಭೇಟಿ ನೀಡಿದಾಗ ಕಂಡುಬಂದ ದೃಶ್ಯವು ತುಂಬಾ ಅಸಹ್ಯಕರವಾಗಿತ್ತು. ಆಸ್ಪತ್ರೆಯ ಸಿಬ್ಬಂಧಿಗಳಲ್ಲಿ ಮೂವರು ವೈದ್ಯರಲ್ಲಿ ಕೇವಲ ಒಬ್ಬರು ಇಲ್ಲವೆ ಕೆಲವೊಮ್ಮೆ ಇಬ್ಬರು ವೈದ್ಯರು ಮಾತ್ರ ಹಾಜರಿರುತ್ತಾರೆ. ಆಸ್ಪತ್ರೆಯಲ್ಲಿ ರೋಗಿಗಳ ತಪಾಸಣೆಗೆ ಅಗತ್ಯವಾಗಿ ಬೇಕಾದ ಕ್ಷ ಕಿರಣ ಸೌಲಭ್ಯ, ರಕ್ತ ಪರೀಕ್ಷೆ, ಮೂತ್ರ ಪರೀಕ್ಷೆ, ಕಫಾ ಪರೀಕ್ಷೆ ಇತ್ಯಾದಿ ಪ್ರಯೋಗಾಲಯಗಳು ಜಿಡ್ಡುಗಟ್ಟಿವೆ. ಆಸ್ಪತ್ರೆಗೆ ಚಿಕಿತ್ಸೆ ಪಡೆಯಲು ಆಗಮಿಸುವ ಗಣಿ ಕಾರ್ಮಿಕ ಹಾಗೂ ಅವರ ಕುಟುಂಬಕ್ಕೆ ಔಪಚಾರಿಕವಾಗಿ ತಪಾಸಿಸುವ ಇಲ್ಲವೇ ಆಸ್ಪತ್ರೆಯ ಬಗ್ಗೆ ಮಾಹಿತಿ ನೀಡುವ ಕೇವಲ ಒಂದು ಸಲಹಾ ಕೇಂದ್ರವೆಂಬಂತೆ ಆಸ್ಪತ್ರೆಯ ಆಡಳಿತ ಮಂಡಳಿಯ ವ್ಯವಹಾರ ಕಂಡುಬರುತ್ತದೆ. ಸುಮಾರು ೩೦ ಹಾಸಿಗೆಯ ಸಾಮರ್ಥ್ಯವುಳ್ಳ ಆಸ್ಪತ್ರೆಯ ವಾರ್ಡ್‌ಗಳಲ್ಲಿ ಕಾರ್ಮಿಕರೇ ಇಲ್ಲದೆ ಭಣಗುಡುತ್ತಿತ್ತು. ಜೊತೆಗೆ ಆಸ್ಪತ್ರೆಯ ಒಳಗಡೆ ಬೆಕ್ಕು, ನಾಯಿಗಳಿಗೆ ಮುಕ್ತ ಪ್ರವೇಶ ಇರುವುದನ್ನು ಗಮನಿಸಿದರೆ ಅಲ್ಲಿನ ವೈದ್ಯಕೀಯ ಆಡಳಿತ ಮಂಡಳಿಯ ಕಾರ್ಯವೈಖರಿ ಮತ್ತು ಸಿಬ್ಬಂದಿಯವರ ಕರ್ತವ್ಯ ಪಾಲನೆಯು ಇಡೀ ಗಣಿ ಕಾರ್ಮಿಕರ ಅನಾರೋಗ್ಯದ ಸ್ವರೂಪಕ್ಕೆ ಕೈಗನ್ನಡಿಯಾಗಿ ಕಂಡುಬರುತ್ತದೆ. ಕೊನೆಯದಾಗಿ ಒಂದು ತೀರ್ಮಾನಕ್ಕೆ ಬರುವುದಾದರೆ ಯಾವುದೇ ಕ್ಷೇತ್ರದಲ್ಲಿರುವ ನೌಕರಶಾಹಿಯು ತನ್ನಲ್ಲಿ ಸಹಾಯ ಕೇಳಿ ಬರುವ ಸಾರ್ವಜನಿಕರನ್ನು ಅತ್ಯಂತ ಕನಿಷ್ಠವಾಗಿ ಕಾಣುವ, ಅಧಿಕಾರಯುತವಾಗಿ ವರ್ತಿಸುವ ಮತ್ತು ಅವಕಾಶ ಸಿಕ್ಕಾಗ ಕೈಗೆ ಸಿಕ್ಕಷ್ಟು ಬಾಚಿಕೊಳ್ಳುವ, ಮನೋಭಾವನೆಯು ಅತೀ ಸರಳ ಹಾಗೂ ಸಹಜವೆಂಬಂತೆ ಕಂಡುಬರುತ್ತದೆ.

ಇಂತಹ ಅವ್ಯವಸ್ಥೆಯ ಆಗರದಲ್ಲಿ ಗಣಿಕಾರ್ಮಿಕರು ಸರ್ಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸೆಯನ್ನು ಪಡೆಯದೇ ಖಾಸಗಿ ಆಸ್ಪತ್ರೆಗಳಲ್ಲಿ, ಸ್ವಯಂಚಿಕಿತ್ಸೆ ಮತ್ತು ನಂಬಿಕೆಗಳ ಆಧಾರದ ಮೇಲೆ ತಮ್ಮ ಅನಾರೋಗ್ಯದಿಂದ ಮುಕ್ತಿಹೊಂದಲು ಪ್ರಯತ್ನಿಸುವುದನ್ನು ಕೋಷ್ಟಕ ೪.೨೩ರ ಪಟ್ಟಿಯಿಂದ ತಿಳಿಯಬಹುದು.

## ಕೋಷ್ಟಕ ೪.೨೩

## ಕಾರ್ಮಿಕರ ಚಿಕಿತ್ಸಾ ವಿಧಾನ

| ಕ್ರ.ಸಂ. | ವಿವರಗಳು | ಸರ್ಕಾರಿ | | | ಖಾಸಗಿ | | | ಮನೆಮದ್ದು | | | ಮಾಟಮಂತ್ರ | | | ಗಾಂಜಾ ಕುಡಿತ | | | ಒಟ್ಟು |
|---|---|---|---|---|---|---|---|---|---|---|---|---|---|---|---|---|---|
| ೧. | ಹಕ್ಕುದಾರಿಕೆ | ಗಂ* | ಹೆ* | ಒ* | ಗಂ* | ಹೆ* | ಒ* | ಗಂ* | ಹೆ* | ಒ* | ಗಂ* | ಹೆ* | ಒ* | ಗಂ* | ಹೆ* | ಒ* | |
| ೨. | ಕಾರ್ಮಿಕರ ಸಂಖ್ಯೆ | ೧೨ | ೨೮ | ೪೦ | ೫೫ | ೨೫ | ೮೦ | ೧೦ | ೨೦ | ೩೦ | ೧೪ | ೧೬ | ೩೦ | ೨೦ | -- | ೨೦ | ೨೦೦ |
| ೩. | ಶೇಕಡವಾರು | ೬ | ೧೪ | ೨೦ | ೨೭.೫ | ೧೨.೫ | ೪೦ | ೫ | ೧೦ | ೧೫ | ೭ | ೮ | ೧೫ | ೧೦ | -- | ೧೦ | ೧೦೦ |

*ಗಂ = ಗಂಡು, *ಹೆ = ಹೆಣ್ಣು, *ಒ = ಒಟ್ಟು

ಮೂಲ : ಕ್ಷೇತ್ರ ಸಮೀಕ್ಷೆ ವರದಿ.

ಕೋಷ್ಟಕ ೪.೨೩ ರಲ್ಲಿ ಗಣಿ ಕಾರ್ಮಿಕರು ತಮ್ಮ ಅನಾರೋಗ್ಯಕ್ಕೆ ಚಿಕಿತ್ಸೆಯನ್ನು ಪಡೆಯುವ ವಿಧಾನವನ್ನು ತೋರಿಸುತ್ತದೆ. ಶೇಕಡ ೨೦ ರಷ್ಟು ಗಣಿ ಕಾರ್ಮಿಕರು ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಚಿಕಿತ್ಸೆಯನ್ನು ಪಡೆಯುತ್ತಾರೆ. ಅದರಲ್ಲಿ ಗಂಡಸರು ಕೇವಲ ಶೇಕಡ ೬ ರಷ್ಟಿದ್ದರೆ, ಹೆಂಗಸರ ಪ್ರಮಾಣ ಶೇಕಡ ೧೪ ರಷ್ಟಿರುತ್ತದೆ. ಹಾಗೆಯೇ ಶೇಕಡ ೪೦ ರಷ್ಟು ಕಾರ್ಮಿಕರು ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆಯನ್ನು ಪಡೆದುಕೊಳ್ಳುವವರಾಗಿದ್ದಾರೆ. ಅವರಲ್ಲಿ ೨೭.೫ ರಷ್ಟು ಪುರುಷರಾಗಿದ್ದರೆ, ಸ್ತ್ರೀಯರು ಕೇವಲ ೧೨.೫ ರಷ್ಟು ಮಾತ್ರ ಖಾಸಗಿ ಕೇಂದ್ರಗಳಲ್ಲಿ ಚಿಕಿತ್ಸೆಯನ್ನು ಪಡೆದುಕೊಳ್ಳುತ್ತಿದ್ದಾರೆ. ಕಾರ್ಮಿಕರು ತಮ್ಮ ಅತಂತ್ರ ದುಡಿಮೆ, ಕಡಿಮೆಕೂಲಿ, ಬಡತನ, ನಿರುದ್ಯೋಗಗಳಿಂದಾಗಿ ಕಾರ್ಮಿಕರಿಗೆ ಕಾಡುವ ಅನಾರೋಗ್ಯಕ್ಕೆ ಮನೆಯಲ್ಲಿರುವ ಸಂಪ್ರದಾಯಿಕ ಔಷದೋಪಚಾರಗಳನ್ನೇ ಬಳಸುತ್ತಾರೆ. ಅವರಲ್ಲಿ ಪುರುಷರ ಪ್ರಮಾಣ ಶೇಕಡ ೫ ರಷ್ಟಿದ್ದರೆ ಮಹಿಳೆಯರ ಪ್ರಮಾಣ ಶೇಕಡ ೧೦ ರಷ್ಟಿದೆ. ಹಾಗೆಯೇ ಕಾರ್ಮಿಕರು ಅನಕ್ಷರಸ್ಥರು, ಅನೇಕ ಮೂಢನಂಬಿಕೆಯನ್ನುಳ್ಳವರು ಆಗಿರುವುದರಿಂದ ಶೇಕಡ ೬ ರಷ್ಟು ಪುರುಷರು ಶೇಕಡ ೮ ರಷ್ಟು ಸ್ತ್ರೀಯರು ದೇವರು, ಮಾಟ-ಮಂತ್ರಗಳ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತಾರೆ. ಇನ್ನೂ ಉಳಿದ ಶೇಕಡ ೧೦ ರಷ್ಟು ಕಾರ್ಮಿಕರು ತಮ್ಮ ಅನಾರೋಗ್ಯಕ್ಕೆ ಕುಡಿತ, ಗಾಂಜಾಗಳ ಮೂಲಕ ಪರಿಹಾರವನ್ನು ನಿರೀಕ್ಷಿಸುತ್ತಾರೆ.

ಭಾರತದ ಪುರುಷಾಧಿಪತ್ಯ ಶ್ರೇಣೀಕೃತ ವ್ಯವಸ್ಥೆಯ ಪರಿಣಾಮವು ಜಿಲ್ಲೆಯ ಗಣಿ ಕಾರ್ಮಿಕರು ತಮ್ಮ ಆರೋಗ್ಯದ ರಕ್ಷಣೆಗೆ ಕೈಗೊಳ್ಳುವ ವಿವಿಧ ಚಿಕಿತ್ಸಾ ವಿಧಾನಗಳಲ್ಲಿ ವ್ಯಕ್ತಗೊಳ್ಳುತ್ತದೆ. ಅದು ಪುರುಷ ಮತ್ತು ಮಹಿಳೆಯರ ನಡುವೆ ಹುಟ್ಟುಹಾಕಿರುವ ತಾರತಮ್ಯವನ್ನು ಈ ಮೇಲಿನ ಕೋಷ್ಟಕದಿಂದ ಅರಿಯಬಹುದು. ಗಣಿ ಕಾರ್ಮಿಕರ ದೈನಂದಿನ ಬದುಕಿಗೆ ಹಾಗೂ ಕುಟುಂಬದ ನಿರ್ವಹಣೆಗೆ ಮಹಿಳೆಯ ದುಡಿಮೆ ಮತ್ತು ಉತ್ಪನ್ನ ಅತ್ಯವಶ್ಯಕವಾಗಿ ಕುಟುಂಬದ ಭದ್ರತೆಗೆ ಬೇಕಾಗಿದೆ. ಆದರೆ ಅವಳ ಯೋಗಕ್ಷೇಮದ ವಿಷಯ ಬಂದಾಗ ಅವಳ ಚಿಕಿತ್ಸೆಗಾಗಿ ಮತ್ತೊಬ್ಬರ ಪರವಾನಿಗೆಯನ್ನು ಪಡೆಯಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ಇದಕ್ಕೆ ಮಹಿಳಾ ಕಾರ್ಮಿಕಳು ಅನಾರೋಗ್ಯಕ್ಕೆ ಒಳಗಾದಾಗ ಅವಳು ಅನುಸರಿಸುವ ವಿಧಾನಗಳಿಂದ ಅವಳ ಸ್ವಾತಂತ್ರ್ಯ ಮತ್ತು ಹಕ್ಕುದಾರಿಕೆಯಲ್ಲಿ ಪುರುಷನ ದಬ್ಬಾಳಿಕೆ ಹಾಗೂ ಶೋಷಣೆಯ ಪ್ರವೃತ್ತಿಯನ್ನು ಅರಿಯಬಹುದು. ಗಣಿಕಾರ್ಮಿಕಳು ತನ್ನ ಅನಾರೋಗ್ಯದ ಚಿಕಿತ್ಸೆಗಾಗಿ ಹೆಚ್ಚಾಗಿ ಸರ್ಕಾರಿ ಆಸ್ಪತ್ರೆಗಳನ್ನು, ಸ್ವಯಂಕೃತ ಮನೆಮದ್ದು ಮತ್ತು ದೇವರು, ಮಾಟಮಂತ್ರಗಳ ಮೂಲಕ ಗುಣ ಹೊಂದಲು ಪ್ರಯತ್ನಿಸುತ್ತಾಳೆ. ಇದಕ್ಕೆ ಮುಖ್ಯವಾದ ಕಾರಣ ಮಹಿಳೆ ಅನಕ್ಷರಸ್ಥಳು, ಮತ್ತೊಬ್ಬರ ಆಶ್ರಯದಾತಳು ಹಾಗೂ

ತನ್ನ ದುಡಿಮೆಯನ್ನು ಸ್ವತಃ ತಾನೇ ಖರ್ಚು ಮಾಡುವ ಅಧಿಕಾರವನ್ನು ಪಡೆಯದವಳು ಎಂಬುದು ಕೋಷ್ಟಕದಿಂದ ತಿಳಿದುಬರುತ್ತದೆ. ಆದರೆ ಪುರುಷ ಮಾತ್ರ ತನ್ನ ದುಡಿಮೆಯನ್ನು ಖರ್ಚು ಮಾಡುವ ಅಧಿಕಾರದ ಜೊತೆಗೆ ಮಹಿಳೆಯ ದುಡಿಮೆ ಹಾಗೂ ವೆಚ್ಚದ ನಿರ್ಧಾರವನ್ನು ಮಾಡುವ ಹಕ್ಕನ್ನು ಹೊಂದಿರುವುದು ಅವನ ಪುರುಷಾಧಿಪತ್ಯದ ಪ್ರತೀಕವೆಂದೇ ಹೇಳಬಹುದು.

ಗಣಿಕಾರ್ಮಿಕರ ಆರೋಗ್ಯದ ಚರ್ಚೆಯನ್ನು ಅವರ ಕೂಲಿ-ದುಡಿಮೆ ಹಕ್ಕುದಾರಿಕೆ ಮತ್ತು ಆರೋಗ್ಯದ ಸೌಲಭ್ಯಗಳನ್ನು ಪರಿಶೀಲಿಸಿದಾಗ ಕಾರ್ಮಿಕರ ಆರೋಗ್ಯಕ್ಕೆ ಸಂಬಂಧಿಸಿದ ಸ್ಪಷ್ಟ ಚಿತ್ರಣವು ತಿಳಿದುಬರುತ್ತದೆ. ಆದರೆ ಕಾರ್ಮಿಕರು ದುಡಿಯುವ ಗಣಿ ಸಂಸ್ಥೆಗಳಲ್ಲಿ ಅವರ ಅನಾರೋಗ್ಯಕ್ಕೆ ಸಂಬಂಧಿಸಿದಂತೆ ಗಣಿಸಂಸ್ಥೆಯಲ್ಲಿ ಯಾವುದಾದರೂ ಸೌಲಭ್ಯಗಳಿವೆಯೇ ಅಥವಾ ಇಲ್ಲವೇ ಎಂಬುದನ್ನು ಕೇಳಿದಾಗ ದೊರೆತ ಉತ್ತರವು ಕೋಷ್ಟಕ ೪.೨೪ರಂತೆ ಕಂಡುಬರುತ್ತದೆ.

ಮುಂದಿನ ೪.೨೪ರ ಕೋಷ್ಟಕವು ಜಿಲ್ಲೆಯ ೧೦ ಗಣಿ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ತಲಾ ೨೦ ಕಾರ್ಮಿಕರಂತೆ ಒಟ್ಟು ೨೦೦ ಕಾರ್ಮಿಕರನ್ನು ತಮ್ಮ ತಮ್ಮ ಕಂಪನಿಗಳಲ್ಲಿ ದೊರೆಯುವ ವಿವಿಧ ಆರೋಗ್ಯದ ಸೌಲಭ್ಯಗಳ ವಿವರಗಳನ್ನು ತಿಳಿಸಿದ್ದಾರೆ. ಸಂಡೂರು ತಾಲೂಕಿನ ದೋಣಿಮಲೈನ ರಾಷ್ಟ್ರೀಯ ಗಣಿ ಅಭಿವೃದ್ಧಿ ನಿಗಮ, ವಿ.ಎಸ್.ಲಾಡ್ ಆಂಡ್ ಸನ್ಸ್, ಸ್ಮಯೋರ್ ಕಂಪನಿ ಹಾಗೂ ಹೊಸಪೇಟೆಯ ಬಲ್ಡೋಟ ಕಂಪನಿಯ ಕೆಲವು ಕಾರ್ಮಿಕರು ತಮ್ಮ ಹಾಗೂ ಕುಟುಂಬದ ಭದ್ರತೆಗಾಗಿ ವೈದ್ಯಕೀಯ ವಿಮಾ ಸೌಲಭ್ಯವು ಶೇಕಡ ೨೦ರಷ್ಟು ಕಾರ್ಮಿಕರಿಗೆ ದೊರೆಯುತ್ತಿದೆ. ಗಣಿಯಲ್ಲಿ ಕೆಲಸ ಮಾಡುವಾಗ ಆಕಸ್ಮಿಕವಾಗಿ ಸಂಭವಿಸುವ ಅಂಗಹೀನತೆ, ಸಾವು ನೋವುಗಳಿಗೆ ಪರಿಹಾರವಾಗಿ ದೊರೆಯುವ ಅಪಘಾತ ವಿಮೆಯು ಶೇಕಡ ೫೦ ರಷ್ಟು ಇದ್ದರೆ ಉಳಿದ ಶೇಕಡ ೫೦ ರಷ್ಟು ಕಾರ್ಮಿಕರು ಅಪಘಾತ ವಿಮೆಯಿಂದ ವಂಚಿತರಾಗಿದ್ದಾರೆ.

ಜಿಲ್ಲೆಯ ಅರ್ಧಕ್ಕಿಂತಲೂ ಹೆಚ್ಚು ಗಣಿಸಂಸ್ಥೆಗಳು ತಮ್ಮ ಅಧೀನ ಗಣಿಯಲ್ಲಿ ಸಂಭವಿಸುವ ಅಪಘಾತ ಪ್ರಕರಣಗಳಿಗೆ ಆಧಾರವಾಗಿ ವಿಮೆಯನ್ನು ಮಾಡಿಸಿದ್ದರೂ, ಇಲ್ಲಿಯವರೆಗೆ ಕೆಲವೇ ಗಣಿ ಸಂಸ್ಥೆಗಳು ಮಾತ್ರ ವಿಮೆಯ ಸದುಪಯೋಗವನ್ನು ಪಡೆದುಕೊಂಡಿವೆ. ಉಳಿದ ಗಣಿ ಸಂಸ್ಥೆಗಳು ಬೇರೆ, ಬೇರೆ ವಾಹನಗಳಿಂದ ಅಪಘಾತ ವಿಮೆಯ ಸೌಲಭ್ಯವನ್ನು ಪಡೆದುಕೊಂಡು ಕಾರ್ಮಿಕರನ್ನು ಸಂತೃಪ್ತಿಗೊಳಿಸಿದ್ದಾರೆ. ಇದಕ್ಕೆ ಕಾರಣವೇನೆಂದರೆ, ಗಣಿಯ ಪರವಾನಿಗೆಯನ್ನು ಪಡೆಯುವಾಗ ನಿರ್ದಿಷ್ಟಪಡಿಸಿದ ವಿಮಾ ಕಂಪನಿಗೆ ಯಾವುದೇ ತರಹದ ಅಡೆತಡೆಗಳಾದಲ್ಲಿ ಮುಂದೆ ಗಣಿ ನವೀಕರಣದ ಸಂದರ್ಭದಲ್ಲಿ ಸರ್ಕಾರ ಗಣಿಸಂಸ್ಥೆಯ ಪರವಾನಗಿಯನ್ನು ರದ್ದುಪಡಿಸುವ ಸಂಭವವಿರುತ್ತದೆಂಬ ಭಯ, ಆತಂಕ ಗಣಿ ಮಾಲೀಕ ಹಾಗೂ ವ್ಯವಸ್ಥಾಪಕರನ್ನು ಕಾಡುತ್ತಿದೆ. ಇದಕ್ಕಾಗಿ ಗಣಿ ಪ್ರದೇಶದಲ್ಲಿ

## ಕೋಷ್ಟಕ ೪.೨೪

## ಕಾರ್ಮಿಕರಿಗೆ ಗಣಿಸಂಸ್ಥೆಗಳಲ್ಲಿ ದೊರೆಯುವ ಸೌಲಭ್ಯಗಳು

| ಕ್ರ.ಸಂ. | ವಸತಿಯ ಸ್ವರೂಪ | ವೈದ್ಯಕೀಯ ವಿಮೆ | | | ಅಪಘಾತ ವಿಮೆ | | | ಹೆರಿಗೆ ಭತ್ಯ | | | ವೈದ್ಯಕೀಯ | | | ಆಸ್ಪತ್ರೆ | | | ವಾಹನ ಇತರೆ | | |
|---|---|---|---|---|---|---|---|---|---|---|---|---|---|---|---|---|---|---|---|
| ೧. | ಹಕ್ಕುದಾರಿಕೆ | ಇದೆ* | ಇಲ್ಲ* | ಒ* | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒ | ಇದೆ | ಇಲ್ಲ | ಒಟ್ಟು |
| ೨. | ಕಾರ್ಮಿಕರ ಸಂಖ್ಯೆ | ೪೦ | ೧೬೦ | ೨೦೦ | ೧೦೦ | ೧೦೦ | ೨೦೦ | ೨೦ | ೮೦ | ೧೦೦ | ೮೦ | ೧೨೦ | ೨೦೦ | ೪೦ | ೧೬೦ | ೨೦೦ | ೭೦ | ೧೩೦ | ೨೦೦ |
| ೩. | ಶೇಕಡವಾರು | ೨೦ | ೮೦ | ೧೦೦ | ೫೦ | ೫೦ | ೧೦೦ | ೧೦ | ೪೦ | ೫೦ | ೪೦ | ೬೦ | ೧೦೦ | ೨೦ | ೮೦ | ೧೦೦ | ೩೫ | ೬೫ | ೧೦೦ |

*ಕಂ = ಕಂಪನಿ, *ಸ್ವಂ = ಸ್ವಂತ, *ಬಾ = ಬಾಡಿಗೆ, *ಒ = ಒಟ್ಟು

ಮೂಲ : ಕ್ಷೇತ್ರ ಸಮೀಕ್ಷೆ ವರದಿ.

ಜರುಗುವ ಯಾವುದೇ ತರಹದ ಆಪತ್ತುಗಳಿಗೆ, ಗಣಿಯೇತರ ಮೂಲಗಳಿಂದ ವಿಮಾ ಸೌಲಭ್ಯವನ್ನು ಪಡೆದುಕೊಳ್ಳುವುದು ಸಹಜವಾಗಿದೆ. ಸರ್ಕಾರ ಜಾರಿಗೊಳಿಸಿದ ಹೆರಿಗೆ ಭತ್ಯೆ ಕಾಯ್ದೆಯು ಗಣಿಯಲ್ಲಿರುವ ಶೇಕಡ ೨೦ರಷ್ಟು ಮಹಿಳೆಗೆ ಮಾತ್ರ ಭಾರತ ಸರ್ಕಾರದ ಅಧಿಕೃತ ಗಣಿ ಸಂಸ್ಥೆಯಾದ ಎನ್.ಎಂ.ಡಿ.ಸಿ. ಕಂಪನಿಯು ಮಾತ್ರ ನೀಡುತ್ತದೆ. ಆದರೆ ಉಳಿದ ಕಂಪನಿಗಳು ಮಹಿಳೆಯ ಹೆರಿಗೆಯ ಸಂದರ್ಭಗಳಲ್ಲಿಯೂ ಯಾವುದೇ ರೀತಿಯ ಪರಿಹಾರವನ್ನು ವಿತರಿಸಿರುವುದು ಕಂಡುಬರುವುದಿಲ್ಲ.

ಇನ್ನೂ ಕೆಲವು ಗಣಿಸಂಸ್ಥೆಗಳಲ್ಲಿ ಕಾರ್ಮಿಕರ ಅನಾರೋಗ್ಯದ ತಪಾಸಣೆಗಾಗಿ ಪ್ರತಿ ತಿಂಗಳು ವಿ.ಎಸ್.ಎಲ್., ವೆಸ್ಕೋ ಇತ್ಯಾದಿಗಳು ರೂ. ೬೦ ರಿಂದ ೧೨೦ ರೂ.ಗಳವರೆಗೆ ಪ್ರತಿ ತಿಂಗಳು ಕಾರ್ಮಿಕರ ವೈದ್ಯಕೀಯ ಸೇವಾ ಸೌಲಭ್ಯವನ್ನು ಜಾರಿಗೊಳಿಸಿವೆ. ಆದರೆ ಉಳಿದ ಕಂಪನಿಗಳು ತಮ್ಮ ನೌಕರರಿಗೆ ಪ್ರೋತ್ಸಾಹ ರೂಪದಲ್ಲಿ ವೈದ್ಯಕೀಯ ಸೇವೆಗೆ ಕನಿಷ್ಟ ಪ್ರಮಾಣದಲ್ಲಿ ಹಣವನ್ನು ಪಾವತಿಸುತ್ತಿವೆ. ಇನ್ನೂ ಆಯಾ ಕಂಪನಿಗಳಲ್ಲಿ ದುಡಿಯುವ ಕಾರ್ಮಿಕರಿಗೆ ಆಸ್ಪತ್ರೆಯ ಸೌಲಭ್ಯವಿರುವುದು ಶೇಕಡ ೨೦ರಷ್ಟು ಮಾತ್ರ. ಅವುಗಳೆಂದರೆ ಎನ್.ಎಂ.ಡಿ.ಸಿ., ಸ್ಮಯೋರ್ ಹಾಗೂ ಕೆಲವು ಕಂಪನಿಗಳು ವೈದ್ಯಕೀಯ ಸೌಲಭ್ಯಗಳ ರೂಪದಲ್ಲಿ ಕೆಲವು ಖಾಸಗಿ ವೈದ್ಯರನ್ನು ನೇಮಿಸಿಕೊಂಡಿವೆ. ಕಾರ್ಮಿಕರು ಅನಾರೋಗ್ಯಕ್ಕೆ ಸಂಬಂಧಿಸಿದಂತೆ ವಾಹನ ನೀಡಿಕೆ, ಉದ್ಯೋಗ ನೀಡಿಕೆ, ಪಿಂಚಣಿ ಇತ್ಯಾದಿಗಳು ಶೇಕಡ ೩೫ ರಷ್ಟು ಮಾತ್ರ ಇದ್ದು, ಉಳಿದ ೬೫ರಷ್ಟು ಕಂಪನಿಗಳು ಕಾರ್ಮಿಕರನ್ನು ಗಂಭೀರವಾಗಿ ಪರಿಗಣಿಸಿಲ್ಲ.

ಇಂತಹ ವಿಷಮ ಪರಿಸ್ಥಿತಿಯಲ್ಲಿ ಕಾರ್ಮಿಕರನ್ನು ರಕ್ಷಿಸುವ ಇಲ್ಲವೆ ಅವರ ಜೀವನದ ಹಾಗೂ ಕುಟುಂಬದ ಭದ್ರತೆಗೆ ಪೂರಕವಾದ ವ್ಯವಸ್ಥೆಯನ್ನು ಗಣಿಸಂಸ್ಥೆಗಳಾಗಲೀ ಇಲ್ಲವೆ ಸರ್ಕಾರವಾಗಲೀ ಕಲ್ಪಿಸಬೇಕಾಗಿದೆ. ಈ ನಿಟ್ಟಿನಲ್ಲಿ ಜಿಲ್ಲೆಯಲ್ಲಿರುವ ಕಾರ್ಮಿಕ ಸಂಘಟನೆಗಳು ಪ್ರತಿಯೊಂದು ಗಣಿಸಂಸ್ಥೆಗಳಲ್ಲಿ ಸ್ಥಾಪನೆಯಾಗದೇ ಇರುವುದು ಒಂದು ಕಾರಣವಾದರೆ, ಗಣಿಯಲ್ಲಿರುವ ಕಾರ್ಮಿಕರು ಅನಕ್ಷರಸ್ಥರು, ಸಂಘಟನೆಯ ಸಾಮರ್ಥ್ಯವನ್ನು ಅರಿಯದವರು ಮತ್ತು ಬೇರೆ, ಬೇರೆ ರಾಜ್ಯ ಹಾಗೂ ಪ್ರದೇಶಗಳಿಂದ ವಲಸೆ ಪ್ರವೃತ್ತಿಯುಳ್ಳವರು ಆಗಿರುವುದರಿಂದ, ಬಹಳಷ್ಟು ಶೋಷಣೆಯನ್ನು ಗಣಿ ಕಾರ್ಮಿಕರು ಅನುಭವಿಸಬೇಕಾಗಿರುವುದು ದೊಡ್ಡ ದುರಂತವೆಂದೇ ಹೇಳಬಹುದು. ಇದಕ್ಕಾಗಿ ಸರ್ಕಾರಿ ಅಧಿಕಾರಿಗಳು, ಸ್ಥಳೀಯ ಸಂಘಸಂಸ್ಥೆಗಳು, ರಾಜಕೀಯ ಧುರೀಣರು ಹಾಗೂ ಸಾಮಾಜಿಕ ಕಾರ್ಯಕರ್ತರು ಪರಸ್ಪರ ಸಮಾಲೋಚನೆ ನಡೆಸಿ, ಕಾರ್ಮಿಕರ ರಕ್ಷಣೆಗೆ ಸೂಕ್ತಕ್ರಮ ಕೈಗೊಳ್ಳುವುದು ಅತ್ಯವಶ್ಯಕ. ಇಲ್ಲವಾದರೆ ಕಾರ್ಮಿಕ ಶಕ್ತಿ ಅನೇಕ ವಿಪತ್ತುಗಳಿಗೆ ಈಡಾಗಿ ಸಾಮಾಜಿಕ ಕ್ಷೋಭೆಯನ್ನು ಹುಟ್ಟುಹಾಕುವಲ್ಲಿ ಹಿಂದೆ ಬೀಳಲಾರದು ಎಂಬುದನ್ನು ಸಮಾಜದ ಪ್ರತಿಯೊಬ್ಬ ನಾಗರಿಕರು ಗಂಭೀರವಾಗಿ ಪರಿಗಣಿಸುವುದು ಸೂಕ್ತವೆಂದೇ ಹೇಳಬೇಕಾಗಿದೆ.

## ೪.೫. ವಲಸೆ

"ವಲಸೆ"ಯ ಪರಿಕಲ್ಪನೆಯು ಬಹುತೇಕ ಮಾನವನ ಹುಟ್ಟಿನೊಂದಿಗೆ ರಕ್ತಗತವಾಗಿದೆ. ಅದು ತಾಯಿಯ ಗರ್ಭದಿಂದಲೇ ಆರಂಭವಾಗಿ ತಂದೆ-ತಾಯಿ, ಅಜ್ಜ-ಅಜ್ಜಿ, ಅಕ್ಕ-ತಂಗಿ, ಅಣ್ಣ-ತಮ್ಮ, ಗಂಡ-ಹೆಂಡತಿ ಹಾಗೂ ಬಂಧು-ಬಳಗದ ಪರಸ್ಪರ ಸಂಪರ್ಕ ಮತ್ತು ಸಂಬಂಧಗಳಿಂದಾಗಿ, ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಪರಸ್ಪರ ಸಂಚಾರಿಸುವ ಹಾಗೂ ಸಂಬಂಧಗಳನ್ನು ಬೆಸೆಯುವ ಮೂಲಕ "ವಲಸೆ" ಎಂಬುದು ಬಹುತೇಕ ವಂಶವಾಹಿನಿಯ ಮತ್ತೊಂದೂ ಬಳುವಳಿಯಾಗಿಯೇ ಗುರುತಿಸಲ್ಪಡುತ್ತದೆ. ಹೀಗಾಗಿ ವಲಸೆಯ ಪ್ರಕ್ರಿಯೆ ವಿಸ್ತೃತಗೊಳ್ಳುತ್ತಾ ಹೋದಂತೆ, ವಿವಿಧ ಬದಲಾವಣೆಗಳನ್ನು ಮೈಗೂಡಿಸಿಕೊಳ್ಳುತ್ತಾ ಮಾನವ ಸಂಬಂಧಗಳನ್ನು ವೃದ್ಧಿಗೊಳಿಸುವ ಒಂದು ಬಹುಮುಖ್ಯ ವಾಹಕವೆಂದೇ ಕರೆಯಬಹುದು. ಈ ಹಿನ್ನೆಲೆಯಲ್ಲಿ ವಲಸೆ ಒಂದು ಸಾಮಾಜಿಕ ಪ್ರಕ್ರಿಯೆ. ಅದು ಮಾನವನ ಅಸ್ಥಿತ್ವ, ಬೆಳವಣಿಗೆ, ಸಮೃದ್ಧಿ ಹಾಗೂ ನಾಗರೀಕತೆಯ ನಿರ್ಧಾರಕವೂ ಹೌದು. ಹೀಗಾಗಿ ವಲಸೆಯು ಮಾನವನ ಹುಟ್ಟಿನೊಂದಿಗೆ ಸಮ್ಮಿಲನಗೊಂಡಿರುತ್ತದೆ ಎಂದೂ ಹೇಳಬಹುದು. ಹೇಗೆಂದರೆ ಆಯಾ ಕಾಲಘಟ್ಟಗಳಿಗನುಗುಣವಾಗಿ ಮಾನವನು ಕಾಲ-ಕಾಲಕ್ಕೆ, ಸಮಯ-ಸಂದರ್ಭ ಹಾಗೂ ಸನ್ನಿವೇಶಕ್ಕೆ ತಕ್ಕಂತೆ ವಲಸೆಯ ಪ್ರವೃತ್ತಿಯನ್ನು ರಕ್ಷಣೆ, ಪೋಷಣೆ, ಸಮೃದ್ಧಿ ಶೋಷಣೆ ಮತ್ತು ಅಧಿಪತ್ಯಗಳಿಗನುಗುಣವಾಗಿ ಅದನ್ನು ಪ್ರಮುಖ ಅಸ್ತ್ರವಾಗಿ ಬಳಸಿಕೊಂಡಿರುವದನ್ನು ಇತಿಹಾಸದಿಂದ ತಿಳಿಯಬಹುದು.

ಪ್ರಾಚೀನ ಕಾಲದಿಂದಲೂ ಆದಿಮಾನವನು ತನ್ನ ಜೀವನಕ್ಕೆ ಅವಶ್ಯಕವಾದ ಆಹಾರ, ನೀರು, ಗಾಳಿ, ವಾತಾವರಣ ಹಾಗೂ ಸಂಗಾತಿಗಳ ಸಮಾಗಮದ ಸನ್ನಿವೇಶಗಳಿಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚಾರ ಕೈಗೊಂಡಿದ್ದಾನೆ. ಹಾಗೆಯೇ ತಾನು ವಾಸಿಸುತ್ತಿದ್ದ ಪ್ರದೇಶದಲ್ಲಿ ಕಂಡುಬರುತ್ತಿದ್ದ ಭೂಕಂಪ, ಬರಗಾಲ, ನೆರೆಹಾವಳಿ, ಹಿಂಸೆ, ಭಯ ಆತಂಕಗಳಿಂದ ಮುಕ್ತಿ ಹೊಂದಲು, ತನ್ನ ಮೂಲನೆಲೆಯಿಂದ ಸಂರಕ್ಷಿತ ಸ್ಥಳಕ್ಕಾಗಿ ನಿರಂತರ ಆವಿಷ್ಕಾರದಲ್ಲಿ ತೊಡಗಿದ್ದಾನೆ. ಈ ಹಿನ್ನೆಲೆಯಲ್ಲಿ ಕೆಲವೊಮ್ಮೆ ಮಾನವನು ತನ್ನಲ್ಲಿರುವ ಸಾಮರ್ಥ್ಯ ಇಲ್ಲವೇ ಬಲಪ್ರದರ್ಶನಕ್ಕಾಗಿ ಅಥವಾ ಹಕ್ಕುದಾರಿಕೆಯ ಪ್ರತಿಷ್ಠಾಪನೆಗಾಗಿ ತನ್ನ ಕುಟುಂಬ, ಸಮಾಜ, ಸಮುದಾಯಗಳ ಅವಶ್ಯಕತೆಗಾಗಿ ಇಲ್ಲವೇ ಅವುಗಳ ಸಂರಕ್ಷಣೆಗಾಗಿ ವಿವಿಧೆಡೆ ವಲಸೆ ಹೋಗುವುದು ಅವನ ಹವ್ಯಾಸವಾಗಿತ್ತು. ಇಂತಹ ಸಂದಿಗ್ಧ ಕಾಲಘಟ್ಟದಲ್ಲಿ ಪರಸ್ಪರರೊಂದಿಗೆ ಮಾನವನ್ನಲ್ಲಾದ ಬದಲಾವಣೆಗಳಿಂದಾಗಿ ಪರಸ್ಪರ ಸಂಪರ್ಕ, ಸಂಬಂಧ, ಪ್ರೀತಿ, ವಿಶ್ವಾಸ, ಅನನ್ಯತೆ ಮತ್ತು ಸಹಕಾರಗಳಿಗೆ ಪ್ರೇರಣೆ ನೀಡಿದೆ. ಒಂದು ರೀತಿಯಲ್ಲಿ ಮಾನವ ಸಂತತಿಯ ಸಮೃದ್ಧಿಗೆ ಭದ್ರವಾದ ಅಡಿಪಾಯವನ್ನು ವಲಸೆಯು

ಒದಗಿಸಿಕೊಟ್ಟಿತ್ತು. ಹೇಗೆಂದರೆ ಬೇರೆ, ಬೇರೆ ಪ್ರದೇಶಗಳಲ್ಲಿ ವಾಸವಾಗಿದ್ದ ಮಾನವನ ಮಾನಸಿಕ, ದೈಹಿಕ ಮತ್ತು ಬೌದ್ಧಿಕ ಬೆಳವಣಿಗೆಯು ಆಯಾ ಪ್ರದೇಶದಲ್ಲಿ ಲಭ್ಯವಿದ್ದ ಸಂಪನ್ಮೂಲಗಳ ಸದುಪಯೋಗಕ್ಕಾಗಿ ಉತ್ಪಾದನಾ ಪರಿಕರಗಳು ಅಥವಾ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಉತ್ಪಾದನಾ ಸಂಬಂಧಗಳನ್ನು ಹುಡುಕುತ್ತಾ ವಲಸೆಯ ಗುಣವನ್ನು ಮೈಗೂಡಿಸಿಕೊಂಡನು. ಅಂದಿನಿಂದಲೇ ಮಾನವನ ವಲಸೆಯ ಪ್ರವೃತ್ತಿಯು ಇಂದು ಜಾಗತಿಕ ಮಟ್ಟದಲ್ಲಿ ಬಹಳಷ್ಟು ಚರ್ಚೆಗೆ ಅವಕಾಶ ಮಾಡಿಕೊಟ್ಟಿದೆ. ವಲಸೆಯು ಆಯಾ ವ್ಯಕ್ತಿ, ಕುಟುಂಬ, ಸಮುದಾಯ, ರಾಜ್ಯ, ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟಗಳಲ್ಲಿ ಹೆಚ್ಚು, ಹೆಚ್ಚು ಸಂಕೀರ್ಣಗೊಂಡು ಕೆಲವೊಮ್ಮೆ ವರವಾಗಿ, ಕೆಲವೊಮ್ಮೆ ಶಾಪವಾಗಿ ಕಂಡುಬರುತ್ತಿದೆ.

ಇಂದಿನ ಜಾಗತೀಕರಣ, ಖಾಸಗೀಕರಣ, ಹಾಗೂ ಉದಾರೀಕರಣದ ಪರಿಣಾಮವಾಗಿ ಜನಸಮುದಾಯ ಗಳ ವಲಸೆಯು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ, ರಾಜ್ಯಕ್ಕೆ, ರಾಷ್ಟ್ರಕ್ಕೆ ಹಾಗೂ ಅಂತರಾಷ್ಟ್ರೀಯ ಮಟ್ಟಗಳಲ್ಲಿ ಜನರ ವಲಸೆಯು ಅತ್ಯಂತ ಸರಳವೆಂಬಂತೆ ಕಂಡುಬರುತ್ತಿದೆ. ಇಂತಹ ಪ್ರವೃತ್ತಿಯಿಂದ ಆಯಾ ಸಮಯ, ಸಂದರ್ಭ ಮತ್ತು ಸನ್ನಿವೇಶಗಳಲ್ಲಿ ಕಂಡುಬರುವ ವಿವಿಧ ಆಕರ್ಷಣೆ, ತಂತ್ರಜ್ಞಾನ, ಕೌಶಲ್ಯತೆಗಳು ಬೇರೆ, ಬೇರೆ ಒತ್ತಡಗಳಿಗೆ ಕಾರಣವಾಗಿ, ಬೇರೆ, ಬೇರೆ ಆಕಾರಗಳನ್ನು ಪಡೆದುಕೊಳ್ಳುತ್ತಿವೆ. ಇಂದಿನ ಪ್ರಸ್ತುತ ಸನ್ನಿವೇಶದಲ್ಲಿ ಪ್ರತಿಯೊಂದು ದೇಶವು ತನ್ನಲ್ಲಿರುವ ಮಾನವ ಸಂಪನ್ಮೂಲದ ವಲಸೆಗೆ ಪ್ರೋತ್ಸಾಹಿಸುವುದು, ತಮ್ಮ ಮೂಲಭೂತ ಹಕ್ಕು ಮತ್ತು ಕರ್ತವ್ಯವೆಂಬಂತೆ ಪರಿಭಾವಿಸಲಾಗುತ್ತಿದೆ. ಇಂತಹ ನಡವಳಿಕೆಯು ಆಯಾ ವ್ಯಕ್ತಿ, ಕುಟುಂಬ, ಸಮಾಜ, ಸಮುದಾಯ ಮತ್ತು ರಾಷ್ಟ್ರಗಳ ಅಭಿವೃದ್ಧಿಗೆ ಪ್ರೇರಕವಾದಂತೆ ಕೆಲವು ಸಂದರ್ಭಗಳಲ್ಲಿ ಮಾರಕವಾಗಿ ಕಂಡುಬರುತ್ತದೆ. ಉದಾಹರಣೆಗೆ ಭಾರತದ ಸಂದರ್ಭದಲ್ಲಿ ಜನಸಮುದಾಯಗಳಲ್ಲಿ ಕಂಡುಬರುತ್ತಿರುವ ರಾಜ್ಯ ಹಾಗೂ ರಾಷ್ಟ್ರಮಟ್ಟದ ವಲಸೆಯ ಚಟುವಟಿಕೆಯು ತುಂಬಾ ಗಂಭೀರವಾದ ಚರ್ಚೆಯ ವಿಷಯವಾಗಿದೆ. ಅದು ಕೊಲೆ, ಸುಲಿಗೆ, ಅತ್ಯಾಚಾರ, ದೌರ್ಜನ್ಯಗಳಂತಹ ಸನ್ನಿವೇಶಕ್ಕೆ ಕಾರಣವಾಗಿ, ಅದರ ನಿಯಂತ್ರಣಕ್ಕೆ ಕಾಯ್ದೆ, ಕಾನೂನುಗಳನ್ನು ರೂಪಿಸುವ ಹಂತಕ್ಕೆ ಬಂದು ನಿಂತಿದೆ. ಭಾರತದ ನೆರೆ ರಾಜ್ಯಗಳಾದ ಮಹಾರಾಷ್ಟ್ರ, ಪಶ್ಚಿಮ ಬಂಗಾಳ, ಗೋವಾ, ಗುಜರಾತ್, ಕರ್ನಾಟಕ, ಅಸ್ಸಾಂ ಇತ್ಯಾದಿ ರಾಜ್ಯಗಳಿಗೆ ಬೇರೆ, ಬೇರೆ ಗಡಿಪ್ರದೇಶಗಳಿಂದ ವಲಸೆ ಬರುತ್ತಿರುವವರನ್ನು ತಡೆಯಲು ಶಾಸನ ಸಭೆಗಳಲ್ಲಿ ವಿಶೇಷ ಕಾಯ್ದೆಗಳನ್ನು ಜಾರಿಗೊಳಿಸುವಂತಹ ಮಟ್ಟಕ್ಕೆ ವಲಸೆಯ ಪ್ರಮಾಣವು ಕಾರಣವಾಗಿದೆ. ಜೊತೆಗೆ ವಲಸಿಗರಿಗಾಗಿ ಪ್ರತ್ಯೇಕ ಪರಿಹಾರ ಕ್ರಮಗಳನ್ನು ಕೈಗೊಳ್ಳಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಿದೆ. ಹಾಗೆಯೇ ಅಂತರಾಷ್ಟ್ರೀಯ ಮಟ್ಟಗಳಲ್ಲಿ ಕಂಡುಬರುವ, ಜನರ

ವಲಸೆಯ ಪ್ರವೃತ್ತಿಯು ನೆರೆಯ ದೇಶಗಳೊಂದಿಗೆ ಪರಸ್ಪರ ಯುದ್ಧ, ಆಕ್ರಮಣ, ದ್ವೇಷ, ಅಸೂಯೆಗಳನ್ನು ಸೃಷ್ಟಿಸಿ ಆಂತರಿಕ ಹಾಗೂ ಬಾಹ್ಯತ್ಮಕವಾಗಿ ತ್ವೇಷಮಯ ವಾತಾವರಣವನ್ನು ನಿರ್ಮಾಣಮಾಡಿದೆ. ಅದನ್ನು ನೆರೆಯ ಬಾಂಗ್ಲಾದೇಶ, ಪಾಕಿಸ್ತಾನ, ಚೀನಾ, ಶ್ರೀಲಂಕಾ ಮತ್ತು ನೇಪಾಳ ದೇಶಗಳಿಂದ ವಲಸೆ ಬರುವ ಜನರ ಪ್ರಮಾಣ ಹೆಚ್ಚಾದಂತೆ ಭಾರತದಲ್ಲಿ ವಸತಿ ಸಮಸ್ಯೆ, ಆಹಾರ ಸಮಸ್ಯೆ, ನಿರುದ್ಯೋಗ ಸಮಸ್ಯೆ, ಸಾರಿಗೆ ಸಮಸ್ಯೆ, ಕುಡಿಯುವ ನೀರಿನ ಸಮಸ್ಯೆ, ಭಯೋತ್ಪಾದನೆ, ಆಂತರಿಕ ಗಲಭೆಗಳು ದಿನದಿಂದ ದಿನಕ್ಕೆ ನಾನಾ ರೂಪಗಳನ್ನು ಪಡೆದುಕೊಳ್ಳುತ್ತಾ ಸಮಾಜದಲ್ಲಿ ಆಂತರಿಕ ಕ್ಷೋಭೆಯನ್ನು ಹುಟ್ಟುಹಾಕುತ್ತಿರುವ ಸನ್ನಿವೇಶವು ಜಾಗತಿಕ ಮಟ್ಟದಲ್ಲಿ ಚರ್ಚೆಯಾಗುತ್ತಿದೆ. ಇತ್ತೀಚಿನ ಕೆಲವು ವರ್ಷಗಳಿಂದ ಕಂಡುಬರುತ್ತಿರುವ ಬಾಂಗ್ಲಾದೇಶ ಹಾಗೂ ಪಾಕಿಸ್ತಾನದ ವಲಸಿಗರ ಪ್ರಮಾಣ, ಬಿಹಾರ, ಅಸ್ಸಾಂ, ಪಶ್ಚಿಮ ಬಂಗಾಳ, ಕರ್ನಾಟಕದ ಕಾವೇರಿ ನದಿ ನೀರು ಹಂಚಿಕೆಯಲ್ಲಿ ಭುಗಿಲೇಳುವ ವಲಸಿಗರ ಮೇಲಿನ ದೌರ್ಜನ್ಯ, ದುಡಿಯುವ ಜನರ ಕಗ್ಗೊಲೆ ಇತ್ಯಾದಿ ಪ್ರಕರಣಗಳು ವಲಸೆಯಿಂದಾಗುವ ಕರಾಳ ಛಾಯೆಯನ್ನು ಪ್ರತಿನಿಧಿಸುತ್ತವೆ.

ಜಾಗತೀಕರಣದಿಂದ ಉದ್ಭವಿಸಿದ ಖಾಸಗೀಕರಣ `ಮತ್ತು ಉದಾರೀಕರಣದ ನೀತಿಗಳು ಪ್ರಸ್ತುತ ಸನ್ನಿವೇಶ ಹಾಗೂ ಸಂದರ್ಭಗಳಲ್ಲಿ ಜನರ ವಲಸೆಯ ಪ್ರವೃತ್ತಿಗೆ ಮತ್ತಷ್ಟು ಆಧಾರಗಳನ್ನು ಒದಗಿಸಿಕೊಡುತ್ತದೆ. ಒಂದು ದೃಷ್ಟಿಯಲ್ಲಿ ಭಾರತ ಅತ್ಯಧಿಕ ಮಾನವ ಸಂಪನ್ಮೂಲದ ತೀವ್ರತೆಯನ್ನು ಕಡಿಮೆಗೊಳಿಸಲು ಮತ್ತು ನಿರುದ್ಯೋಗ, ಆಹಾರ ಸಮಸ್ಯೆ, ವಸತಿ ಸಮಸ್ಯೆ, ಸಾರಿಗೆ ಸಮಸ್ಯೆ ಇತ್ಯಾದಿಗಳನ್ನು ಹೋಗಲಾಡಿಸಲು ತನ್ನಲ್ಲಿರುವ ಹೆಚ್ಚುವರಿ ಮಾನವ ಸಂಪನ್ಮೂಲವನ್ನು ಬೇರೆ, ಬೇರೆ ದೇಶಗಳಿಗೆ ಉದ್ಯೋಗವನ್ನು ಹುಡುಕಿಕೊಂಡು ಹೋಗಲು ಪ್ರೇರೇಪಿಸುವ ಇಲ್ಲವೇ ಪ್ರೋತ್ಸಾಹಿಸುವುದರಿಂದ ಆಯಾ ದೇಶಗಳಲ್ಲಿ ಕಾಡುತ್ತಿರುವ ಸಮಸ್ಯೆಗಳ ಪ್ರಮಾಣವನ್ನು ಸರಳೀಕರಿಸಬಹುದು ಎಂಬುದಾಗಿ ಜಾಗತೀಕರಣದಿಂದಾಗುವ ಪ್ರಯೋಜನವೆಂದೂ ಕೆಲವು ಮುಂದುವರೆದ ರಾಷ್ಟ್ರಗಳು ವಲಸೆಯ ಪ್ರವೃತ್ತಿಯನ್ನು ಬಹಳಷ್ಟು ವೈಭವೀಕರಿಸುತ್ತಿವೆ. ಇಂತಹ ಬಾಹ್ಯ ತಂತ್ರಕ್ಕೆ ಬಲಿಯಾದ ಎಲ್ಲಾ ರಾಷ್ಟ್ರಗಳು ತಮ್ಮ ದೇಶದ ಆಂತರಿಕ ವಿಷಯಗಳಲ್ಲಿ ವಿದೇಶಿ ಮೂಲಭೂತ ಶಕ್ತಿಗಳಿಂದ ಅನೇಕ ಗಂಡಾಂತರಗಳನ್ನು ಎದುರಿಸ ಬೇಕಾಗಿರುವುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಏಕೆಂದರೆ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿರುವ ಪ್ರತಿಭಾನ್ವಿತ ವಿದ್ವಾಂಸರು, ವಿಜ್ಞಾನಿಗಳು, ಇಂಜಿನಿಯರರು, ಕುಶಲಕಲೆಗಾರರು, ಶಿಕ್ಷಿತರು ಇತ್ಯಾದಿ ಸಮೂಹಗಳು ಉದ್ಯೋಗವನ್ನು ಹುಡುಕಿಕೊಂಡು, ಬೇರೆ ಬೇರೆ ದೇಶಗಳಿಗೆ ವಲಸೆ ಹೋಗಲು ಪ್ರೇರೇಪಿಸಿದರೆ, ಮುಂದೊಂದು ದಿನ ಆ ಎಲ್ಲಾ ದೇಶಗಳು ಭೀಕರ ಸ್ವರೂಪದಲ್ಲಿ ಪ್ರತಿಭಾ ಪಲಾಯನದ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಜೊತೆಗೆ

ಆಯಾ ದೇಶಗಳಲ್ಲಿ ಯಾವುದೇ ಉತ್ಪಾದನಾ ಚಟುವಟಿಕೆಗಳು ಕಂಡುಬಾರದೆ, ನಿರ್ಬೀಜೀಕರಣಕ್ಕೊಳಗಾಗಿ, ಇಡೀ ಉತ್ಪಾದನಾ ವ್ಯವಸ್ಥೆ ಬುಡಮೇಲುಗೊಳ್ಳಲು ಕಾರಣವಾಗುತ್ತದೆ. ಮತ್ತು ವಿಜ್ಞಾನ, ತಂತ್ರಜ್ಞಾನ, ಉತ್ಪಾದನೆ ಹಾಗೂ ವಿತರಣೆಗಳಿಗಾಗಿ ಶ್ರೀಮಂತ ರಾಷ್ಟ್ರಗಳ ಮುಂದೆ ಭಿಕ್ಷೆ ಬೇಡುವ ಇಲ್ಲವೆ ಆರ್ಥಿಕತೆಯ ಅಧಃಪತನದಿಂದಾಗಿ ಉತ್ಪಾದನೆಯ ಸಮಸ್ಯೆ, ನಿರುದ್ಯೋಗ, ಬಡತನ ಇತ್ಯಾದಿಗಳು ಬೃಹದಾಕಾರವಾಗಿ ಬೆಳೆದು ಇಡೀ ಆರ್ಥಿಕ ವ್ಯವಸ್ಥೆಯು ಅಸ್ತವ್ಯಸ್ತಗೊಳ್ಳುತ್ತದೆ. ಇಂತಹ ಕಾರ್ಯ ತಂತ್ರಗಳಿಂದ ಪರಕೀಯರ ದಾಸ್ಯಕ್ಕೊಳಗಾಗಬೇಕಾದ ಸಂದರ್ಭವು ದೂರವಿರಲಾರದೆಂಬ, ಆತಂಕದೊಂದಿಗೆ, ಜಾಗತೀಕರಣದ ತಂತ್ರಗಳನ್ನು ನಾವುಗಳು ಪ್ರತಿರೋಧಿಸಬೇಕಾಗಿದೆ. ಇಂತಹ ಸನ್ನಿವೇಶವು ಕೇವಲ ಭಾರತಕ್ಕೆ ಸೀಮಿತವಾಗಿರದೇ ಇಡೀ ವಿಶ್ವದ ಮುಕ್ಕಾಲು ಪಾಲು ರಾಷ್ಟ್ರಗಳ ಪಾಡಗಿದೆ. ಈ ನಿಟ್ಟಿನಲ್ಲಿ ಜಾಗತಿಕ ಮಟ್ಟದಲ್ಲಿ ಚರ್ಚೆ, ಗೋಷ್ಠಿ, ಸಂವಾದ ಹಾಗೂ ಕಾರ್ಯಾಗಾರಗಳು ಚುರುಕುಗೊಂಡಿವೆ. ಪ್ರತಿಯೊಂದು ದೇಶವು ತಮ್ಮ ತಮ್ಮ ಸಾರ್ವಭೌಮಾಧಿಕಾರವನ್ನು ರಕ್ಷಿಸಿಕೊಳ್ಳಬೇಕಾದ ಕಾಲಘಟ್ಟದಲ್ಲಿ ರುವುದರಿಂದ, ರಾಷ್ಟ್ರ, ರಾಜ್ಯ, ಜಿಲ್ಲೆ, ತಾಲೂಕು ಹಾಗೂ ಪ್ರದೇಶವಾರು ಜನರ, ಉತ್ಪಾದನಾ ತಂತ್ರಗಳ ವಲಸೆಯ ಪ್ರಕ್ರಿಯೆಯನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಗಣಿಗಾರಿಕೆಯಲ್ಲಿ ದುಡಿಯುತ್ತಿರುವ ವಲಸೆ ಕಾರ್ಮಿಕರ ಪ್ರಮಾಣವೆಷ್ಟು? ವಲಸೆಗೆ ಕಾರಣಗಳೇನು? ವಲಸೆಯಿಂದಾಗುವ ಪರಿಣಾಮಗಳಾವುವು? ವಲಸೆಗೆ ಪರಿಹಾರ ಸಾಧ್ಯವೇ? ಎಂಬೀ ಅಂಶಗಳನ್ನು ಕೂಲಂಕಶವಾಗಿ ಪರಿಶೀಲಿಸುವುದು ಅಗತ್ಯ.

ಆರಂಭದಲ್ಲಿ ವಲಸೆ ಎಂದರೆ ಸಂಚಾರ, ಗುಳೇ ಹೋಗು, ಒಕ್ಕಲು ಹೋಗು, ವರ್ಗಾವಣೆ, ಪಲಾಯನ ಅಥವಾ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶವನ್ನು ಬದಲಾಯಿಸುವುದು ಇತ್ಯಾದಿಗಳಾಗಿ ಅರ್ಥೈಸಬಹುದು. ವಲಸೆಯೆಂದರೆ ಒಂದು ಭೌಗೋಳಿಕ ಗಡಿಯಿಂದ ಮತ್ತೊಂದು ಭೌಗೋಳಿಕ ಗಡಿ ಪ್ರದೇಶಕ್ಕೆ ಜನರು ತಮ್ಮ ತಮ್ಮ ಮೂಲಸ್ಥಳವನ್ನು ಶಾಶ್ವತವಾಗಿ ಇಲ್ಲವೇ ತಾತ್ಕಾಲಿಕವಾಗಿ ಬದಲಾಯಿಸುವುದು ಎಂದರ್ಥವಾಗುತ್ತದೆ. ವಲಸೆಯು ಒಂದು ವಿಧದಲ್ಲಿ ಆಯಾ ಪ್ರಾದೇಶಿಕ ಹಾಗೂ ಭೌಗೋಳಿಕ ಚಲನೆಯಾಗಿದ್ದು, ಅದು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಚಲಿಸಲು ಜನರು ತಮ್ಮ ಮೂಲಸ್ಥಳವನ್ನು ತೊರೆದು. ಹೊಸ ಪ್ರದೇಶಕ್ಕೆ ಹೊಂದಿಕೊಳ್ಳುವುದು ಅಥವಾ ಪಲಾಯನಗೊಳ್ಳುವುದು ಅಥವಾ ನಿವಾಸವನ್ನು ಬದಲಾಯಿಸುವುದು ಎಂದೂ ವ್ಯಾಖ್ಯಾನಿಸ ಬಹುದಾಗಿದೆ.

ಬಳ್ಳಾರಿ ಜಿಲ್ಲೆಯು ಕರ್ನಾಟಕದ ಗಡಿಜಿಲ್ಲೆಯಾಗಿದ್ದು. ಇದು ಆಂಧ್ರಪ್ರದೇಶದ ಅನಂತಪುರ ಹಾಗೂ ಗುಂಟೂರು ಜಿಲ್ಲೆಗಳಿಗೆ ಹೊಂದಿಕೊಂಡಂತೆ ಹರಿದು ಹಂಚಿಹೋಗಿರುವುದರಿಂದ ಈ ಭಾಗದ

ಜನರಲ್ಲಿ ಪರಸ್ಪರ ಭ್ರಾತೃತ್ವ ಹಾಗೂ ಮಾತೃತ್ವದ ಸಂಬಂಧಗಳು ಬಹಳಷ್ಟು ಹಾಸುಹೊಕ್ಕಾಗಿವೆ. ಇದರಿಂದಾಗಿ ಭಾಷೆ, ಉಡುಪು, ಆಹಾರ, ಮತ್ತು ಪರಿಸರಗಳಲ್ಲಿ ವ್ಯತ್ಯಾಸಗಳಿರುವುದ್ದರಿಂದ ಗಡಿ ಪ್ರದೇಶಗಳಲ್ಲಿ ವಾಸಿಸುವ ಉಭಯತರ ವಲಸೆಯು ಸಾಮಾನ್ಯವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿರುವ ಕಬ್ಬಿಣ ಮತ್ತು ಮ್ಯಾಂಗನೀಜ್ ಅದಿರುಗಳು ಉತ್ಪಾದನೆಯಲ್ಲಿ ತೊಡಗಿರುವ ಶೇಕಡ ೭೦ರಷ್ಟು ಕಾರ್ಮಿಕರು ವಲಸೆ ಬಂದವರಾಗಿದ್ದಾರೆ, ಅಂತಹ ವಲಸಿಗರಲ್ಲಿ ಬಹಳಷ್ಟು ಜನರು ಸಮಾಜಗಳಲ್ಲಿ ಅತ್ಯಂತ ಹಿಂದುಳಿದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದವರಾಗಿದ್ದಾರೆ. ಅವರಿಗೆ ತಮ್ಮದೇ ಆದ ಸ್ವಂತ ಸ್ಥಿರ ಮತ್ತು ಚರ ರೂಪಗಳಲ್ಲಿ ಆಸ್ತಿಗಳಿಲ್ಲದವರು. ಕೇವಲ ತಮ್ಮ ದೈನಂದಿನ ದೈಹಿಕ ದುಡಿಮೆಯ ಮೂಲಕ ಬದುಕುವರು. ಇವರಿಗೆ ತಮ್ಮ ಸ್ವಂತ ನೆಲದಲ್ಲೂ ಅಥವಾ ವಲಸೆಬಂದ ಪ್ರದೇಶಗಳಲ್ಲೂ ಮೊಕ್ಕಂ ಹೂಡಲು ಯಾವುದೇ ತರಹದ ಸ್ಥಿರಾಸ್ಥಿಗಳಿಲ್ಲದ ಕಾರಣ ಸ್ವಂತ ಮನೆಯಾಗಲೀ, ಮಕ್ಕಳ ವಿದ್ಯಾಭ್ಯಾಸವಾಗಲೀ, ಮತದಾನದ ಹಕ್ಕಾಗಲೀ ಇಲ್ಲದ್ದರಿಂದ ಪರಸ್ಪರ ಆಯಾ ಪ್ರದೇಶಗಳಲ್ಲಿ ವಲಸಿಗರನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ ಅಥವಾ ವಲಸಿಗರು ಅವಹೇಳನೆಗೆ, ಅಥವಾ ನಿರ್ಲಕ್ಷ್ಯತೆಗೆ ಒಳಗಾಗುತ್ತಾರೆ. ಇಂತಹ ವಲಸೆ ಕಾರ್ಮಿಕರ ಪ್ರಮಾಣವು ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಸ್ವರೂಪ ಕೋಷ್ಟಕ ೪.೨೫ರಂತಿದೆ.

**ಕೋಷ್ಟಕ ೪.೨೫ : ಕಾರ್ಮಿಕರ ವಲಸೆಯ ಪ್ರಮಾಣ**

| ಕ್ರ.ಸಂ. | ವಲಸೆಯ ಸ್ವರೂಪ | ಕಾರ್ಮಿಕರ ಸಂಖ್ಯೆ | ಶೇಕಡಾವಾರು |
|---|---|---|---|
| ೧. | ಆಂಧ್ರ ಗಡಿ ಪ್ರದೇಶದಿಂದ ವಲಸೆ ಬಂದವರು | ೧೩೦ | ೬೫ |
| ೨. | ನೆರೆಹೊರೆಯ ತಾಲೂಕುಗಳಿಂದ ವಲಸೆ ಬಂದವರು | ೪೫ | ೨೨.೫ |
| ೩. | ಸ್ಥಳೀಯರು | ೨೫ | ೧೨.೫ |
| ೪. | ಒಟ್ಟು ಕಾ.ಸಂಖ್ಯೆ | ೨೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಕೋಷ್ಟಕ ೪.೨೫ರಲ್ಲಿ ಒಟ್ಟು ಶೇಕಡ ೮೭.೫ರಷ್ಟು ಕಾರ್ಮಿಕರು ಬೇರೆ, ಬೇರೆ ಭಾಗಗಳಿಂದ ವಲಸೆ ಬಂದವರಾಗಿದ್ದು, ಅವರಲ್ಲಿ ಶೇಕಡ ೬೫ರಷ್ಟು ಕಾರ್ಮಿಕರು ಅಂದ್ರ ಹಾಗೂ ಬಳ್ಳಾರಿ

ಜಿಲ್ಲೆಯ ಗಡಿಭಾಗಗಳಾದ ಆಲೂರು, ಉಳೇಬೀಡು, ಅನಂತರಪುರ, ಅಂಚಿನಾಳು ಮತ್ತು ನೆಣಕಿ ಇತ್ಯಾದಿ ಪ್ರದೇಶಗಳಿಂದ ತಮ್ಮ ಕುಟುಂಬ ಸಮೇತ ಉದ್ಯೋಗವನ್ನು ಹುಡುಕಿಕೊಂಡು ಜಿಲ್ಲೆಗೆ ಬಂದು ನೆಲೆಸಿದವರಾಗಿದ್ದಾರೆ. ಶೇಕಡ ೨೨.೫ ರಷ್ಟು ಕಾರ್ಮಿಕರು ಬಳ್ಳಾರಿ ಜಿಲ್ಲೆ ಹಾಗೂ ವಿವಿಧ ನೆರೆಹೊರೆ ಜಿಲ್ಲೆ ಹಾಗೂ ತಾಲೂಕುಗಳಲ್ಲಿರುವವರು. ಅವರಲ್ಲಿ ಕೆಲವರು ರಾಯಚೂರು, ಬೆಳಗಾಂ, ಗದಗ ಹಾಗೂ ಕೊಪ್ಪಳ ಜಿಲ್ಲೆಗಳಿಗೆ ಸೇರಿದ್ದರೆ, ಇನ್ನುಳಿದವರು ಬಳ್ಳಾರಿ, ಹೊಸಪೇಟೆ, ಸಂಡೂರು ತಾಲೂಕುಗಳಲ್ಲಿರುವ ಅತ್ಯಂತ ಹಿಂದುಳಿದ ಪ್ರದೇಶಗಳಿಂದ ಶೇಕಡ ೧೨.೫ ರಷ್ಟು ಕಾರ್ಮಿಕರು ಗಣಿ ಉದ್ಯೋಗವನ್ನು ಹುಡುಕಿಕೊಂಡು ವಲಸೆ ಬಂದವರಾಗಿದ್ದಾರೆ. ಈ ಮೇಲಿನ ಪ್ರತಿಯೊಬ್ಬ ಕಾರ್ಮಿಕರ ವಲಸೆಯ ಪ್ರವೃತ್ತಿಯನ್ನು ಪರಿಶೀಲಿಸಿದಾಗ ಕಂಡುಬರುವ ಸನ್ನಿವೇಶವು ತುಂಬಾ ಭಯಾನಕವೆನಿಸುತ್ತದೆ. ಹೇಗೆಂದರೆ ಗಣಿಯಲ್ಲಿ ದುಡಿಯುವವರು ಸ್ಥಳೀಯರಲ್ಲದ ಕಾರಣ ಸ್ಥಳೀಯ ಪಂಚಾಯಿತಿಗಳಿಂದ ನಿರ್ಲಕ್ಷ್ಯಗೆ ಒಳಗಾಗಬೇಕಾಗಿದೆ. ಅಲ್ಲದೇ ವಲಸಿಗರಿಗೆ ತಮ್ಮ ಕುಟುಂಬದ ರಕ್ಷಣೆ ಹಾಗೂ ನಿರ್ವಹಣೆಯು ಮುಖ್ಯವಾಗಿರುವಾಗ ಸ್ಥಳೀಯ ಜನರ, ಚುಟುವಟಿಕೆಗಳ ಬಗ್ಗೆಯಾಗಲಿ ಅಥವಾ ಸಮಾಜದ ಬಗ್ಗೆಯಾಗಲಿ ಯಾವುದೇ ರೀತಿಯ ಮುತುವರ್ಜಿ ಅವರಲ್ಲಿ ಇಲ್ಲವಾಗಿದೆ. ಹಾಗೆಯೇ ಸ್ಥಳೀಯ ಸಮಾಜ ಹಾಗೂ ಸಮುದಾಯಗಳ ಕುಲಬಾಂಧವರು ಸಹ ವಲಸಿಗರು ಎಂಬ ಕಾರಣಕ್ಕೆ ಯಾವುದೇ ರೀತಿಯ ಸಹಾಯ - ಸಹಕಾರವನ್ನು ನೀಡದವರಾಗಿದ್ದಾರೆ. ಇಂತಹ ವಿಷಮ ಪರಿಸ್ಥಿತಿಯಲ್ಲಿರುವ ಗಣಿಕಾರ್ಮಿಕರು ಗಣಿಯಲ್ಲಿನ ಕಂಟ್ರಾಕ್ಟರ್ ಹಾಗೂ ಗಣಿ ಮಾಲೀಕರಿಗೆ ಲಾಭವನ್ನು ತರುವ, ಪ್ರಮುಖ ಸಂಪನ್ಮೂಲವಾಗಿ ಕಂಡುಬರುತ್ತಾರೆ.

**ಕಾರ್ಮಿಕರ ವಲಸೆಗೆ ಕಾರಣಗಳು**

ಈ ಮೇಲ್ಕಾಣಿಸಿದ ಕೋಷ್ಟಕದಲ್ಲಿ ಶೇಕಡ ೮೭ರಷ್ಟು ಗಣಿಕಾರ್ಮಿಕರ ವಲಸೆಗೆ ಮುಖ್ಯವಾಗಿ ನಾಲ್ಕು ರೀತಿಯ ಕಾರಣಗಳನ್ನು ಗುರುತಿಸಬಹುದಾಗಿದೆ. ಅವುಗಳಲ್ಲಿ

೧. ಒತ್ತಡದ ಕಾರಣಗಳು
೨. ಆಕರ್ಷಕ ಕಾರಣಗಳು
೩. ಸಾಮಾಜಿಕ ಕಾರಣಗಳು
೪. ಆರ್ಥಿಕ ಕಾರಣಗಳೆಂದು ವಿಂಗಡಿಸಬಹುದು.

ಒಂದನೆಯದಾಗಿ ಬಳ್ಳಾರಿ ಜಿಲ್ಲೆಯ ಗಣಿಯಲ್ಲಿ ಕಂಡುಬರುವ ವಲಸೆ ಕಾರ್ಮಿಕರಿಗಿರುವ ಒತ್ತಡದ ಕಾರಣಗಳೆಂದರೆ ೧. ಬಡತನ ೨. ನಿರುದ್ಯೋಗ ೩. ಕುಟುಂಬದ ಜವಾಬ್ದಾರಿ, ೪. ಆಂತರಿಕ ಕಲಹ, ೫. ಮೂಢನಂಬಿಕೆ, ೬. ನಗರೀಕರಣದ ಆಕರ್ಷಣೆ, ೭. ವಸತಿ ಸಮಸ್ಯೆ

೮. ಕುಟುಂಬದ ಸಮಸ್ಯೆಗಳು, ವಿವಾಹ ಸಂಬಂಧಿ ವೈಷಮ್ಯಗಳು, ೯. ಜೀವನದ ಪ್ರಶ್ನೆ, ೧೦. ಜಾತಿ ವಿವಾದಗಳು (ಸಾಮಾಜಿಕ ವೈಷಮ್ಯಗಳು), ೧೧. ಅವಿಭಕ್ತ ಕುಟುಂಬ ಪದ್ಧತಿಗಳು ಕಾರಣವಾಗಿವೆ.

ಹಾಗೆಯೇ ಜಿಲ್ಲೆಯ ಗಣಿಗಾರಿಕೆಯಲ್ಲಿರುವ ಕೆಲವು ಆಕರ್ಷಕ ಕಾರಣಗಳೆಂದರೆ ೧. ಒಳ್ಳೆಯ ದುಡಿಮೆ, ೨. ಆಕರ್ಷಕ ಕೂಲಿ, ೩. ವ್ಯಾಪಾರ- ವಾಣಿಜ್ಯ ವಹಿವಾಟು, ೪. ವಿಭಕ್ತ ಕುಟುಂಬ ಪದ್ಧತಿ, ೫. ಆದಾಯ ಗಳಿಕೆ, ೬. ಆಧುನಿಕತೆಯ ಆಕರ್ಷಣೆ ಮತ್ತು ಆಧುನಿಕತೆಯ ಒತ್ತಡಗಳಿಂದ ಪಾರಾಗಲು. ೭. ನಗರೀಕರಣದ ಆಕರ್ಷಣೆ ಇತ್ಯಾದಿಗಳಿಂದಾಗಿ ಕಾರ್ಮಿಕರಲ್ಲಿ ವಲಸೆಯ ಚಟುವಟಿಕೆ ಕಂಡುಬರಲು ಕಾರಣವಾಗಿದೆ.

ಬಳ್ಳಾರಿ ಜಿಲ್ಲೆಯ ಬಹುತೇಕ ಗಣಿಗಾರಿಕೆಯಲ್ಲಿನ ವಲಸೆಗಾರರು ಸಾಮಾಜಿಕ ಹಾಗೂ ಆರ್ಥಿಕ ಒತ್ತಡದ ಕಾರಣಗಳಿಂದಾಗಿ ವಲಸೆ ಬಂದವರಾಗಿದ್ದಾರೆ. ಮುಖ್ಯವಾಗಿ ಬಹಳಷ್ಟು ಕಾರ್ಮಿಕರು ತಮ್ಮ ಬಡತನದಿಂದ ಪಾರಾಗಲು ಸ್ವಂತ ಊರನ್ನು ತೊರೆದು, ಗಣಿವೃತ್ತಿಯಲ್ಲಿ ದುಡಿದು ತಮ್ಮ ಬಡತನವನ್ನು ನೀಗಿಸಿಕೊಳ್ಳಲು ಬಂದವರಾಗಿದ್ದಾರೆ.

ಇನ್ನು ಕೆಲವು ವಲಸೆ ಕಾರ್ಮಿಕರು ಯಾವುದೇ ರೀತಿಯ ಸ್ಥಿರ ಹಾಗೂ ಚರ ಸ್ವರೂಪದ ಆಸ್ತಿಗಳನ್ನು ಹೊಂದಿಲ್ಲದ ಕಾರಣ ಆಯಾ ಪ್ರದೇಶಗಳಲ್ಲಿದ್ದ ಕೃಷಿಭೂಮಿಗಳಲ್ಲಿ ಕೆಲಸ ಮಾಡುವವರು. ಆದರೆ ಇತ್ತೀಚಿನ ದಿನಗಳಲ್ಲಿ ಮಳೆಯ ಪ್ರಮಾಣ ಕಡಿಮೆಯಾಗಿರುವುದರಿಂದ ಕೃಷಿ ಚಟುವಟಿಕೆಗಳು ಸಹ ತುಂಬಾ ಏರಿಳಿತಗಳಿಗೆ ಒಳಗಾಗಿರುವುದರಿಂದ, ಕೃಷಿ ಭೂಮಿಯನ್ನೇ ನಂಬಿಕೊಂಡವರು ನಿರುದ್ಯೋಗದಿಂದ ಪಾರಾಗಲು ಜಿಲ್ಲೆಯ ಗಣಿವೃತ್ತಿಗೆ ವಲಸೆ ಬಂದವರಾಗಿದ್ದಾರೆ. ಜೊತೆಗೆ ಬಹಳಷ್ಟು ವಲಸೆ ಕಾರ್ಮಿಕರು ಸಾಮಾಜಿಕವಾಗಿ ಅತ್ಯಂತ ಹಿಂದುಳಿದ ಜಾತಿಗಳಿಂದ ಬಂದವರು. ಆಯಾ ಪ್ರದೇಶಗಳಲ್ಲಿ ಆಚರಣೆಯಲ್ಲಿರುವ ಮೇಲು ಕೀಳೆಂಬ ಭೇದಗಳಿಂದ ಬೇಸತ್ತು, ಶಾಂತಿಯುತ, ಹಾಗೂ ನೆಮ್ಮದಿಯ ಜೀವನವನ್ನು ಕಳೆಯಲು ವಲಸೆ ಬಂದಿರುವುದಾಗಿ ಹೇಳುತ್ತಾರೆ. ಮೂಲತಃ ವಲಸಿಗರು ಬಡವರು, ನಿರ್ಗತಿಕರು, ಅನಕ್ಷರತೆಯನ್ನು ಹೊಂದಿರುವುದರಿಂದ ಅವರು ಹೆಚ್ಚಾಗಿ ಅವಿಭಕ್ತಕುಟುಂಬಗಳಿಂದ ಬಂದವರಾಗಿದ್ದಾರೆ. ಅಲ್ಲದೇ ಇಂದಿನ ಆಧುನಿಕ ಪ್ರಪಂಚದ ಸಿನಿಮಾ, ಟಿ.ವಿ., ನಾಟಕ, ಇತ್ಯಾದಿಗಳಿಗೆ ಮಾರುಹೋಗಿ, ಗಂಡ-ಹೆಂಡತಿಯೊಂದಿಗೆ ಸುಖಕರ ಹಾಗೂ ಸಂತೋಷದ ಜೀವನವನ್ನು ನಡೆಸಲು ಆಸೆಹೊತ್ತು ಬಂದವರು ಕೆಲವರಿದ್ದಾರೆ. ಮತ್ತೇ ಕೆಲವರು ತಮ್ಮ ಕುಟುಂಬದ ಕಷ್ಟ-ಕಾರ್ಪಣ್ಯಗಳನ್ನು ದೂರಮಾಡಲು ಶ್ರಮವಹಿಸಿ ಹೆಚ್ಚು ಗಳಿಸುವ ಉದ್ದೇಶವನ್ನು ಇಟ್ಟುಕೊಂಡು ತಮ್ಮ ತವರೂರನ್ನು ತೊರೆದು ಬಂದಿದ್ದಾರೆ. ಹೀಗೆ ವಲಸೆ ಬಂದ ಕೆಲವು ಕಾರ್ಮಿಕರಿಗೆ ತಮ್ಮ ಸ್ವಂತ ಊರುಗಳಲ್ಲಿ ಸ್ವಂತ ಮನೆ, ಹಾಗೂ ೧ರಿಂದ ೫ ಎಕರೆಗಳ ಜಮೀನು ಹೊಂದಿರುವ

ಕೆಲವರು ಜಿಲ್ಲೆಯ ಗಣಿಯಲ್ಲಿ ಒಳ್ಳೆಯ ದುಡಿಮೆ, ಆಕರ್ಷಕವಾದ ಕೂಲಿ, ವಿಭಕ್ತ ಕುಟುಂಬಗಳ ಪಾಲನೆ, ಹೆಚ್ಚು ಆದಾಯ ಗಳಿಸುವ ಮಹತ್ವಾಕಾಂಕ್ಷೆಯಿಂದ ವಲಸೆಬಂದವರಾಗಿದ್ದಾರೆ. ಒಟ್ಟಾರೆಯಾಗಿ ಗಣಿ ಕಾರ್ಮಿಕರು ವಲಸೆಗೆ ಬಡತನ ಮತ್ತು ನಿರುದ್ಯೋಗ ಮುಖ್ಯ ಕಾರಣವಾಗಿ ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆ ಗಣಿಯಲ್ಲಿರುವ ವಲಸೆ ಕಾರ್ಮಿಕರನ್ನು ಅವರ ವಲಸೆಯ ಪ್ರವೃತ್ತಿಯನ್ನು ಆಧರಿಸಿ ಬೇರೆ, ಬೇರೆ, ಸ್ವರೂಪಗಳಿಂದ ಗುರುತಿಸಬಹುದಾಗಿದೆ. ಅವರಲ್ಲಿ ೧. ಅಲ್ಪಾವಧಿ ವಲಸೆಗಾರರು, ೨. ಋತುಮಾನದ ವಲಸೆಗಾರರು, ೩. ದೀರ್ಘಾವಧಿ ವಲಸೆಗಾರರೆಂದು ವಿಭಾಗಿಸಬಹುದು. ಜಿಲ್ಲೆಯ ನೆರೆಹೊರೆಯ ತಾಲೂಕುಗಳಲ್ಲಿ ಕೃಷಿಯನ್ನವಲಂಭಿಸಿದ್ದ ಕೆಲವು ಕಾರ್ಮಿಕರು ಕೃಷಿ ಚಟುವಟಿಕೆಗಳು ಮುಕ್ತಾಯವಾದ ನಂತರ ಪುನಃ ಕೃಷಿ ಕಾರ್ಯ ಆರಂಭವಾಗುವವರೆಗೆ ಗಣಿಯಲ್ಲಿ ದುಡಿಯುವವರಾಗಿದ್ದಾರೆ. ಇಂತಹ ಕಾರ್ಮಿಕರನ್ನು ಅಲ್ಪಾವಧಿ ವಲಸೆಗಾರರೆಂದು ಕರೆಯುತ್ತಾರೆ. ಇನ್ನು ಕೆಲವರು ಸುಗ್ಗಿಯ ನಂತರ, ಬೇಸಿಗೆ ಕಾಲದಲ್ಲಿ ನಿರುದ್ಯೋಗಿಯಾಗಿ ಕಾಲ ಕಳೆಯದೇ ಋತುಮಾನಕ್ಕನುಗುಣವಾಗಿ ವಲಸೆಬಂದು ಕ್ರಮೇಣ ಆಯಾ ಋತುಮಾನಗಳ ಕೆಲಸ ಕಾರ್ಯಗಳಲ್ಲಿ ಪಾಲ್ಗೊಳ್ಳುವವರನ್ನು ಋತುಮಾನದ ವಲಸೆಗಾರರೆಂದು ಗುರುತಿಸಬಹುದು. ಕೊನೆಯದಾಗಿ ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡ ವಲಸೆ ಕಾರ್ಮಿಕರಲ್ಲಿ ಶೇಕಡ ೪೦ರಷ್ಟು ಕಾರ್ಮಿಕರು ಸುಮಾರು ೧೦ರಿಂದ ೨೦ ಅಥವಾ ೩೦ ವರ್ಷಗಳವರೆಗೆ ನಿರಂತರವಾಗಿ ಬೇರೆ ಬೇರೆ ಗಣಿ ಪ್ರದೇಶಗಳಲ್ಲಿ ದುಡಿಯುತ್ತಾ ಈ ಭಾಗದಲ್ಲಿಯೇ ವಾಸಿಸುವ ಮೂಲಕ ಗಣಿ ಚಟುವಟಿಕೆಯಲ್ಲಿ ತಮ್ಮ ಜೀವನ ಹಾಗೂ ಬದುಕನ್ನು ಕಂಡುಕೊಂಡವರಿಗೆ ದೀರ್ಘಾವಧಿ ವಲಸೆಗಾರರೆಂದು ಕರೆಯಬಹುದು.

ಗಣಿಯಲ್ಲಿರುವ ಕಾರ್ಮಿಕರ ವಲಸೆಯ ಪ್ರವೃತ್ತಿಯಲ್ಲಿ ಸಾಕಷ್ಟು ವೈವಿಧ್ಯತೆಗಳನ್ನು ಗುರುತಿಸ ಬಹುದಾಗಿದೆ. ಅದು ಋತುಮಾನಕ್ಕೆ ತಕ್ಕಂತೆ ಬದಲಾಗುತ್ತಾ ಹೋಗಿ, ಪುನಃ ಪರ್ಯಾಯ ಹಾಗೂ ಮೂಲ ಉದ್ಯೋಗಳಿಗೆ ಕಾರ್ಮಿಕರನ್ನು ಕಳುಹಿಸಿಕೊಡುವ ವೃತ್ತಿಯಾಗಿ ಜಿಲ್ಲೆಯಲ್ಲಿ ಗಣಿಗಾರಿಕೆ ಕಂಡುಬರುತ್ತದೆ. ಹೀಗೆ ಬೇರೆ ಬೇರೆ ವಲಯಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಮಿಕರ ವಲಸೆಯ ಪ್ರಮಾಣವು ಸಹ ವರ್ಷದುದ್ದಕ್ಕೂ ಒಂದೇ ರೀತಿಯಾಗಿರದೇ, ಬೇರೆ ಬೇರೆ ತಿಂಗಳಲ್ಲಿ ಬೇರೆ ಬೇರೆ ರೀತಿಯಾಗಿರುವುದನ್ನು ಮುಂದಿನ ೪.೨೬ರ ಕೋಷ್ಟಕದಿಂದ ತಿಳಿಯಬಹುದು.

೪.೨೬ರ ಕೋಷ್ಟಕವನ್ನು ಪರಿಶೀಲಿಸಿದಾಗ ಕ್ಷೇತ್ರಕಾರ್ಯದಲ್ಲಿ ದೊರೆತ ೨೦೦ ಗಣಿ ಕಾರ್ಮಿಕರಲ್ಲಿ ೧೭೫ ರಷ್ಟು ಕಾರ್ಮಿಕರು ಬೇರೆ, ಬೇರೆ ಪ್ರದೇಶಗಳಿಂದ ವಲಸೆ ಬಂದವರಾಗಿದ್ದಾರೆ. ಅವರಲ್ಲಿ ಕೆಲವರು ದೀರ್ಘಾವಧಿ ಗಣಿಯನ್ನೇ ಅವಲಂಬಿಸಿರುವವರನ್ನು ಹೊರತುಪಡಿಸಿ, ಉಳಿದ ಕಾರ್ಮಿಕರು ತಮ್ಮ ಉಪವೃತ್ತಿಯನ್ನಾಗಿ ಗಣಿಗಾರಿಕೆ ಅವಲಂಬಿಸಿದವರನ್ನು ಪರಿಶೀಲಿಸಿದಾಗ ಗಣಿಯಲ್ಲಿ ದುಡಿಯಲು

ಕೋಷ್ಟಕ ೪.೨೬ : ಕಾರ್ಮಿಕರ ಮಾಸಿಕ ವಲಸೆಯ ಪ್ರಮಾಣ

| ಕ್ರ.ಸಂ. | ಅವಧಿ | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಜನವರಿ-ಮಾರ್ಚ್ | ೨೫ | ೧೨.೫ |
| ೨. | ಏಪ್ರಿಲ್-ಜೂನ್ | ೯೦ | ೪೫ |
| ೩. | ಜುಲೈ-ಸೆಪ್ಟೆಂಬರ್ | ೪೦ | ೨೦ |
| ೪. | ಅಕ್ಟೋಬರ್-ಡಿಸೆಂಬರ್ | ೨೦ | ೧೦ |
| | ಒಟ್ಟು | ೧೭೫ | ೮೭.೫ |

ಮೂಲ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

ಬರುವ ಕಾರ್ಮಿಕರ ಸಮಯ ಮತ್ತು ಸಂದರ್ಭಗಳು ಬೇರೆ, ಬೇರೆಯಾಗಿರುವುದನ್ನು ಮನಗಾಣಬಹುದು. ಮುಖ್ಯವಾಗಿ ಜನವರಿಯಿಂದ ಮಾರ್ಚ್‌ವರೆಗೆ ದುಡಿಯಲು ಬರುವವರ ಪ್ರಮಾಣ ಶೇ ೧೨.೫ ಕಾರ್ಮಿಕರಾಗಿದ್ದಾರೆ. ಇದಕ್ಕೆ ಕಾರಣವೇನೆಂದರೆ ಕೃಷಿ ಚಟುವಟಿಕೆಯಲ್ಲಿ ಬೆಳೆಗಳ ಮಾದರಿಯು ಬದಲಾಗಿರುವುದರಿಂದ ಮತ್ತು ಇತ್ತೀಚೆಗೆ ದೀರ್ಘಾವಧಿ ಬೆಳೆಗಳು ಕಣ್ಮರೆಯಾಗಿವೆ. ಅಲ್ಲದೆ ಅತ್ಯಂತ ಅಲ್ಪಾವಧಿ ಬೆಳೆಗಳಾದ ಮೆಕ್ಕೆಜೋಳ, ಜೋಳ, ಸೂರ್ಯಕಾಂತಿ, ತೊಗರಿ, ನವಣೆ, ಸಜ್ಜೆ, ಇತ್ಯಾದಿ ಬೆಳೆಗಳು ಹೆಚ್ಚಾಗಿ ಕಂಡುಬರುವುದರಿಂದ ಅವುಗಳಿಂದ ಫಸಲನ್ನು ಪಡೆಯಲು ಕೇವಲ ೩ ರಿಂದ ೪ ತಿಂಗಳ ಅವಧಿ ಸಾಕಾಗುತ್ತದೆ. ಆನಂತರ ಕೃಷಿ ಕೆಲಸ ಕಾರ್ಯಗಳು ಮಂದಗತಿಯಲ್ಲಿರುತ್ತದೆ. ಇಂತಹ ಕಾಲಾವಧಿಯು ಜನವರಿಯಿಂದ ಹಿಡಿದು ಮಾರ್ಚ್ ತಿಂಗಳು ಆಗಿರುವುದರಿಂದ ಆಗ ಗಣಿಯಲ್ಲಿ ಉದ್ಯೋಗ ಅರಿಸಿಬರುವವರ ಪ್ರಮಾಣ ಶೇಕಡ ೧೨.೫ರಷ್ಟು ಮಾತ್ರ ಆಗಿರುತ್ತದೆ. ಹಾಗೆಯೇ ಏಪ್ರಿಲ್‌ನಿಂದ ಜೂನ್‌ವರೆಗಿನ ಕಾಲಾವಧಿಯು ಕೃಷಿಯನ್ನು ಅವಲಂಭಿಸಿರುವವರಿಗೆ ವಿಶ್ರಾಂತಿ ಅಥವಾ ನಿರುದ್ಯೋಗದ ಕಾಲಾವಧಿಯಾಗಿರುತ್ತದೆ. ಈ ಕಾರಣದಿಂದಾಗಿ ಜಿಲ್ಲೆಯ ಗಣಿಯಲ್ಲಿ ಕೆಲಸಮಾಡುವ ವಲಸಿಗರ ಸಂಖ್ಯೆ ೯೦ರಷ್ಟು ವಲಸೆ ಬಂದವರಾಗಿದ್ದಾರೆ. ಪ್ರತಿ ವರ್ಷವು ಏಪ್ರಿಲ್ ತಿಂಗಳಿಂದ ಜೂನ್ ತಿಂಗಳ ಕಾಲಾವಧಿಯಲ್ಲಿ ಹೆಚ್ಚು ಕೃಷಿ ಕಾರ್ಮಿಕರು ಗಣಿ ಚಟುವಟಿಕೆಗೆ ವಲಸೆ ಬರುವ ಸಾಧ್ಯತೆ ಇರುತ್ತದೆ. ಇಂತಹವರ ಪ್ರಮಾಣವು ಶೇಕಡ ೪೫ರಷ್ಟು ಆಗಿರುತ್ತದೆ. ಆದರೆ ಜುಲೈನಿಂದ ಸೆಪ್ಟೆಂಬರ್ ತಿಂಗಳಲ್ಲಿ ಪುನಹಃ ಕೃಷಿ ಕಾರ್ಯಗಳಿಗೆ ಭೂಮಿಯನ್ನು ಹದಮಾಡುವ, ಉತ್ತುವ, ಬಿತ್ತವ ಹಾಗೂ ಬೆಳೆಯುವ ದಿನಗಳಾಗಿರುವದರಿಂದ ಗಣಿಯಲ್ಲಿ ಉದ್ಯೋಗ ಅರಸಿ ಬರುವವರ ಪ್ರಮಾಣ ಶೇಕಡ ೩೦ರಷ್ಟು ಮಾತ್ರ ಆಗಿರುತ್ತದೆ. ಹಾಗೆಯೇ ಅಕ್ಟೋಬರ್ ತಿಂಗಳಿನಿಂದ ಡಿಸೆಂಬರ್ ವರೆಗಿನ ಕಾಲಾವಧಿಯು ಕೃಷಿಯ ಉಚ್ಛ್ರಾಯ ಸನ್ನಿವೇಷದ ಕಾಲಾವಧಿಯಾಗಿರುತ್ತದೆ.

ಸುಗ್ಗಿಯ ದಿನಗಳಲ್ಲಿ ಕಾರ್ಮಿಕರಿಗೆ ಕೊಯ್ಯುವ, ಕಿತ್ತುವ, ಕಣ ಮಾಡುವ ಕಾರ್ಯಗಳಿಂದಾಗಿ ಗಣಿಗಾರಿಕೆಯಲ್ಲಿ ಕಾರ್ಮಿಕರ ವಲಸೆಯ ಪ್ರಮಾಣವು ತುಂಬಾ ಕಡಿಮೆಯಾಗಿರುತ್ತದೆ. ಅದು ಕೇವಲ ಶೇಕಡ ೧೦ರಷ್ಟು ಕಾರ್ಮಿಕರನ್ನು ಮಾತ್ರ ನೋಡಬಹುದು. ಹೀಗೆ ಕಾರ್ಮಿಕರ ಮೂಲ ಉದ್ಯೋಗದಲ್ಲಿ ಕಂಡುಬರುವ ಕೆಲಸ ಕಾರ್ಯಗಳಿಗೆ ಸಂಬಂಧಿಸಿದಂತೆ ಕಾರ್ಮಿಕರ ವಲಸೆಯು ಪ್ರಮಾಣವು ನಿರ್ಧಾರವಾಗುತ್ತದೆ ಎಂಬುದನ್ನು ಅರಿಯಬಹುದು. ಇಂತಹ ಗಣಿ ಕಾರ್ಮಿಕರ ವಲಸೆಯ ಪ್ರಮಾಣವನ್ನು ರೇಖಾಚಿತ್ರದ ಮೂಲಕ ನೋಡಿದಾಗ ಈ ಕೆಳಗಿನಂತೆ ಕಂಡುಬರುತ್ತದೆ.




1. ಜನವರಿ-ಮಾರ್ಚ್, 2. ಏಪ್ರಿಲ್-ಜೂನ್, 3. ಜುಲೈ-ಸೆಂಪ್ಟೆಂಬರ್, ೪.ಅಕ್ಟೋಬರ್-ಡಿಸೆಂಬರ್

ಈ ಮೇಲಿನ ರೇಖಾಚಿತ್ರದಲ್ಲಿ ox ಅಕ್ಷಾಂಶವು ಕಾರ್ಮಿಕರ ವಲಸೆಯ ಕಾಲಾವಧಿಯನ್ನು ತೋರಿಸುತ್ತದೆ. oy ರೇಖಾಂಶವು ಕಾರ್ಮಿಕರ ಸಂಖ್ಯೆಯನ್ನು ತೋರಿಸುತ್ತದೆ. SS ರೇಖೆಯು ಕಾರ್ಮಿಕರ ಪೂರೈಕೆಯ ಪ್ರವೃತ್ತಿಯನ್ನು ತೋರಿಸುತ್ತದೆ. ಕಾರ್ಮಿಕರ ವಲಸೆಯ ಪ್ರವೃತ್ತಿಯು ಕಾಲಾವಧಿಗನುಗುಣವಾಗಿ ಬೇರೆ ಬೇರೆಯಾಗಿರುವುದರಿಂದ SS ರೇಖೆಯು ಕ್ರಮೇಣ ಏರಿಕೆಯ ಹಂತದಲ್ಲಿ ಸಾಗುತ್ತ ಏಪ್ರಿಲ್-ಜೂನ್ ತಿಂಗಳಲ್ಲಿ ಕಾರ್ಮಿಕರ ವಲಸೆಯ ದರವು ಹೆಚ್ಚಾಗಿರುವುದನ್ನು ತೋರಿಸುತ್ತದೆ. ನಂತರ ಜುಲೈನಿಂದ ಸೆಪ್ಟೆಂಬರ್ ಕಾಲಾವಧಿಯಲ್ಲಿ ಕಾರ್ಮಿಕರು ಕೃಷಿಸಂಬಂಧಿ ಕಾರ್ಯಗಳಲ್ಲಿ ಪಾಲ್ಗೊಳ್ಳುವುದರಿಂದ ಕಾರ್ಮಿಕರ ವಲಸೆಯ ದರವು ಇಳಿಮುಖವಾಗುತ್ತಾ ಸಾಗಿದೆ. ಅದು ಅಕ್ಟೋಬರ್‌ನಿಂದ ಡಿಸೆಂಬರ್ ಅವಧಿಯಲ್ಲಿ ಕೃಷಿ ಸಂಬಂಧಿ ಚಟುವಟಿಕೆಯು ಅಥವಾ ಕೆಲಸ-ಕಾರ್ಯಗಳು ಹೇರಳವಾಗಿರುವುದರಿಂದ ಕಾರ್ಮಿಕರ ಪ್ರಮಾಣ ಕೇವಲ ಶೇಕಡ ೧೦ಕ್ಕೆ ಸೀಮಿತಗೊಂಡಿರುವುದನ್ನು ಚೌಕಕಾರದ ಗೋಲಾಕೃತಿಯ ಸ್ಪಷ್ಟಪಡಿಸುತ್ತದೆ. ಒಟ್ಟಾರೆಯಾಗಿ ಕಾರ್ಮಿಕರ ವಲಸೆಯ ಪ್ರವೃತ್ತಿಯು ಗಣಿಯಲ್ಲಿರುವ ಎಲ್ಲಾ ಜಾತಿಯ ಕಾರ್ಮಿಕರಲ್ಲಿ ಕಂಡುಬಾರದೆ ಕೇವಲ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಾಗೂ

ಕೆಲವು ಬುಡಕಟ್ಟು ಪಂಗಡಗಳಲ್ಲಿ ಮಾತ್ರ ಹೆಚ್ಚಾಗಿರುವುದನ್ನು ಗಂಭೀರವಾಗಿ ಪರಿಗಣಿಸಿದಾಗ, ಕಂಡುಬರುವ ಪ್ರಮುಖ ಕಾರಣವೆಂದರೆ ರಾಷ್ಟ್ರದ ಸಂಪತ್ತು ಸರ್ವರಿಗೂ ಸಮಾನವಾಗಿ ವಿತರಣೆಗೊಳ್ಳದೇ ಇರುವುದರಿಂದ, ದೇಶದಲ್ಲಿರುವ ಸ್ಥಿರಾಸ್ತಿ-ಚರಾಸ್ತಿಗಳ ಹಕ್ಕುದಾರಿಕೆಯು ಕೆಲವೇ ಜಾತಿಗಳಲ್ಲಿ ಕೇಂದ್ರೀಕೃತಗೊಂಡಿರುವುದು ಕಾರ್ಮಿಕರ ವಲಸೆಗೆ ಮುಖ್ಯ ಆಧಾರವಾಗಿ ಗುರುತಿಸಬಹುದು. ಇದರಿಂದಾಗಿ ತಮ್ಮ ದೈನಂದಿನ ಜೀವನಕ್ಕಾಗಿ ಕೆಳಜಾತಿಗಳು ವಲಸೆ ಹೋಗಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ ಎನ್ನಬಹುದು.

**ವಲಸೆಯಿಂದಾಗುವ ಪರಿಣಾಮಗಳು**

ಬಳ್ಳಾರಿ ಜಿಲ್ಲೆಯ ತೀವ್ರತರ ಗಣಿಗಾರಿಕೆಯಿಂದಾಗಿ ಬೇರೆ ಬೇರೆ ಜಿಲ್ಲೆ, ರಾಜ್ಯ, ರಾಷ್ಟ್ರಗಳಿಂದ ಕೆಲಸಗಾರರು, ವ್ಯಾಪಾರಸ್ಥರು ಹಾಗೂ ಮಧ್ಯಸ್ಥಗಾರರು ವಲಸೆ ಬರುತ್ತಿರುವುದರಿಂದ ಜಿಲ್ಲೆಯ ಸಾಮಾಜಿಕ ಹಾಗೂ ಆರೋಗ್ಯ ವ್ಯವಸ್ಥೆಯ ಮೇಲೆ ಗಂಭೀರ ಪರಿಣಾಮಗಳು ಉಂಟಾಗುತ್ತಿವೆ. ಅವುಗಳಲ್ಲಿ ಮುಖ್ಯವಾಗಿ ನಮ್ಮ ಸಮಾಜದಲ್ಲಿ ಭೀಕರ ರೋಗವೆಂದು ಗುರುತಿಸಲ್ಪಡುವ ಏಡ್ಸ್ ರೋಗವು ಹೆಚ್ಚುತ್ತಾ ಸಾಗಿದೆ. ಇದನ್ನು ೪.೨೭ರ ಕೋಷ್ಟಕದಿಂದ ಪರಿಶೀಲಿಸೋಣ.

**ಕೋಷ್ಟಕ ೪.೨೭**

**೨೦೦೪ರ ಅವಧಿಯಲ್ಲಿ ಏಡ್ಸ್ ಸಾಧ್ಯತೆ ಇರುವ ರೋಗಿಗಳ ವಿವರ**

| ತಿಂಗಳು | ಬಳ್ಳಾರಿ ತಾಲೂಕು | ಇತರೆ ತಾಲೂಕುಗಳಿಂದ ಬಂದ ರೋಗಿಗಳು | ಕರ್ನಾಟಕದ ಇತರ ಜಿಲ್ಲೆಗಳಿಂದ ಬಂದ ರೋಗಿಗಳು | ಆಂಧ್ರಪ್ರದೇಶದ ಇತರ ಜಿಲ್ಲೆಗಳಿಂದ ವಲಸೆ ಬಂದ ರೋಗಿಗಳು | ಒಟ್ಟು |
|---|---|---|---|---|---|
| ಜನವರಿ | ೩೪ | ೨೮ | ೧೬ | ೦೩ | ೮೧ |
| ಫೆಬ್ರವರಿ | ೨೪ | ೧೪ | ೧೦ | ೦೮ | ೫೬ |
| ಮಾರ್ಚ್ | ೪೩ | ೧೫ | ೧೮ | ೧೦ | ೮೬ |
| ಏಪ್ರಿಲ್ | ೧೯ | ೧೯ | ೦೭ | ೦೨ | ೫೭ |
| ಮೇ | ೩೫ | ೨೨ | ೧೬ | ೦೫ | ೭೮ |
| ಜೂನ್ | ೪೪ | ೩೨ | ೨೧ | ೦೭ | ೧೦೪ |
| ಜುಲೈ | ೪೧ | ೨೩ | ೧೬ | ೦೩ | ೮೩ |
| ಆಗಸ್ಟ್ | ೪೦ | ೨೦ | ೧೯ | ೧೦ | ೮೯ |
| ಸೆಪ್ಟೆಂಬರ್ | ೪೪ | ೨೪ | ೧೦ | ೦೭ | ೮೫ |

| | | | | | |
|---|---|---|---|---|---|
| ಅಕ್ಟೋಬರ್ | ೨೯ | ೨೯ | ೦೬ | ೦೭ | ೭೧ |
| ನವೆಂಬರ್ | ೩೨ | ೧೩ | ೦೮ | ೦೬ | ೫೯ |
| ಡಿಸೆಂಬರ್ | ೪೨ | ೨೯ | ೧೩ | ೦೪ | ೮೮ |
| ಒಟ್ಟು | ೪೩೭ | ೨೬೮ | ೧೬೦ | ೭೨ | ೯೩೭ |

ಮೂಲ : HIV + VE Cases VCTC VIMS, Bellary, 2005

೪.೨೭ರ ಕೋಷ್ಟಕವನ್ನು ಪರಿಶೀಲಿಸಿದಾಗ ಬಳ್ಳಾರಿ ಜಿಲ್ಲೆಗೆ ವಿವಿಧ ಉದ್ದೇಶಗಳಿಗಾಗಿ ಬೇರೆ, ಬೇರೆ ಸ್ಥಳಗಳಿಂದ ವಲಸೆ ಬರುವವರ ಪ್ರಮಾಣ ಹೆಚ್ಚಾಗಿರುವುದರಿಂದ ೨೦೦೪ರ ವರ್ಷದಲ್ಲಿ ಬಳ್ಳಾರಿ ಜಿಲ್ಲಾ ವಿಜಯನಗರ ವೈದ್ಯಕೀಯ ಸಂಸ್ಥೆಯು ನಡೆಸಿದ ಏಡ್ಸ್ ರೋಗಿಗಳ ತಪಾಸಣೆಯ ಫಲಿತಾಂಶವನ್ನು ತೋರಿಸುತ್ತದೆ. ೨೦೦೪ರ ಜನವರಿಯಲ್ಲಿ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಕಂಡುಬಂದ ೩೪, ಏಡ್ಸ್ ಸಾಧ್ಯತೆ ಇರುವ ರೋಗಿಗಳ ಪ್ರಮಾಣವು ೨೦೦೪ರ ಡಿಸೆಂಬರ್ ವೇಳೆಗೆ ೪೩೭ಕ್ಕೆ ಏರಿಕೆಯಾಗಿದೆ. ಹಾಗೆಯೇ ಜಿಲ್ಲೆಯ ಬೇರೆ, ಬೇರೆ ತಾಲೂಕಿನಿಂದ ತಪಾಸಣೆಗೆ ಬಂದ ರೋಗಿಗಳ ಪ್ರಮಾಣ ಜನವರಿಯಲ್ಲಿ ೨೮ ಇದದ್ದು ಡಿಸೆಂಬರ್ ವೇಳೆಗೆ ಒಟ್ಟು ೨೬೮ರಷ್ಟು ಹೆಚ್ಚಾಗಿದೆ. ಹಾಗೆಯೇ ಕರ್ನಾಟಕದ ಇತರ ಜಿಲ್ಲೆಗಳಿಂದ ಮತ್ತು ಆಂಧ್ರಪ್ರದೇಶದಿಂದ ಬಂದ ಏಡ್ಸ್ ರೋಗಿಗಳ ಪ್ರಮಾಣವು ಅನುಕ್ರಮವಾಗಿ ೧೬೦ ಹಾಗೂ ೭೨ ರಷ್ಟಿವೆ. ಅಂಕಿ-ಅಂಶಗಳ ಪ್ರಕಾರ ೨೦೦೪ರ ನಿರ್ದಿಷ್ಟ ವರ್ಷದಲ್ಲಿ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಕಂಡುಬಂದ ಏಡ್ಸ್ ರೋಗಿಗಳ ಪ್ರಮಾಣ ೯೩೭ ಇರುವುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಇನ್ನೂ ಸಮಾಜದಲ್ಲಿ ಅವಹೇಳನ, ಸಾಮಾಜಿಕ ಸ್ಥಾನಮಾನ, ಕುಟುಂಬದ ಪ್ರತಿಷ್ಠೆಗಾಗಿ ಚಿಕಿತ್ಸೆ ಪಡೆಯಲು ಹೆದರಿ ಕುಳಿತುಕೊಂಡವರ ಪ್ರಮಾಣ ದ್ವಿಗುಣಗೊಳ್ಳುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಒಟ್ಟಾರೆಯಾಗಿ ಹೇಳುವುದಾದರೆ ಜಿಲ್ಲೆಯ ಗಣಿಗಾರಿಕೆಯ ಚಟುವಟಿಕೆಯು ವಲಸಿಗರ ಪ್ರಮಾಣಕ್ಕೆ ಉತ್ತೇಜನ ನೀಡುತ್ತಿರುವುದರಿಂದ ಜಿಲ್ಲೆಯಲ್ಲಿ ಏಡ್ಸ್‌ನಂತಹ ಹತ್ತಾರು ರೋಗಗಳು ವೃದ್ಧಿಗೊಂಡು ಸಮಾಜದಲ್ಲಿ ಆತಂಕವನ್ನು ಹುಟ್ಟುಹಾಕುವಲ್ಲಿ ಸಮರ್ಥವಾಗಿದೆ ಎಂಬುದನ್ನು ವಲಸೆಯಿಂದಾಗುವ ಪರಿಣಾಮಕ್ಕೆ ಹಿಡಿದ ಕೈಗನ್ನಡಿಯಾಗಿದೆ ಎನ್ನಬಹುದು.

## ೪.೬. ಭಾಷೆ

ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿಯು ಗಡಿಜಿಲ್ಲೆಯಾಗಿದ್ದು, ಉತ್ತರದಲ್ಲಿ ರಾಯಚೂರು ಜಿಲ್ಲೆ, ಪಶ್ಚಿಮದಲ್ಲಿ ಕೊಪ್ಪಳ ಜಿಲ್ಲೆ, ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆ ಹಾಗೂ ಪೂರ್ವದಲ್ಲಿ ಅನಂತ್‌ಪುರ ಮತ್ತು ಕರ್ನೂಲ್ ಜಿಲ್ಲೆಗಳಿಂದ ಸುತ್ತುವರೆದಿದೆ. ಹೀಗಾಗಿ ಜಿಲ್ಲೆಯ ನಡೆ, ನುಡಿ, ಉಡುಪು,

ಆಹಾರ ಮತ್ತು ಪದ್ಧತಿಗಳೆಲ್ಲವೂ ಈ ಭಾಗದಲ್ಲಿ ಆಡಳಿತ ನಡೆಸಿದ ನಿಜಾಮರ, ಪಾಳೆಗಾರರ ಹಾಗೂ ತೆಲುಗರ ಬಹು ಸಂಸ್ಕೃತಿಗಳು ಸಮ್ಮಿಲನಗೊಂಡಿರುವುದನ್ನು ನೋಡಬಹುದು. ಬಳ್ಳಾರಿ ಜಿಲ್ಲೆಯ ಬಹುತೇಕ ಎಲ್ಲಾ ತಾಲೂಕುಗಳಲ್ಲಿ ಆಂಧ್ರಪ್ರದೇಶದಿಂದ ವಲಸೆ ಬಂದವರನ್ನು ಹೆಚ್ಚಾಗಿ ಕಾಣಬಹುದು. ಆದರೆ ಬಳ್ಳಾರಿ ತಾಲೂಕಿನಲ್ಲಿ ಮಾತ್ರ ಶೇಕಡ ೩೦ರಷ್ಟು ಜನರು ಆಂದ್ರ ಮೂಲದವರಾಗಿದ್ದು, ಆ ತಾಲೂಕಿನ ವ್ಯಾಪಾರ, ವಾಣಿಜ್ಯ, ಉತ್ಪಾದನೆ, ವಿತರಣೆ ಹಾಗೂ ಉದ್ದಿಮೆದಾರನಾಗಿ ನೆಲೆನಿಂತು, ಇಡೀ ಜಿಲ್ಲೆಯ ರಾಜಕೀಯ ಮತ್ತು ಸಾಮಾಜಿಕ ಅಧಿಕಾರಗಳನ್ನು ಪಡೆದುಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯಲ್ಲಿ ನೆಲೆಸಿರುವ ಕನ್ನಡಿಗರ ಮತ್ತು ತೆಲುಗರ ವೇಶಭೂಷಣಗಳಲ್ಲಿ ವಿಶೇಷವಾದ ವ್ಯತ್ಯಾಸವೇನು ಕಂಡುಬರುವುದಿಲ್ಲ. ಈ ಕಾರಣಕ್ಕಾಗಿ ಜಿಲ್ಲೆಯಲ್ಲಿ ಕನ್ನಡ, ತೆಲಗು, ಹಿಂದಿ ಹಾಗೂ ಉರ್ದು ಭಾಷೆಗಳು ಸಾಮಾನ್ಯವಾಗಿವೆ.

ಮೂಲತಃ ಗಣಿಕಾರ್ಮಿಕರು ವಲಸೆಗಾರರಾಗಿದ್ದು, ಅವರು ತಮ್ಮ ಮಾತೃ ಭಾಷೆಯೊಂದಿಗೆ, ಅನಿವಾರ್ಯವಾಗಿ ಬೇರೆ ಬೇರೆ ಭಾಷೆಗಳನ್ನು ಮೈಗೂಡಿಸಿಕೊಂಡು ತಮ್ಮ ಬದುಕನ್ನು ಕಟ್ಟಿಕೊಳ್ಳಬೇಕಾಗಿದೆ. ಹೀಗಾಗಿ ಜಿಲ್ಲೆಯ ವಿವಿಧ ಗಣಿಗಳಲ್ಲಿ ದುಡಿಯುತ್ತಿರುವ ಕಾರ್ಮಿಕರು ಯಾವ, ಯಾವ ಭಾಷೆಗಳನ್ನು ಕಲಿತಿದ್ದಾರೆ. ಎಂಬುದನ್ನು ೪.೨೮ರ ಕೋಷ್ಟಕದಿಂದ ಅರಿಯಬಹುದು.

**ಕೋಷ್ಟಕ ೪.೨೮ : ಗಣಿ ಕಾರ್ಮಿಕರಾಡುವ ಭಾಷೆಗಳು**

| ಕ್ರ.ಸಂ. | ಭಾಷೆಗಳು | ತಿಳುವಳಿಕೆಯ ಜ್ಞಾನ | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|---|
| ೧. | ಕನ್ನಡ | ಗೊತ್ತು | ೧೬೦ | ೭೦ |
| | | ಇಲ್ಲ | ೪೦ | ೨೦ |
| | | ಒಟ್ಟು | ೨೦೦ | ೧೦೦ |
| ೨. | ತೆಲುಗು | ಗೊತ್ತು | ೧೮೦ | ೯೦ |
| | | ಇಲ್ಲ | ೨೦ | ೧೦ |
| | | ಒಟ್ಟು | ೨೦೦ | ೧೦೦ |
| ೩. | ತಮಿಳು | ಗೊತ್ತು | ೪೦ | ೨೦ |
| | | ಇಲ್ಲ | ೧೬೦ | ೮೦ |
| | | ಒಟ್ಟು | ೨೦೦ | ೧೦೦ |

| | | | | |
|---|---|---|---|---|
| ೪. | ಹಿಂದಿ/ಉರ್ದು | ಗೊತ್ತು | ೨೦ | ೧೦ |
| | | ಇಲ್ಲ | ೧೮೦ | ೯೦ |
| | | ಒಟ್ಟು | ೨೦೦ | ೧೦೦ |
| ೫. | ಇಂಗ್ಲಿಷ್ | ಗೊತ್ತು | -- | -- |
| | | ಇಲ್ಲ | ೨೦೦ | ೧೦೦ |
| | | ಒಟ್ಟು | ೨೦೦ | ೧೦೦ |

೪.೨೮ರ ಕೋಷ್ಠಕದಲ್ಲಿ ಶೇಕಡ ಓಂಕ್ಕಿತಂಲೂ ಹೆಚ್ಚು ಕಾರ್ಮಿಕರು ಆಂಧ್ರಪ್ರದೇಶದ ಗಡಿಭಾಗಗಳಿಂದ ವಲಸೆ ಬಂದಿರುವುದರಿಂದ ಅವರೆಲ್ಲರ ಮಾತೃಭಾಷೆ ತೆಲುಗು ಭಾಷೆಯಾಗಿದೆ. ಇಂತಹ ವಲಸೆ ಕಾರ್ಮಿಕರು ಹತ್ತಾರು ವರ್ಷಗಳಿಂದ ಈ ಭಾಗದಲ್ಲಿಯೇ ಕೆಲಸವನ್ನು ನಿರ್ವಹಿಸುತ್ತಿರುವುದರಿಂದ ಸ್ಥಳೀಯ ಕನ್ನಡ, ಉರ್ದು ಭಾಷೆಗಳನ್ನು ಸಹ ಕಲಿಯುವ ಮೂಲಕ ಅದರಲ್ಲಿ ವ್ಯವಹರಿಸುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದಾರೆ. ಹೀಗಾಗಿ ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡ ೨೦೦ ಗಣಿಕಾರ್ಮಿಕರಲ್ಲಿ ಕನ್ನಡವನ್ನು ಮಾತನಾಡುವ ಹಾಗೂ ಕನ್ನಡದಲ್ಲಿನ ವ್ಯವಹಾರವನ್ನು ಸಂಪೂರ್ಣವಾಗಿಬಲ್ಲವರ ಪ್ರಮಾಣ ಶೇಕಡ ೮೦ರಷ್ಟು ಕಂಡುಬರುತ್ತದೆ. ಹಾಗೆಯೇ ಗಣಿಕಾರ್ಮಿಕರಲ್ಲಿ ವಲಸಿಗರ ಜೊತೆಗೆ ಕೆಲವು ಬುಡಕಟ್ಟು ಸಮುದಾಯದ ಸ್ಥಳೀಯ ಕುಟುಂಬಗಳ ಗಣಿ ಉದ್ಯೋಗವನ್ನೇ ಜೀವನಾಧಾರವಾಗಿ ನಂಬಿಕೊಂಡಿರುವವರ ಪ್ರಮಾಣ ಶೇಕಡ ೧೦ರಷ್ಟು ಜನರಿಗೆ ತೆಲುಗು ಭಾಷೆ ಮಾತನಾಡಲು ಬರುವುದಿಲ್ಲ. ಆದರೆ ಅವರಿಗೆ ತೆಲುಗಿನಲ್ಲಿ ವ್ಯವಹರಿಸುವುದೆಲ್ಲವೂ ಅರ್ಥವಾಗುತ್ತದೆ. ಹಾಗೆಯೇ ಶೇಕಡ ೩೦ರಷ್ಟು ಕಾರ್ಮಿಕರು ತೆಲುಗು ಭಾಷೆಯಲ್ಲಿ ಮಾತನಾಡುವ, ವ್ಯವಹರಿಸುವ ಸಂಪೂರ್ಣ ಜ್ಞಾನದ ಅರಿವಿರುತ್ತದೆ. ಇತ್ತೀಚಿನ ದಿನಗಳಲ್ಲಿ ಕೇರಳ ಹಾಗೂ ತಮಿಳುನಾಡಿನ ನಾಗರಿಕರು ರಾಜ್ಯ, ದೇಶ ಹಾಗೂ ಅಂತರಾಷ್ಟ್ರೀಯವಾಗಿ ಉದ್ಯೋಗ ಮತ್ತು ವ್ಯವಹಾರಗಳನ್ನು ಹುಡುಕಿಕೊಂಡು ಸಂಚರಿಸುತ್ತಿರುವುದರಿಂದ ಇವರನ್ನು ಪ್ರತಿಯೊಂದು ನಗರ, ಪಟ್ಟಣ ಮತ್ತು ಹಳ್ಳಿಯಲ್ಲೂ ಕಾಣಬಹುದಾಗಿದೆ. ಈ ಕಾರಣದಿಂದಾಗಿ ಜಿಲ್ಲೆಯ ಬಹುತೇಕ ಗಣಿಸಂಸ್ಥೆಗಳಲ್ಲಿ ಅಂಗಡಿ, ಹೋಟೆಲ್ ಮತ್ತು ಹಣದ ಲೇವಾದೇವಿಗಾರ ಕೆಲಸಗಳೆಲ್ಲವೂ ತಮಿಳು ವಲಸಿಗರಿಂದ ಕೂಡಿವೆ. ಈ ಕಾರಣದಿಂದಾಗಿ ಗಣಿ ಕಾರ್ಮಿಕರು ತಮ್ಮ ದೈನಂದಿನ ವ್ಯವಹಾರಗಳ ಅನುಕೂಲಕ್ಕಾಗಿ ತಮಿಳು ಭಾಷೆಯಲ್ಲಿ ಸಂಭಾಷಿಸುವ ಪರಿಜ್ಞಾನವನ್ನು ಶೇಕಡ ೨೦ರಷ್ಟು ಕಾರ್ಮಿಕರು ಪಡೆದಿದ್ದಾರೆ. ಹಾಗೆಯೇ ಶೇಕಡ ೧೦ರಷ್ಟು ರಾಷ್ಟ್ರಭಾಷೆಯಾದ ಹಿಂದಿಯನ್ನು ತಿಳಿದವರಾಗಿದ್ದಾರೆ. ಆದರೆ ಹಿಂದಿಯಲ್ಲಿ ಮಾತನಾಡುವ ಇಲ್ಲವೆ ವ್ಯವಹಾರಿಸುವಷ್ಟು ಬೌದ್ಧಿಕ ಪ್ರೌಢಿಮೆಯನ್ನು ಹೊಂದಿರುವುದಿಲ್ಲ. ಕೊನೆಯದಾಗಿ ಬ್ರಿಟಿಷರ ಭಾಷೆ ಎಂದೇ ತಿಳಿದಿರುವ, ಆ ಭಾಷೆಯ ಗಂಧ ಗಾಳಿಯು ತಿಳಿಯದ ಇಂಗ್ಲೀಷ್‌ನ್ನು ಆಶ್ಚರ್ಯಕರವಾಗಿ ಕಾಣುವ, ಇಂಗ್ಲೀಷ್

ಮಾತನಾಡುವವರನ್ನು ಕುತೂಹಲದಿಂದ ನೋಡುವ ಪ್ರವೃತ್ತಿಯನ್ನು ಗಣಿ ಕಾರ್ಮಿಕರು ಬೆಳೆಸಿಕೊಂಡಿದ್ದಾರೆ. ಹೀಗೆ ಗಣಿ ಕಾರ್ಮಿಕರು ಎರಡು ಅಥವಾ ಮೂರು ಭಾಷೆಗಳನ್ನು ಕಲಿತಿದ್ದರೂ ಸಹ ಅವರ ದೈನಂದಿನ ಜೀವನಕ್ಕೆ ಅಗತ್ಯವಾದ ದುಡಿಮೆ, ಕೂಲಿ ಮತ್ತು ಆದಾಯದ ಹಿಂಬೀಳಿಕೆಗೆ ಕಾರಣಗಳೇನೆಂಬುದನ್ನು ಪತ್ತೆ ಹಚ್ಚುತ್ತಾ ಹೋದಂತೆ, ಬೇರೆ ಬೇರೆ ಕಾರಣಗಳು ಗಣಿ ಸಂಸ್ಥೆಗಳಲ್ಲಿ ಅಡಕವಾಗಿರುವುದನ್ನು ಮನಗಾಣಬಹುದು.

ಜಿಲ್ಲೆಯ ಪ್ರತಿಯೊಂದು ಗಣಿಸಂಸ್ಥೆಯಲ್ಲೂ ಪ್ರತ್ಯೇಕವಾಗಿ ಮಾಲೀಕರ ಭಾಷೆ, ಆಡಳಿತಾತ್ಮಕ ಭಾಷೆ ಹಾಗೂ ಕಾರ್ಮಿಕರ ಭಾಷೆಗಳೆಂಬ ಮಾದರಿಗಳಲ್ಲಿ ಭಾಷೆಯ ಬಳಕೆಯನ್ನು ವರ್ಗೀಕರಿಸಬಹುದು. ಜಿಲ್ಲೆಯಲ್ಲಿರುವ ಶೇಕಡ ೬೦ ರಷ್ಟು ಗಣಿ ಮಾಲೀಕರು ಹೊರರಾಜ್ಯಗಳಿಂದ ಬಂದವರಾಗಿದ್ದು, ಅವರಲ್ಲಿ ಹೆಚ್ಚಾಗಿ ಆಂಧ್ರಪ್ರದೇಶ, ರಾಜಸ್ಥಾನ, ಮಹಾರಾಷ್ಟ್ರ ಮತ್ತು ಗೋವಾ ರಾಜ್ಯಗಳಿಗೆ ಸೇರಿದವರಾಗಿರುವುದರಿಂದ, ಆಯಾ ರಾಜ್ಯಭಾಷೆಗಳು ಗಣಿಮಾಲೀಕರ ಮಾತೃಭಾಷೆಯೆಂದೆನಿಸಿಕೊಳ್ಳುತ್ತವೆ. ಅವರ ಆಡಳಿತ ಭಾಷೆ ಹಾಗೂ ವ್ಯವಹಾರಿಕ ಭಾಷೆಗಳೆಲ್ಲವೂ ಬೇರೆ ಬೇರೆಯಾಗಿವೆ. ಸಾಮಾನ್ಯವಾಗಿ ಗಣಿ ಮಾಲೀಕರ ಭಾಷೆಯು ಹೆಚ್ಚಾಗಿ "ಇಂಗ್ಲೀಷ್" ಮತ್ತು "ಹಿಂದಿ" ಭಾಷೆಯಾಗಿರುತ್ತದೆ. ಅವರೆಲ್ಲಾ ಕನ್ನಡವನ್ನು ಬಲ್ಲವರಾಗಿದ್ದರೂ ಅದು ಜಿಲ್ಲಾ ಮಟ್ಟದ ಹಾಗೂ ಸ್ಥಳೀಯ ಮಟ್ಟದಲ್ಲಿ ನಡೆಯುವ ವ್ಯವಹಾರಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಗಣಿಯ ಉತ್ಪಾದನೆ ಮತ್ತು ವಿತರಣೆಗೆ ಸಂಬಂಧಿಸಿದಂತೆ ಕಡ್ಡಾಯವಾಗಿ ಇಂಗ್ಲೀಷ್ ಹಾಗೂ ಹಿಂದಿ ಭಾಷೆಗಳು ಬಳಕೆಯಾಗುತ್ತವೆ.

ಹೀಗೆ ಗಣಿಮಾಲೀಕ, ವ್ಯವಸ್ಥಾಪಕ ಹಾಗೂ ಕಾರ್ಮಿಕರ ನಡುವೆ ಇರುವ ಭಾಷೆಯ ಅಂತರವು ಹತ್ತಾರು ಸಮಸ್ಯೆಗಳು ನಿರ್ಮಾಣಕ್ಕೆ ಅವಕಾಶಮಾಡಿಕೊಟ್ಟಿದೆ. ಹೇಗೆಂದರೆ ಗಣಿಮಾಲೀಕರಾಡುವ ಭಾಷೆ ಕಾರ್ಮಿಕರಿಗೆ ಗೊತ್ತಿಲ್ಲದ್ದ ಕಾರಣ, ತಮ್ಮ ದುಡಿಮೆಗೆ ಸಂಬಂಧಿಸಿದಂತೆ ಕೂಲಿಯ ಪ್ರಮಾಣ, ಕುಟುಂಬದ ಭದ್ರತೆ, ಆರೋಗದ ಸೌಲಭ್ಯ, ವಸತಿಗಳ ಸ್ವರೂಪ, ಸಾರಿಗೆ ವ್ಯವಸ್ಥೆ ಹಾಗೂ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ಇರುವ ಬೇರೆ, ಬೇರೆ ಸಮಸ್ಯೆಗಳನ್ನು ನೇರವಾಗಿ ಮಾಲೀಕರಿಗೆ ಮನವರಿಕೆ ಮಾಡಿಕೊಡಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ಆಡಳಿತ ಸಿಬ್ಬಂಧಿಯವರ ಸುಪರ್ಧಿಯಲ್ಲಿಯೇ ಕಾರ್ಮಿಕರು ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬೇಕಾಗಿರುವುದರಿಂದ, ಗಣಿ ಕಾರ್ಮಿಕರನ್ನು ಕಾಡುವ ಸಮಸ್ಯೆಗಳು ನಿರಂತರವಾಗಿ ಬೆಳೆಯುತ್ತಾ ಸಾಗಿವೆ. ಹಾಗೆಯೇ ಗಣಿ ಮಾಲೀಕರು ಮತ್ತು ವ್ಯವಸ್ಥಾಪಕ ವರ್ಗವು ಸಹ ತಮ್ಮ ಗೌರವ ಹಾಗೂ ಪ್ರತಿಷ್ಠೆಯನ್ನು (Dignity) ಬಿಟ್ಟು, ಸಂಸ್ಥೆಯ ಕಾರ್ಮಿಕರೊಂದಿಗೆ ಬೆರೆತು, ಅವರ ಸುಖ-ದುಃಖಗಳನ್ನು ಆಲಿಸದೇ ಅಂತರವನ್ನು ಕಾಯ್ದುಕೊಂಡು ಹೋಗುತ್ತಿರುವುದು ಅಥವಾ ಜಿಲ್ಲೆಯಲ್ಲಿರುವ ಗಣಿಸಂಸ್ಥೆಗಳ ವ್ಯವಸ್ಥಾಪಕ ಮಂಡಳಿಯು ಕಾರ್ಮಿಕ ಮತ್ತು ಮಾಲೀಕರ ನಡುವಿನ ಅಂತರವನ್ನು ಶಾಶ್ವತವಾಗಿರುವಂತೆ ನೋಡಿಕೊಂಡು ಹೋಗುವಂತೆ

ಅನುಸರಿಸುವ ಕುತಂತ್ರಗಳಿಂದಾಗಿ ಗಣಿ ಕಾರ್ಮಿಕರ ಸಮಸ್ಯೆಗಳಿಗೆ ಕೊನೆಯೆಂಬುದೇ ಇಲ್ಲವಾಗಿದೆ. ಈ ಸಮಸ್ಯೆಗಳಿಗೆ ಗಣಿಮಾಲಿಕ ಹಾಗೂ ಕಾರ್ಮಿಕರ ನಡುವಿನ ವ್ಯವಹಾರಿಕೆ ಭಾಷೆಯ ವ್ಯತ್ಯಾಸವು ಒಂದು ಕಾರಣವಾಗಿ ಪರಿಗಣಿಸುವುದು ಸೂಕ್ತವಾದೀತು.

ಗಣಿ ಸಂಸ್ಥೆಗಳು ಅನುಸರಿಸುವ ಆಡಳಿತಾತ್ಮಕ ಭಾಷೆಯು ಕಾರ್ಮಿಕರು ಬಳಸುವ ಭಾಷೆಯಾಗಿರದೇ ಅದು ಇಂಗ್ಲೀಷ್‌ನಲ್ಲಿರುತ್ತದೆ. ವ್ಯವಸ್ಥಾಪಕ ಸಿಬ್ಬಂಧಿಯು. ಹೊರಡಿಸುವ ಯಾವುದೇ ಆದೇಶ, ಸೂಚನೆ ಹಾಗೂ ಸೌಲಭ್ಯಗಳೆಲ್ಲವೂ ಇಂಗ್ಲೀಷ್‌ನಲ್ಲಿಯೇ ಜಾರಿಗೆ ಬರುವುದರಿಂದ ಅವುಗಳನ್ನು ತಿಳಿದುಕೊಳ್ಳುವ ಇಲ್ಲವೇ ಅರ್ಥಮಾಡಿಕೊಳ್ಳುವ ಶಿಕ್ಷಣ ಇಲ್ಲವೇ ಬೌದ್ಧಿ ತಿಳುವಳಿಕೆ ಗಣಿಕಾರ್ಮಿಕರಲ್ಲಿಲ್ಲ. ಹೀಗಾಗಿ ವ್ಯವಸ್ಥಾಪಕರಾಗಲೀ ಅಥವಾ ಸೂಪರ್‌ವೈಜರ್ಸ್‌ಗಳಾಗಲೀ ನೀಡಿದ, ಇಲ್ಲವೇ ಹೇಳಿದ ಸಂಗತಿಗಳು ಕಾರ್ಮಿಕರಿಗೆ ವೇದವಾಖ್ಯೆವಾಗುತ್ತವೆ. ಈ ಹಿನ್ನೆಲೆಯಲ್ಲಿ ವ್ಯವಹಾರಿಕ ಅಥವಾ ಪರಸ್ಪರ ಸಂಪರ್ಕದ ಭಾಷೆಯು ಒಂದೇಯಾಗಿದ್ದರೆ. ಯಾವುದೇ ರೀತಿಯ ಶೋಷಣೆಯಾಗಲೀ, ಸಮಸ್ಯೆಗಳಾಗಲೀ ಕಡಿಮೆಯೆಂದೇ ಹೇಳಬಹುದು. ಹೀಗಾಗಿ ಮಾಲೀಕ ಹಾಗೂ ಕಾರ್ಮಿಕರ ನಡುವೆ ನಿಕಟ ಸಂಬಂಧಕ್ಕೆ ಭಾಷೆ ದೊಡ್ಡದಾದ ತಡೆಗೋಡೆ ನಿರ್ಮಾಣ ಮಾಡಿದೆ ಎಂದೂ ಹೇಳಬಹುದು. ಭಾಷೆ ಎನ್ನುವಂತದ್ದು ಪರಸ್ಪರರ ನಿಕಟ ಸಂಪರ್ಕಕ್ಕೆ, ಭಾಂದವ್ಯದ ಬೆಳವಣಿಗೆಗೆ, ಸ್ನೇಹ, ಸಹಕಾರ ಮತ್ತು ಮಾನವನ ಸರ್ವತೋಮುಖ ಅಭಿವೃದ್ಧಿಗೆ ಸಹಾಯಕವಾದ ಮೆಟ್ಟಿಲಾಗಿರುತ್ತದೆ.

**ಭಾಷೆ, ಉದ್ಯೋಗ ಮತ್ತು ವೇತನ**

ಜಾಗತೀಕರಣದ ಇಂದಿನ ದಿನಗಳಲ್ಲಂತೂ ಭಾಷೆ ಮತ್ತು ಉದ್ಯೋಗಕ್ಕೆ ನೇರವಾದ ಸಂಬಂಧವಿದೆ. ಇಂದಿನ ಖಾಸಗೀಕರಣದ ಪರ್ವಕಾಲದಲ್ಲಿ ದೇಶದ ಪ್ರತಿಯೊಂದು ರಂಗದಲ್ಲೂ ಹತ್ತಾರು ಬೇರೆ, ಬೇರೆ ಬಹುರಾಷ್ಟ್ರೀಯ ಕಂಪನಿಗಳು ಉತ್ಪಾದನೆ ಹಾಗೂ ವಿತರಣೆಯಲ್ಲಿ ತೊಡಗಿರುವುದರಿಂದ ಸ್ಥಳೀಯ(ಪ್ರಾಂತೀಯ) ಭಾಷೆಗಳಿಗಿಂತ ಅಂತರಾಷ್ಟ್ರೀಯ ಭಾಷೆ ಹೆಚ್ಚು ಗೌರವಕ್ಕೆ, ಸನ್ಮಾನಕ್ಕೆ ಮತ್ತು ಅನುಕರಣೆಗೆ ಯೋಗ್ಯವಾಗಿ ಪರಿಗಣಿಸಲಾಗುತ್ತಿದೆ. ಇತ್ತೀಚಿನ ಒಂದು ವರದಿಯ ಅಂಕಿ-ಅಂಶಗಳ ಪ್ರಕಾರ ಪ್ರಪಂಚದಲ್ಲಿ ಯಾವ ಭಾಷೆಗೆ ಉದ್ಯೋಗವನ್ನು ದೊರಕಿಸಿಕೊಡುವ ಇಲ್ಲವೆ ಆದಾಯವನ್ನು ಕ್ರೋಢೀಕರಣ ಮಾಡುವ ಸಾಮರ್ಥ್ಯವಿದೆಯೋ, ಅಂತಹ ಭಾಷೆಗೆ ಮಾತ್ರ ಹೆಚ್ಚು ಸಮೃದ್ಧವಾಗಿ ಬೆಳೆಯುವ ಅವಕಾಶಗಳಿವೆ ಹಾಗೂ ಅವುಗಳು ದೀರ್ಘಕಾಲ ಉಳಿಯಲು ಸಾಧ್ಯ. ಈ ನಿಟ್ಟಿನಲ್ಲಿ ಜಾಗತೀಕರಣದ ಸನ್ನಿವೇಶದಲ್ಲಿ ಪ್ರಪಂಚದಲ್ಲಿರುವ ಸುಮಾರು ೧೫೦೦ಕ್ಕೂ ಹೆಚ್ಚು ಭಾಷೆಗಳು ಉದ್ಯೋಗವನ್ನೊದಗಿಸಿ ಕೊಡುವ ಸಾಮರ್ಥ್ಯವಿಲ್ಲದೆ ಅವಸಾನದ ಅಂಚಿನಲ್ಲಿವೆ ಎಂಬ ವರದಿಯ ಮಾಹಿತಿಯು ತುಂಬಾ ಕಳವಳಕಾರಿ. ಆದ್ದರಿಂದ ಯಾವುದೇ ಒಂದು ಶ್ರೀಮಂತ ಅಥವಾ ವ್ಯವಹಾರಿಕ ಭಾಷೆಗೆ ಉದ್ಯೋಗದ ಮೇಲಿರುವ ಹಿಡಿತವನ್ನು ಇದರಿಂದ ಮನಗಾಣಬಹುದು.

ಈ ಹಿನ್ನೆಲೆಯಲ್ಲಿ ಜಿಲ್ಲೆಯ ಗಣಿಗಾರಿಕೆಯು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಭಾಷೆಗಳಿಗೆ ಹೇಗೆ ಉನ್ನತ ಉದ್ಯೋಗ ಹಾಗೂ ಸ್ಥಾನಮಾನಗಳನ್ನು ನೀಡಿದೆ ಎಂಬುದನ್ನು ವಿ.ಎಸ್. ಲಾಡ್ ಮತ್ತು ಮಕ್ಕಳು ಕಂಪನಿಯಲ್ಲಿ ಕಂಡುಬಂದ ವಿವಿಧ ಹುದ್ದೆಗಳು ಹೇಗೆ ಭಾಷೆಯಿಂದ ಪ್ರಭಾವಿತಗೊಂಡಿವೆ ಎಂಬುದನ್ನು ಕೋಷ್ಟಕದಿಂದ ಕಾಣಬಹುದು. ಹೀಗಾಗಿ ಜಿಲ್ಲೆಯ ಯಾವುದೇ ಗಣಿ ಸಂಸ್ಥೆಯನ್ನು ತೆಗೆದುಕೊಂಡರೂ, ಆಯಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಉದ್ಯೋಗಿಗಳು ಹೆಚ್ಚಾಗಿ ಈ ಕೆಳಗಿನ ಕೋಷ್ಟಕದಲ್ಲಿ ನಮೋದಿತ ಭಾಷೆಗಳಲ್ಲಿ ಪ್ರಾವಿಣ್ಯತೆ ಹಾಗೂ ವಿದ್ಯಾಭ್ಯಾಸವನ್ನು ಪಡೆದವರಾಗಿದ್ದಾರೆ. ಇದನ್ನು ಕೋಷ್ಟಕ ೪.೨೯ರಿಂದ ತಿಳಿಯಬಹುದು.

**ಕೋಷ್ಟಕ ೪.೨೯**

**ಭಾಷೆಗಳ ಆಧಾರದ ಮೇಲೆ ವೇತನ ಹಾಗೂ ಹುದ್ದೆಗಳ ವರ್ಗೀಕರಣ**

| ಕ್ರ.ಸಂ. | ಭಾಷೆಗಳು | ಹುದ್ದೆಗಳು | ವೇತನದ ಪ್ರಮಾಣ |
|---|---|---|---|
| ೧. | ಕನ್ನಡ, ಇಂಗ್ಲಿಷ್ ಮತ್ತು ಹಿಂದಿ ಭಾಷೆಯಲ್ಲಿ ಪ್ರಭುತ್ವ ಹಾಗೂ ಅಗತ್ಯ ವಿದ್ಯಾರ್ಹತೆ | ೧. ಮಾಲೀಕ | ಲಾಭವನ್ನು ಆಧಾರಿಸಿದೆ. |
| | | ೨. ಮೈನ್ಸ್‌ಮೇನೇಜರ್ | ೧೨೦೦೦-೪೫೦೦೦ |
| | | ೩. ೨ಕ್ಲಾಸ್ ಮೇನೇಜರ್ | ೮೦೦೦-೧೫೦೦೦ |
| | | ೪. ಅಡ್ಮಿನಿಸ್ಟ್ರೇಟರ್ | ೮೦೦೦-೧೫೦೦೦ |
| | | ೫. ಅಕೌಂಟೆಂಟ್ | ೮೦೦೦-೧೨೦೦೦ |
| | | ೬. ಫೋರ್‌ಮನ್ | ೭೦೦೦-೧೨೦೦೦ |
| ೨. | ಕನ್ನಡ ಮತ್ತು ತೆಲುಗು ವಿದ್ಯಾರ್ಹತೆ ಹಾಗೂ ತಾಂತ್ರಿಕ ಪರಿಣಿತಿ | ಮೇಟ್ | ೩೦೦೦-೬೦೦೦ |
| | | ಸ್ಟಾರ್ಟರ್ಸ್ | ೨೦೦೦-೪೦೦೦ |
| | | ಬ್ಲಾಸ್ಟರ್ಸ್ | ೨೦೦೦-೩೦೦೦ |
| | | ಸೂಪರ್‌ವೈಜರ್ | ೧೫೦೦-೨೫೦೦ |
| | | ಡ್ರೈವರ್ಸ್, ಹೆಲ್ಪರ್ಸ್ | ೧೫೦೦-೩೦೦೦ |
| ೩. | ತೆಲುಗು - ಕನ್ನಡ ಅನಕ್ಷರಸ್ಥರು | ಲೇಬರ್ಸ್ | ೧೦೦೦-೨೦೦೦ |

ಆಧಾರ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

೪.೨೯ರ ಕೋಷ್ಟಕವು ಗಣಿಸಂಸ್ಥೆಯಲ್ಲಿರುವ ನೌಕರರು ಪಡೆದಿರುವ ವಿದ್ಯಾಭ್ಯಾಸ ಜೊತೆಗೆ ಆಯಾ ಭಾಷೆಗಳಲ್ಲಿ ಪಡೆದುಕೊಂಡಿರುವ ಪ್ರಾವಿಣ್ಯತೆಯ ಪರಿಣಾಮವಾಗಿ ಬೇರೆ, ಬೇರೆ ಹುದ್ದೆ ಹಾಗೂ ವೇತನ ಪಡೆದಿರುವುದನ್ನು ತೋರಿಸುತ್ತದೆ. ಮುಖ್ಯವಾಗಿ ಯಾವ ವ್ಯಕ್ತಿ, ಇಂಗ್ಲೀಷ್ ಹಾಗೂ ಹಿಂದಿ ಭಾಷೆಯಲ್ಲಿ ಶಿಕ್ಷಣವನ್ನು ಪಡೆದಿರುತ್ತಾನೋ ಅಂತವನಿಗೆ ಗಣಿಗಾರಿಕೆಯಲ್ಲಿ ಉನ್ನತ ಉದ್ಯೋಗಗಳು ಹಾಗೂ ಹೆಚ್ಚೋ ವೇತನವು ದೊರೆಯುತ್ತದೆ. ಇದಕ್ಕೆ ಕಾರಣವೇನೆಂದರೆ ಹೆಚ್ಚು ಹಣವುಳ್ಳವರಾಗಿದ್ದರೆ ಅಥವಾ ರಾಜಕೀಯವಾಗಿ ಬಲಿಷ್ಠನಾಗಿದ್ದರೆ, ಗಣಿಸಂಸ್ಥೆಯ ಮಾಲೀಕನಾಗಬಹುದು, ಇಲ್ಲವಾದರೆ, ಒಳ್ಳೆಯ ಶಿಕ್ಷಣ ಪಡೆದವರು ಮೇನೇಜರ್, ಪೋರ್‌ಮೆನ್, ಆಡ್ಮಿನಿಸ್ಟ್ರೇಟರ್ ಹಾಗೂ ಅಕೌಂಟೆಂಟ್ ಹುದ್ದೆಗಳು ಈ ಸಾಲಿನಲ್ಲಿ ಬರುತ್ತವೆ. ಈ ಎಲ್ಲಾ ಹುದ್ದೆಗಳಿಗೆ ಅವರು ಪಡೆದ ಶಿಕ್ಷಣ ಅನುಭವ ಹಾಗೂ ಭಾಷಾ ಕೌಶಲ್ಯಗಳ ಆಧಾರದ ಮೇಲೆ ವೇತನವು ಸುಮಾರು ರೂ. ೮,೦೦೦ ಗಳಿಂದ ಹಿಡಿದು ರೂ. ೪೫,೦೦೦ಗಳವರೆಗೆ ನಿಗದಿಯಾಗುತ್ತದೆ. ಜೊತೆಗೆ ಈ ವರ್ಗದವರಿಗೆ ವಸತಿ, ಬಡ್ತಿ, ವಾಹನ ಸೌಕರ್ಯ, ವೈದ್ಯಕೀಯ ಸೇವಾ ಸೌಲಭ್ಯಗಳು ಹೆಚ್ಚಾಗಿ ದೊರೆಯುತ್ತವೆ. ಹಾಗೆಯೇ ಕೇವಲ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣವನ್ನು ಪಡೆದುಕೊಂಡ ನೌಕರರ ಜೊತೆಗೆ ಅನಕ್ಷರಸ್ಥರು ಸೇರಿದಂತೆ ಕನ್ನಡ ಮತ್ತು ತೆಲುಗು ಭಾಷೆಗಳನ್ನು ಮಾತನಾಡುವವರು ಅಥವಾ ವಿದ್ಯಾಭ್ಯಾಸ ಹೊಂದಿದವರು ಕಡಿಮೆ ಸ್ಥಾನಮಾನಗಳ ಹುದ್ದೆಯನ್ನು ಮತ್ತು ಕಡಿಮೆ ವೇತನವನ್ನು ಪಡೆಯುವ ಮೂಲಕ ಕನಿಷ್ಠ ಸಾಮಾಜಿಕ ಸ್ಥಾನಮಾನಗಳನ್ನು ಪಡೆದುಕೊಳ್ಳುತ್ತಾರೆ. ಅವರೊಂದಿಗೆ ಗಣಿ ಮಾಲಿನ್ಯ ಪ್ರದೇಶದಲ್ಲಿ ಕಾರ್ಯನಿರ್ವಹಿಸುವ ಮೈನ್ಸ್ ಮೇಟ್‌ನಿಂದ ಹಿಡಿದು ಸ್ಟಾರ್ಟರ್ಸ್, ಬ್ಲಾಸ್ಟರ್ಸ್, ಸೂಪರ್‌ವೈಜರ್ಸ್, ಡ್ರೈವರ್ಸ್, ಹೆಲ್ಪರ್ಸ್, ಮತ್ತು ಲೇಬರ್ಸ್ ಕ್ಲಾಸ್‌ನಲ್ಲಿ ಬರುವವರ ವೇತನವು ೧೦೦೦ರೂ ಗಳಿಂದ ಹಿಡಿದು ರೂ.೬೦೦೦ಗಳ ವೇತನವನ್ನು ಪಡೆಯುತ್ತಾರೆ. ಈ ವರ್ಗದ ನೌಕರರಿಗೆ ವಸತಿ, ಮುಂಬಡ್ತಿ, ಬೋನಸ್, ಸಾರಿಗೆ ಇತ್ಯಾದಿಗಳ ಸೌಲಭ್ಯಗಳು ಕಡಿಮೆ. ಮುಖ್ಯವಾಗಿ ಚರ್ಚೆಗೆ ಒಳಪಡಬೇಕಾದ ಅಂಶವೇನೆಂದರೆ ಇಂಗ್ಲಿಷ್ ಹಾಗೂ ಹಿಂದಿ ಭಾಷೆಗಳಲ್ಲಿ ಶಿಕ್ಷಣವನ್ನು ಪಡೆಯಬೇಕಾದರೆ ಆರ್ಥಿಕವಾಗಿ ಬಲಿಷ್ಠರಾಗಿದ್ದು ಅವರು ಉನ್ನತ ಹಾಗೂ ತಂತ್ರಜ್ಞಾನವುಳ್ಳ ಶಿಕ್ಷಣವನ್ನು ಪಡೆದಾಗ ಮಾತ್ರ ಒಳ್ಳೆಯ ವೇತನ ಹಾಗೂ ಸಾಮಾಜಿಕ ಸ್ಥಾನಮಾನವು ಲಭ್ಯವಾಗಲು ಸಾಧ್ಯ. ಇಂತಹ ಶಿಕ್ಷಣದ ಸೌಲಭ್ಯವು ಸಮಾಜದಲ್ಲಿರುವ ಹಣ ಉಳ್ಳವರು, ಮೇಲ್ವರ್ಗ ಇಲ್ಲವೆ ಮೇಲ್ಜಾತಿಯ ಜನರಿಗೆ ಮಾತ್ರ ಸಾಧ್ಯವಿರುತ್ತದೆ. ಆದರೆ ನಮ್ಮ ವ್ಯವಸ್ಥೆಯಲ್ಲಿ ಶೇಕಡ ೮೦ರಷ್ಟು ಜನರು ಕೆಳಜಾತಿಗಳಿಗೆ ಸೇರಿದವರೂ ಹಾಗೂ ಆರ್ಥಿಕವಾಗಿ ದುರ್ಬಲರಾಗಿದ್ದಾರೆ. ಅವರೆಲ್ಲಾ ಸ್ಥಳೀಯ ಭಾಷೆಯಲ್ಲಿಯೇ ಶಿಕ್ಷಣ ಮತ್ತು ವ್ಯವಹಾರ ಮಾಡುವ ಸಾಮರ್ಥ್ಯವನ್ನು ಹೊಂದಿರುವುದರಿಂದ ಅಂತಹ ಕೆಲಸಗಾರರು ಕಡಿಮೆ ವೇತನ ಹಾಗೂ ಕೆಳಮಟ್ಟದ ಸಾಮಾಜಿಕ ಸ್ಥಾನಮಾನಗಳಲ್ಲಿ ತೃಪ್ತಿ ಹೊಂದಬೇಕಾಗಿದೆ.

**ಭಾಷೆ ಮತ್ತು ಶೋಷಣೆ**

ಗಣಿ ಸಂಸ್ಥೆಗಳಲ್ಲಿ ಕೆಲಸಮಾಡುವ ಕಾರ್ಮಿಕರು ವಿವಿಧ ಭಾಷೆಗಳನ್ನು ಮಾತನಾಡುತ್ತಿರುವುದರಿಂದ, ಉನ್ನತ ಹುದ್ದೆ ಹಾಗೂ ಹೆಚ್ಚೂ ವೇತನ ಪಡೆಯಲು ಕಾರಣವಾದ ಇಂಗ್ಲಿಷ್, ಹಿಂದಿಯಂತಹ ದ್ವಿಭಾಷಿ ಇಲ್ಲವೆ ಬಹು ಭಾಷಿಗಳು ಅರಿತಿರುವ ಬೇರೆ ಬೇರೆ ಭಾಷೆಗಳಿಂದಾಗಿ, ಕೆಳವರ್ಗದ ನೌಕರರನ್ನು ಭಾಷೆಯ ಆಧಾರದ ಮೇಲೆ ಈ ಕೆಳಗಿನ ಅಂಶಗಳ ಮೂಲಕ ಶೋಷಿಸಲು ಅವಕಾಶವಿರುತ್ತದೆ. ಅವುಗಳಲ್ಲಿ,

**ಅ. ಗಣಿ ಮಾಲೀಕರೊಂದಿಗೆ ಸಂಪರ್ಕದ ಕೊರತೆ :** ಜಿಲ್ಲೆಯಲ್ಲಿರುವ ಗಣಿ ಮಾಲೀಕರು ಹೆಚ್ಚಾಗಿ ಹೊರ ರಾಜ್ಯಗಳಿಗೆ ಸೇರಿದವರಾಗಿದ್ದು, ಆಯಾ ರಾಜ್ಯ ಭಾಷೆಗಳೊಂದಿಗೆ ಇಂಗ್ಲೀಷ್ ಹಾಗೂ ಹಿಂದಿಯನ್ನು ಪ್ರತಿಷ್ಠಿತ ಭಾಷೆಯನ್ನಾಗಿ ಪರಿಗಣಿಸಿದ್ದಾರೆ. ಗಣಿಯಲ್ಲಿರುವ ಸಾಮಾನ್ಯ ಕಾರ್ಮಿಕನಿಂದ ಹಿಡಿದು ಕೆಳಹಂತದ ನೌಕರರವರೆಗೆ ಸ್ಥಳೀಯ ಭಾಷೆಗಳಷ್ಟೇ ಗೊತ್ತಿರುವುದರಿಂದ, ಗಣಿ ಮಾಲೀಕರೊಂದಿಗೆ ಸಂಭಾಷಿಸುವ ಇಲ್ಲವೇ ಸಂವಾದದ ಮೂಲಕ ನೇರವಾಗಿ ಸಮಸ್ಯೆಗಳನ್ನು, ಮನವರಿಕೆ ಮಾಡಿಕೊಡಲು ಸಾಧ್ಯವಿಲ್ಲ. ಕಾರಣ ಕಾರ್ಮಿಕರು ದಿನನಿತ್ಯದ ತಮ್ಮ ದುಡಿಮೆಯಲ್ಲಿ ಇತರೇ ನೌಕರರಿಂದ ಶೋಷಣೆಗೆ ಈಡಾಗುವುದು ಸರ್ವೆಸಾಮಾನ್ಯವಾಗಿದೆ. ಇಂತಹ ಸಂದರ್ಭವನ್ನು ಬಳಸಿಕೊಂಡು ಸಂಸ್ಥೆಯ ಅಸಂತೃಪ್ತ ಆಡಳಿತ ವರ್ಗವು ಗಣಿ ಮಾಲೀಕರಿಗೆ ಸಂಸ್ಥೆಯಲ್ಲಿರುವ ಕಾರ್ಮಿಕರ ಬಗ್ಗೆ ತಪ್ಪು ಮಾಹಿತಿಗಳನ್ನು ನೀಡಿ ಅವರನ್ನು ಕೆಲಸದಿಂದ ತೆಗೆಯುವ, ಕಡಿಮೆ ಕೂಲಿ ನೀಡುವ ಮತ್ತು ಅನಾವಶ್ಯಕ ಕಾರಣಗಳಿಗೆ ಕಿರಿಕಿರಿಯನ್ನುಂಟುಮಾಡುವ ಕಾರ್ಯತಂತ್ರಗಳನ್ನು ಬಳಸಲು ಸಾಧ್ಯವಿದೆ.

**ಆ. ವ್ಯವಸ್ಥಾಪಕರೊಂದಿಗೆ ಸಂಪರ್ಕದ ಅಭಾವ :** ಗಣಿ ಮಾಲಿಕರಿದ್ದಂತೆ, ಆಯಾ ಸಂಸ್ಥೆಯ ವ್ಯವಸ್ಥಾಪಕ ವರ್ಗವು ಸಹ ಸ್ಥಳೀಯೇತರ ಭಾಷೆಯಲ್ಲಿ ಪ್ರೌಢಿಮೆಯನ್ನು ಹೊಂದಿದ್ದಾರೆ. ಸಾಮಾನ್ಯ ಕಾರ್ಮಿಕನು ತನ್ನ ಭಾಷೆಯ ಮೂಲಕ ಸಮಸ್ಯೆಯನ್ನು ಪ್ರತಿಪಾದಿಸುವ ಪರಿಜ್ಞಾನವನ್ನು ಪಡೆದಿಲ್ಲದ ಕಾರಣ ಸಂಸ್ಥೆಯ ಇತರ ಮಧ್ಯವರ್ತಿಗಳಿಂದ ಹಾಗೂ ವ್ಯವಸ್ಥಾಪಕ ವರ್ಗದಿಂದಲೂ ಸತತ ದೋಷರೋಷಣೆಗಳಿಗೆ ಈಡಾಗುತ್ತಾನೆ.

**ಇ. ದಾಖಲೆ ಪತ್ರಗಳ ಅರಿವಿಲ್ಲ :** ಗಣಿ ಸಂಸ್ಥೆಯ ವ್ಯವಹಾರಗಳೆಲ್ಲವೂ ಇಂಗ್ಲೀಷ್ ಭಾಷೆಯಲ್ಲಿಯೇ ವ್ಯವಹರಿಸಲ್ಪಡುತ್ತವೆ. ಸಾಮಾನ್ಯ ಅನಕ್ಷರಸ್ಥ ಹಾಗೂ ಅಲ್ಪ ಶಿಕ್ಷಣವನ್ನು ಹೊಂದಿರುವ ಕಾರ್ಮಿಕವರ್ಗವು ಗಣಿ ಸಂಸ್ಥೆಯಲ್ಲಿರುವ ಯಾವುದೇ ದಾಖಲೆ ಪತ್ರಗಳನ್ನು ಅರ್ಥೈಸಿಕೊಳ್ಳಲು ಸಾಧ್ಯವುಗುವುದಿಲ್ಲ. ಇಂತಹ ಸಂದರ್ಭವನ್ನು ಗಣಿ ಸಂಸ್ಥೆಯ ಕೆಲವು ಮಧ್ಯವರ್ತಿ ಮಹತ್ವಾಕಾಂಕ್ಷಿಗಳು ಕಡಿಮೆ ಕೂಲಿ ನೀಡಿ ಹೆಚ್ಚಿನ ಆದಾಯ ಪಡೆದುಕೊಳ್ಳಲು ಅವಕಾಶವಿರುತ್ತದೆ.

**ಈ. ಲೈಂಗಿಕ ದೌರ್ಜನ್ಯ :** ಭಾಷಾ ತಾರತಮ್ಯ ನೀತಿಯಿಂದಾಗಿ ಗಣಿಯಲ್ಲಿರುವ ಶಿಕ್ಷಿತ ಹಾಗೂ ಹೆಚ್ಚು ವೇತನವುಳ್ಳ, ಬೇರೆ, ಬೇರೆ ಭಾಷೆಗಳನ್ನು ಬಲ್ಲ ಕೆಲವು ನೌಕರರು ಕೇವಲ ಸ್ಥಳೀಯ ಭಾಷೆಯನ್ನಷ್ಟೇ ಬಲ್ಲ ಕಾರ್ಮಿಕರ ಮೇಲೆ ನಿಯಂತ್ರಣವನ್ನು ಸಾಧಿಸುವ, ಮತ್ತು ಸುಂದರ ಹಾಗೂ ಯೌವ್ವನದ ಮಹಿಳಾ ಕಾರ್ಮಿಕರನ್ನು ಲೈಂಗಿಕತೆಗೆ ಬಳಸಿಕೊಳ್ಳುವ ಅವಕಾಶ ಹೇರಳವಾಗಿರುತ್ತದೆ. ಒಂದು ವೇಳೆ ಕಂಪನಿಯ ಇತರ ನೌಕರರ ಇಂತಹ ಬೇಡಿಕೆಯನ್ನು ನಿರಾಕರಿಸಿದರೆ, ಮಹಿಳಾ ಕಾರ್ಮಿಕರು ತಮ್ಮ ಕೆಲಸವನ್ನು ಕಳೆದುಕೊಳ್ಳುವ ಸಂದರ್ಭಗಳು ಹೆಚ್ಚಾಗಿರುತ್ತವೆ. ಹೀಗೆ ಒಂದು ಪ್ರತಿಷ್ಠಿತ ಭಾಷೆಯ ವ್ಯತ್ಯಾಸದಿಂದಾಗಿ ಈ ಮೇಲಿನ ಕಾರಮಗಳಿಗಾಗಿ ಕೆಲವು ಗಣಿಗಳಲ್ಲಿ ಕಳೆದ ೨೦ ರಿಂದ ೩೦ ವರ್ಷಗಳಷ್ಟು ವಿವಿಧ ಸೇವೆಸಲ್ಲಿಸಿದ ಕಾರ್ಮಿಕರು ಜೀವನದ ಭದ್ರತೆಗೆ ಯಾವುದೇ ಸೌಲಭ್ಯಗಳಿಲ್ಲದೇ ನಿರ್ಗತಿಕರಾಗಿ ಜೀವನ ನಡೆಸುತ್ತಿದ್ದಾರೆ.

**ಭಾಷೆ ಮತ್ತು ಸಂಬಂಧ**

ಮೂಲತಃ ಗಣಿ ಕಾರ್ಮಿಕರು ಹೆಚ್ಚಾಗಿ ಆಂಧ್ರಪ್ರದೇಶದ ಗಡಿಭಾಗಗಳಿಂದ ವಲಸೆಬಂದವರು. ಹೀಗಾಗಿ ಅವರ ಮಾತೃಭಾಷೆ ತೆಲುಗು. ಅಂತಹ ಅನೇಕ ಕಾರ್ಮಿಕರು ಗಣಿಗಾರಿಕೆಯನ್ನೇ ತಮ್ಮ ಬದುಕಿಗೆ ಆಧಾರವಾಗಿ ನಂಬಿಕೊಂಡಿದ್ದಾರೆ. ಸುಮಾರು ಇಪ್ಪತ್ತು ಅಥವಾ ಮೂವತ್ತು ವರ್ಷಗಳಿಂದಲೂ ಇಲ್ಲಿಯೇ ನೆಲೆಸಿದ್ದಾರೆ. ಹೀಗಾಗಿ ಈ ಭಾಗದ ನಾಗರೀಕರಾಗಿ ಗುರುತಿನ ಚೀಟಿ. ರೇಷನ್‌ಕಾರ್ಡ್ ಹಾಗೂ ಮತದಾನದ ಹಕ್ಕನ್ನು ಕೆಲವರು ಪಡೆದುಕೊಂಡಿದ್ದಾರೆ. ಆದರೂ ಸಹ ಸ್ಥಳೀಯರು ಇವರನ್ನು ಹೊರಗಿನವರೆಂದೆ ಕರೆಯುವ, ಕಾಣುವ ಹಾಗೂ ಅವರೊಂದಿಗೆ ವ್ಯವಹರಿಸುವ ಗುಣಧರ್ಮಗಳು ಮಾತ್ರ ಹಾಗೆಯೇ ಮುಂದುವರೆದುಕೊಂಡು ಹೋಗುತ್ತಿವೆ. ಇಂತಹ ವಾತವರಣವು ವಲಸೆಬಂದ ಕಾರ್ಮಿಕರಲ್ಲಿ ತಮ್ಮ ಮಾತೃಭಾಷೆ ಮತ್ತು ಮಾತೃಪ್ರದೇಶದ ಬಗ್ಗೆ ವಿಶೇಷ ಆಸಕ್ತಿ ಹಾಗೂ ಕಾಳಜಿಯನ್ನು ವ್ಯಕ್ತಪಡಿಸುವಂತೆ ಮಾಡುತ್ತದೆ. ಈ ಹಿನ್ನೆಲೆಯಲ್ಲಿ ಗಣಿಯಲ್ಲಿರುವ ಕಾರ್ಮಿಕರ ಮಾತೃಭಾಷೆ ಯಾವುದು ಅವರ ಪ್ರಮಾಣ ಎಷ್ಟಿದೆ ಎಂಬುದನ್ನು ४.೩೦ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ४.೩೦**

**ಕಾರ್ಮಿಕರ ಮಾತೃಭಾಷೆಯ ವಿವರ**

| ಕ್ರ.ಸಂ. | ಮಾತೃಭಾಷೆಯ ವಿವರ | ಕನ್ನಡ | ತೆಲುಗು | ತಮಿಳು | ಹಿಂದಿ | ಇತರೆ | ಒಟ್ಟು |
|---|---|---|---|---|---|---|---|
| ೧. | ಕಾರ್ಮಿಕರ ಸಂಖ್ಯೆ | ೬೦ | ೧೨೦ | ೨೦ | -- | -- | ೨೦೦ |
| ೨. | ಶೇಕಡಾವಾರು | ೩೦ | ೬೦ | ೧೦ | -- | -- | ೧೦೦ |

ಮೂಲ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

೪.೩೦ರ ಕೋಷ್ಟಕವು ಗಣಿಯಲ್ಲಿರುವ ಕಾರ್ಮಿಕರ ಮಾತೃಭಾಷೆಯನ್ನು ತಿಳಿಸುತ್ತದೆ. ಶೇಕಡ ೬೦ರಷ್ಟು ಕಾರ್ಮಿಕರ ಮಾತೃಭಾಷೆ ತೆಲುಗು ಭಾಷೆಯಾಗಿದ್ದು, ಇವರು ಆಂದ್ರಪ್ರದೇಶ ಹಾಗೂ ಜಿಲ್ಲೆಯ ಗಡಿಪ್ರದೇಶಗಳಿಗೆ ಸೇರಿದವರಾಗಿದ್ದಾರೆ. ಹಾಗೆಯೇ ಶೇಕಡ ೩೦ರಷ್ಟು ಕಾರ್ಮಿಕರ ಮಾತೃಭಾಷೆ ಕನ್ನಡ ಎಂದೂ ಹೇಳುತ್ತಾರೆ. ಆದರೆ ಅವರಲ್ಲಿ ಕೆಲವರ ಭಾಷೆ ನಡುವಳಿಕೆಗಳೆಲ್ಲವು ಆಂದ್ರಶೈಲಿಯಲ್ಲಿದ್ದರೂ ಪ್ರಾದೇಶಿಕವಾಗಿ ದೊರೆಯುವ ಪ್ರಯೋಜನಗಳನ್ನು ಪಡೆಯುವ ಆಸೆಯಿಂದಾಗಿ ಇಲ್ಲವೆ ಪರಕೀಯರೆಂಬ ಕೀಳಿರಿಮೆಯಿಂದ ಮುಕ್ತಿಹೊಂದಲು ಕನ್ನಡವೇ ಮಾತೃಭಾಷೆ ಎಂದೂ ಹೇಳುವವರಿದ್ದಾರೆ. ಶೇಕಡ ೧೦ರಷ್ಟು ಗಣಿಕಾರ್ಮಿಕರು ಇತ್ತೀಚಿನ ಕೆಲವು ವರ್ಷಗಳ ಹಿಂದೆ ಗಣಿವೃತ್ತಿಯನ್ನು ಅರಸಿ ಬಂದವರಾಗಿದ್ದು ಅವರ ಮಾತೃಭಾಷೆ ತಮಿಳು ಎಂಬುದಾಗಿ ತಿಳಿದುಬರುತ್ತದೆ. ಈ ಮೇಲಿನ ಎಲ್ಲಾ ವಿವರಗಳನ್ನು ಲಂಬ ರೇಖಾಚಿತ್ರದ ಮೂಲಕ ನೋಡಿದಾಗ ಈ ಕೆಳಗಿನಂತೆ ಕಂಡುಬರುತ್ತದೆ.




ಈ ಮೇಲಿನ ಲಂಬರೇಖಾ ಚಿತ್ರವು ಗಣಿಯಲ್ಲಿರುವ ಕಾರ್ಮಿಕರ ಮಾತೃಭಾಷೆಯನ್ನು ಪ್ರಮಾಣವನ್ನು ತೋರಿಸುತ್ತದೆ. ರೇಖಾಚಿತ್ರದ OX ಅಕ್ಷಾಂಶವು ಗಣಿಯಲ್ಲಿರುವ ವಿವಿಧ ಭಾಷೆಗಳನ್ನು OY ರೇಖಾಂಶವು ಆಯಾ ಮಾತೃಭಾಷೆಯನ್ನಾಡುವ ಬೇರೆ ಬೇರೆ ಕಾರ್ಮಿಕರ ಪ್ರಮಾಣವನ್ನು ಪ್ರತಿನಿಧಿಸುತ್ತದೆ. ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡ ೨೦೦ ಗಣಿಕಾರ್ಮಿಕರಲ್ಲಿ ಸುಮಾರು ೬೦ ಕಾರ್ಮಿಕರು ಕನ್ನಡ ಭಾಷೆಯನ್ನು ಮಾತೃಭಾಷೆಯಲ್ಲಿ ವ್ಯವಹಾರಿಸುತ್ತಾರೆ. ಹಾಗೆಯೇ ೧೨೦ ಕಾರ್ಮಿಕರು ತಮ್ಮ ಕುಟುಂಬದೊಂದಿಗೆ ತೆಲುಗು ಭಾಷೆಯಲ್ಲಿ ವ್ಯವಹಾರಿಸುತ್ತಾರೆ. ಕೇವಲ ೨೦ರಷ್ಟು ಕಾರ್ಮಿಕರು ತಮಿಳು ಭಾಷೆಯಲ್ಲಿ ವ್ಯವಹರಿಸುತ್ತಾ, ತಮ್ಮ, ತಮ್ಮ ಮಾತೃಭಾಷೆಗಳಲ್ಲಿ ಪ್ರೀತಿ, ವಿಶ್ವಾಸ ಮತ್ತು ತೃಪ್ತಿಯನ್ನು ಕಾಣುತ್ತಾರೆ. ಗಣಿಯಲ್ಲಿ ದುಡಿಯುವ ಕೆಲವರು ಸ್ಥಳೀಯ ಸೌಲಭ್ಯ ಹಾಗೂ ವಿರೋಧಗಳಿಗೆ ಹೆದರಿ ತಮ್ಮ ಮಾತೃಭಾಷೆಯನ್ನು ಮರೆಮಾಚಿದರೂ, ಅವರ ಕುಟುಂಬದೊಂದಿಗೆ ಹಾಗೂ ಆತ್ಮೀಯರೊಂದಿಗೆ ಬೆರೆತಾಗ ಮತ್ತು ಪರಸ್ಪರ ವ್ಯವಹರಿಸುವಾಗ ಹೆಚ್ಚಾಗಿ ಮಾತೃಭಾಷೆಯನ್ನೇ ಬಳಸುವುದನ್ನು ಕಾಣುತ್ತೇವೆ.

ಗಣಿ ಕಾರ್ಮಿಕರ ಮಾತೃಭಾಷೆ ಮತ್ತು ಅವರೊಂದಿಗೆ ನೆರೆ ಹೊರೆಯವರ ಸಂಬಂಧ ಹೇಗಿದೆ? ಎಂಬುದನ್ನು ಪರಿಶೀಲಿಸುವುದಾದರೆ, ಗಣಿಕಾರ್ಮಿಕರು ಹೆಚ್ಚಾಗಿ ವಲಸೆಬಂದವರಾಗಿದ್ದೂ, ಈ ಭಾಗದಲ್ಲಿಯೇ ಸುಮಾರು ಹತ್ತರಿಂದ ಇಪ್ಪತ್ತೈದು, ಮೂವತ್ತು ವರ್ಷಗಳವರೆಗೆ ಜಿಲ್ಲೆಯಲ್ಲಿಯೇ ನೆಲೆಸಿದ್ದಾರೆ. ಹೀಗಾಗಿ ಆಯಾ ಪ್ರದೇಶಗಳಲ್ಲಿರುವ ತಮ್ಮ ತಮ್ಮ ಜಾತಿಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದಾರೆ. ಸ್ಥಳೀಯರೊಂದಿಗಿನ ಪರಸ್ಪರ ಗಾಢವಾದ ಸಂಬಂಧದಿಂದಾಗಿ, ಇಲ್ಲಿಯ ಭಾಷೆ, ವೇಷಭೂಷಣ ಹಬ್ಬಹರಿದಿನಗಳನ್ನು ಆಚರಿಸುತ್ತಾರೆ. ತಮ್ಮ ರಕ್ತ ಸಂಬಂಧವನ್ನು ವೃದ್ಧಿಗೊಳಿಸಿಕೊಳ್ಳುತ್ತಾ, ಈ ಭಾಗದ ವಿವಿಧ ಪ್ರದೇಶಗಳನ್ನೇ ತಮ್ಮ ಮೂಲನೆಲೆಯನ್ನಾಗಿ ಕಂಡುಕೊಳ್ಳುವ ಪ್ರಯತ್ನದಲ್ಲಿದ್ದಾರೆ. ಕೆಲವು ಕಾರ್ಮಿಕರು ತಮ್ಮ ದುಡಿಮೆಯಿಂದ ಈ ಭಾಗದಲ್ಲಿಯೇ ಸ್ಥಿರ ಮತ್ತು ಚರ ಸ್ವರೂಪದಲ್ಲಿ ಕೆಲವು ಆಸ್ತಿಗಳನ್ನು ಮಾಡಿಕೊಂಡಿದ್ದಾರೆ. ಆದರೂ ಸಹ ಕೆಲವೊಮ್ಮೆ ಮಾತೃಭಾಷೆಯ ಕಾರಣದಿಂದಾಗಿ ಸ್ಥಳೀಯ ಜನರ ತಿರಸ್ಕಾರ ಹಾಗೂ ವಿರೋಧವನ್ನು ಎದುರಿಸಬೇಕಾದ ಸಂದರ್ಭಗಳನ್ನು ಕಂಡಾಗ, ಸ್ಥಳೀಯ ಭಾಷೆಯ ಐಕ್ಯತೆ ಮತ್ತು ತಿರಸ್ಕಾರದ ಧೋರಣೆಗಳಿಂದಾಗಿ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ ಎಂಬುದನ್ನು ಹಗುರವಾಗಿ ಪರಿಗಣಿಸುವಂತಿಲ್ಲ.

**ಭಾಷೆ - ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳ ನಿರ್ಧಾರ**

ಈಗಾಗಲೇ ಒಂದು ಪ್ರತಿಷ್ಠಿತ ಭಾಷೆಯು ಗಣಿಸಂಸ್ಥೆಯಲ್ಲಿ ಉನ್ನತ ಹುದ್ದೆಗಳನ್ನು ಹಾಗೂ ಅತ್ಯಧಿಕ ವೇತನಕ್ಕೆ ಕಾರಣವಾದ ಅಂಶಗಳನ್ನು ತಿಳಿದಿದ್ದೇವೆ. ಪ್ರಸ್ತುತ ಸಮಾಜದಲ್ಲಿ ಭಾಷೆಯು ಹೇಗೆ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳ ನಿರ್ಧಾರದಲ್ಲಿ ಪ್ರಮುಖ ಮಾನದಂಡವಾಗಿ ಕಾರ್ಯನಿರ್ವಹಿಸುತ್ತಿದೆ ಎಂಬುದನ್ನು ಪರಿಶೀಲಿಸಿದಾಗ, ಆಧುನೀಕರಣವು ದೃಶ್ಯಮಾಧ್ಯಮ, ಶ್ರವಣ ಮಾಧ್ಯಮ ಮತ್ತು ಮುದ್ರಣ ಮಾಧ್ಯಮಗಳ ಮೂಲಕ ವ್ಯಾಪಕವಾಗಿ ವಿಸ್ತಾರಗೊಂಡಿದೆ. ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಭಾಷೆಗಳಿಗೆ ಸಮಾಜದ ಮುಖ್ಯವಾಹಿನಿಯಲ್ಲಿ ಗೌರವಾಧಾರಗಳು ದೊರೆಯುತ್ತವೆ.

ಇಂದಿನ ಸಮಾಜದಲ್ಲಿ ಜನರ ನಡುವಳಿಕೆಗಳು "ದುಡ್ಡೇ ದೊಡ್ಡಪ್ಪ" ಎಂಬ ತತ್ವದಡಿಯಲ್ಲಿ ನಿರ್ಧರಿಸಲ್ಪಡುತ್ತಿವೆ. ಹೆಚ್ಚೂ ಆದಾಯವನ್ನು ಹೊಂದಿರುವ ಹಾಗೂ ಶ್ರೀಮಂತ ವ್ಯಕ್ತಿಗೆ ಸಮಾಜದಲ್ಲಿ ಅತ್ಯದಿಕ ಗೌರವಾಧರಗಳು ದೊರೆಯುತ್ತಿವೆ. ಇಂತಹ ಸನ್ನಿವೇಶಗಳಿಂದ ಜಿಲ್ಲೆಯ ಗಣಿಕ್ಷೇತ್ರವು ಹೊರತಾಗಿಲ್ಲ. ಯಾವುದೇ ಗಣಿ ಸಂಸ್ಥೆಯಲ್ಲಿ ಉನ್ನತ ಹುದ್ದೆ ಹಾಗೂ ಹೆಚ್ಚು ವೇತನ ಪಡೆಯುವ ನೌಕರರನ್ನು ತುಂಬಾ ಗೌರವಯುತವಾಗಿ ಕಾಣುವ ಸನ್ನಿವೇಶವು ಸೃಷ್ಠಿಯಾಗಿದೆ. ಅಂತಹ ಕೆಲಸಗಾರರನ್ನು ಸಂಸ್ಥೆಯ ವ್ಯವಸ್ಥಾಪಕರು ಮತ್ತು ಗಣಿಮಾಲೀಕರು ತುಂಬಾ ಗೌರವದಿಂದ ಸತ್ಕರಿಸುವ ಮೂಲಕ ಗಣಿ ಸಂಸ್ಥೆಯ ಹತ್ತಾರು ಜವಾಬ್ದಾರಿಗಳನ್ನು ಹೆಚ್ಚುವರಿಯಾಗಿ ವಹಿಸಿಕೊಡುತ್ತಾರೆ. ಇದರಿಂದ

ಅವರ ವೇತನ ಹಾಗೂ ಆದಾಯವು ಹೆಚ್ಚಾಗುತ್ತಾ ಹೋದಂತೆ. ಸಮಾಜದಲ್ಲಿ ಅವರಿಗೆ ಉನ್ನತ ಸ್ಥಾನ ಮಾನಗಳು ದೊರಕುತ್ತವೆ. ಗಣಿಸಂಸ್ಥೆಯಲ್ಲಿ ಆಡಳಿತಾತ್ಮಕ ಬಹುಭಾಷಿಕರಿಗೆ ರಜೆ ಸೌಲಭ್ಯ, ಪ್ರವಾಸ ಸಾರಿಗೆ ಸೌಲಭ್ಯ, ವಸತಿ ಸೌಲಭ್ಯ, ಮುಂಬಡ್ತಿ ಹಾಗೂ ವೈದ್ಯಕೀಯ ಸೌಲಭ್ಯಗಳನ್ನು ಅತ್ಯಂತ ಸರಳವಾಗಿ, ಸಹಜವೆಂಬಂತೆ ಸಂಸ್ಥೆಯು ಒದಗಿಸುವುದನ್ನು ಕಂಡಾಗ ಒಂದು ಭಾಷೆಯು ಹೇಗೆ ಅಧಿಕಾರ ಮತ್ತು ಆದಾಯವನ್ನು ಪಡೆದುಕೊಳ್ಳುವಲ್ಲಿ ಸಮರ್ಥವಾಗಿದೆ ಎಂಬುದನ್ನು ಅರ್ಥೈಯಿಸಿಕೊಳ್ಳಬಹುದು.

ನಮ್ಮ ಸುತ್ತಲಿನ ಸಮಾಜದಲ್ಲಿ ಅಧಿಕಾರ ಹಾಗೂ ಆದಾಯವೊಂದಿದ್ದರೆ ಹೇಗೆ ಸಾಮಾಜಿಕ ಮತ್ತು ರಾಜಕೀಯ ಸ್ಥಾನ ಮಾನಗಳು ಬೆನ್ನಟ್ಟಿಕೊಂಡು ಬರುತ್ತವೆ ಎಂಬುದಕ್ಕೆ ಜಿಲ್ಲೆಯ ಗಣಿಮಾಲೀಕರ ಸ್ಥಾನಗಳೇ ಸಾಕ್ಷಿಯಾಗಿ ನಿಲ್ಲುತ್ತವೆ. ಇದಕ್ಕೆ ಉದಾಹರಣೆಯಾಗಿ ಬಳ್ಳಾರಿ ಜಿಲ್ಲೆಯಲ್ಲಿ ಕಳೆದ ೨೦೦೪ನೇ ವರ್ಷ ನಡೆದ ಲೋಕಸಭೆ ಹಾಗೂ ರಾಜ್ಯವಿಧಾನಸಭಾ ಚುನಾವಣೆಗಳಲ್ಲಿ ಅಧಿಕಾರ ಪಡೆದವರ ವಿವರಗಳನ್ನು ೪.೩೧ರ ಕೋಷ್ಟಕದಿಂದ ತಿಳಿದುಬರುತ್ತದೆ.

**ಕೋಷ್ಟಕ ೪.೩೧ : ಬಳ್ಳಾರಿ ರಾಜಕೀಯದಲ್ಲಿ ಗಣಿಮಾಲೀಕರ ವಿವರ**

| ಕ್ರ. ಸಂ. | ಜನ ಪ್ರತಿನಿಧಿಗಳ ಹೆಸರು | ರಾಜಕೀಯ ಪಕ್ಷ | ಆಯ್ಕೆಗೊಂಡ ಕ್ಷೇತ್ರ | ಮೈನಿಂಗ್ ಕಂಪನಿಯ ಹೆಸರು |
|---|---|---|---|---|
| ೧. | ಜಿ.ಕರುಣಾಕರ ರೆಡ್ಡಿ | ಬಿ.ಜೆ.ಪಿ. | ಲೋಕಸಭೆ ಬಳ್ಳಾರಿ | ಓಬಳಾಪುರಂ ಐರನ್ ಓರ್ ಮೈನಿಂಗ್ ಕಂಪನಿ |
| ೨. | ಶ್ರೀರಾಮುಲು | ಬಿ.ಜೆ.ಪಿ. | ವಿಧಾನಸಬೆ ಬಳ್ಳಾರಿ | ಓಬಳಾಪುರಂ ಐರನ್ ಓರ್ ಮೈನಿಂಗ್ ಕಂಪನಿ |
| ೩. | ಎನ್. ಸೂರ್ಯ ನಾರಾಯಣರೆಡ್ಡಿ | ಜಾತ್ಯಾತೀತ ಜನತಾದಳ | ವಿಧಾನಸಭೆ ಕುರುಗೋಡು | ಶ್ರೀ ರಾಘವೇಂದ್ರ ಗ್ರಾನೈಟ್ ಎಂಟರ್ ಪ್ರೈಸಸ್ |
| ೪. | ಸಂತೋಷ ಎಸ್. ಲಾಡ್ | ಜಾತ್ಯಾತೀತ ಜನತಾದಳ | ವಿಧಾನಸಭೆ ಸಂಡೂರು | ವ್ಹಿ.ಎಸ್.ಲಾಡ್ ಅಂಡ್ ಸನ್ಸ್ ಐರನ್ ಓರ್ ಕಂಪನಿ |
| ೫. | ಅನಿಲ್ ಎಚ್. ಲಾಡ್ | ಬಿ.ಜೆ.ಪಿ. | ವಿಧಾನಸಭೆ ಕೂಡ್ಲಿಗಿ | ಅನೀಲ್ ಐರನ್ ಓರ್ ಮೈನಿಂಗ್ ಕಂಪನಿ |
| ೬. | ಹೆಚ್.ಆರ್. ಗವಿಯಪ್ಪ | ಕಾಂಗ್ರೆಸ್ಸ್ | ವಿಧಾನಸಭೆ ಹೊಸಪೇಟೆ | ಹೆಚ್.ಆರ್.ಜಿ.ಅಂಡ್ ಸನ್ಸ್ ಐರನ್ ಓರ್ ಕಂಪನಿ. |

೪.೩೧ರ ಕೋಷ್ಟಕವು ಬಳ್ಳಾರಿ ಜಿಲ್ಲೆಯ ಶೇಕಡ ೮೦ ರಷ್ಟು ರಾಜಕೀಯ ಅಧಿಕಾರವನ್ನು ಪಡೆದುಕೊಂಡ ಗಣಿಮಾಲೀಕರ ವಿವರಗಳನ್ನು ತಿಳಿಸುತ್ತದೆ. ಹೀಗಾಗಿ ಸಮಾಜದಲ್ಲಿ ಹಣವೊಂದಿದ್ದರೆ ಸಾಕು ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಸ್ಥಾನಮಾನಗಳು ಸುಲಭವಾಗಿ ಲಭ್ಯವಾಗುವುದನ್ನು

ಜಾಗತೀಕರಣದ ಪರಿಣಾಮಗಳಲ್ಲೊಂದು ಎಂಬುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಜೊತೆಗೆ ಮೇಲ್ಕಾಣಿಸಿದವರಲ್ಲಿ ಹೆಚ್ಚಾಗಿ ಇಂಗ್ಲಿಷ್, ಹಿಂದಿ, ತೆಲುಗು, ಮರಾಠಿ ಭಾಷೆಗಳನ್ನು ಬಲ್ಲವರಾಗಿದ್ದಾರೆ. ಇದರಿಂದ ಭಾಷೆಯು ಉನ್ನತ ಅಧಿಕಾರಗಳನ್ನು ಪಡೆಯುವಲ್ಲಿ ಹೇಗೆ ಸಮರ್ಥವಾಗಿದೆ ಎಂಬುದನ್ನು ಮನಗಾಣಬಹುದು. ಅಲ್ಲದೆ ಅಂತರಾಷ್ಟ್ರೀಯ ಭಾಷೆಯಲ್ಲಿ ವ್ಯವಹರಿಸುವ ಪ್ರತಿಯೊಬ್ಬ ವ್ಯಕ್ತಿಗೂ ಸಮಾಜದಲ್ಲಿ ಗೌರವದ ಸ್ಥಾನಮಾನಗಳು ಸಾಧ್ಯ. ಇದಕ್ಕೆ ೧೯೮೮ರ ಚುನಾವಣೆಯಲ್ಲಿ ಕಾರ್ಮಿಕ ಸಂಘಟನೆಯ ಮುಖಂಡರಾದ ಯು. ಭೂಪತಿಯವರು ಸಮಾಜದ ಅತ್ಯಂತ ಕೆಳವರ್ಗದಿಂದ ಬಂದ ಉಪ್ಪಾರ ಜಾತಿಯವನಾಗಿದ್ದರೂ, ಅವರಲ್ಲಿದ್ದ ಭಾಷೆಯ ಪ್ರೌಢಿಮೆಯಿಂದಲೇ ಶಾಸಕನಾಗಿ ಆಯ್ಕೆಯಾಗಲು ಸಾಧ್ಯವಾಯಿತು. ಜೊತೆಗೆ ದಿವಂಗತ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರಿಂದ ಶ್ರೇಷ್ಠ ವಾಕ್‌ಚಾತುರ್ಯವುಳ್ಳ ಶಾಸಕ ಎಂಬ ಬಿರುದನ್ನು ಕೊಟ್ಟು ಗೌರವಿಸಿದ್ದಾರೆ.

ಭಾಷೆ ಕೇವಲ ಒಬ್ಬರಿಂದ ಮತ್ತೊಬ್ಬರಿಗೆ ಸಂಹವನ ಮಾಧ್ಯಮವಾಗಿರದೇ ಅದು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಾನಮಾನಗಳ ನಿರ್ಧಾರಕವಾಗಿ ಕಾರ್ಯನಿರ್ವಹಿಸಬಲ್ಲದು. ಈ ಹಿನ್ನೆಲೆಯಲ್ಲಿಯೇ ಭಾರತದಲ್ಲಿ ಪ್ರಾಥಮಿಕ ಹಂತದಿಂದಲೇ ಇಂಗ್ಲೀಷ್ ಭಾಷೆಯ ಕಲಿಕೆಗೆ ಸಂಬಂಧಿಸಿದಂತೆ ವಾದ ವಿವಾದಗಳು ಇತ್ತೀಚೆಗೆ ಭರದಿಂದ ಸಾಗಿವೆ. ಆದರೆ ಗಣಿಯಲ್ಲಿರುವ ಬುಡಕಟ್ಟು ಕಾರ್ಮಿಕರು ಹೆಚ್ಚಾಗಿ ಅನಕ್ಷರಸ್ಥರಾಗಿದ್ದು, ತೆಲುಗು ಮೂಲದ ವಲಸಿಗರಾಗಿರುವುದರಿಂದ ಆಡಳಿತಾತ್ಮಕ ಭಾಷೆಯಲ್ಲಿ ವ್ಯವಹರಿಸುವ ಸಾಮರ್ಥ್ಯವನ್ನು ಪಡೆದಿಲ್ಲದ ಕಾರಣ ಕಡಿಮೆ ಕೂಲಿ, ಅತಂತ್ರದುಡಿಮೆ, ಕಡಿಮೆ ಆದಾಯ, ಕೆಳಮಟ್ಟದ ಸಾಮಾಜಿಕ ಹಾಗೂ ಆರ್ಥಿಕ ಸ್ಥಾನಮಾನಗಳಲ್ಲಿ ತೃಪ್ತಿ ಹೊಂದಬೇಕಾಗಿದೆ.

### ೪.೭. ಶಿಕ್ಷಣ

ಬೌದ್ಧಿಕ ತಿಳುವಳಿಕೆಯ ಜೊತೆಗೆ ಮಾನಸಿಕ ಹಾಗೂ ದೈಹಿಕ ಸಾಮರ್ಥ್ಯಗಳ ಸರ್ವಾಂಗೀಣ ಅಭಿವೃದ್ಧಿಗಾಗಿ ಶಿಕ್ಷಣದ ತಿಳುವಳಿಕೆಯು ಅತ್ಯವಶ್ಯಕ. ಸ್ವಾತಂತ್ರ ಪೂರ್ವದಿಂದಲೂ ಇಂದಿನವರೆಗೆ ಭಾರತೀಯರ ನಡೆ-ನುಡಿ ವಿಚಾರಗಳೆಲ್ಲವೂ ಸಾಮಾಜಿಕ ಮತ್ತು ಧಾರ್ಮಿಕ ನೀತಿ ನಿಯಮಗಳಿಂದ ನಿರ್ಧರಿಸಲ್ಪಡುತ್ತಿವೆ. ಆದರೆ ಭಾರತದ ಮೇಲಿನ ಬ್ರಿಟಿಷರ ಆಳ್ವಿಕೆಯು ಒಂದು ರೀತಿಯಲ್ಲಿ ಭಾರತೀಯ ಸಮಾಜದ ಮೇಲೆ ಅಗಾಧವಾದ ಪರಿಣಾಮವನ್ನುಂಟು ಮಾಡಿ, ಜನಸಮುದಾಯಗಳಲ್ಲಿ ಮಾನಸಿಕ ಬದಲಾವಣೆಗೆ ಪೂರಕವಾದ ಮನೋಭೂಮಿಕೆಯನ್ನು ಹುಟ್ಟುಹಾಕುವಲ್ಲಿ ಯಶಸ್ವಿಯಾಗಿದೆ. ಹೇಗೆಂದರೆ ಕೆಲವೇ ಜಾತಿಗಳಿಗೆ ಸೀಮಿತವಾಗಿದ್ದ ಸಂಪ್ರಾದಾಯಿಕ ಶಿಕ್ಷಣದ ಸೌಲಭ್ಯವೂ ಇಂಗ್ಲಿಷ್ ಶಿಕ್ಷಣದೊಂದಿಗೆ ಸಮ್ಮಿಳಿತಗೊಂಡ ಸರ್ವರಿಗೂ ಸುಲಭವಾಗಿ ದೊರಕಲು ಸಾಧ್ಯವಾಯಿತು. ಇಂತಹ ಕ್ರಮವು ಹೆಚ್ಚು ಜನಾ ಆಕರ್ಷಣೆ ಮತ್ತು ಜನಸಮುದಾಯಗಳ ಸಹಭಾಗಿತ್ವಕ್ಕೆ ಹಾಗೂ ಅನುಕರಣೆಗೆ

ಯೋಗ್ಯವೆಂದೂ ಪರಿಗಣಿಸಲ್ಪಟ್ಟಿತು. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಭಾರತವು ಶಿಕ್ಷಣದ ವಿಸ್ತರಣೆಗೆ ಪೂರಕವಾದ ನೂರಾರು ಕಾರ್ಯಯೋಜನೆಗಳನ್ನು ಜಾರಿಗೊಳಿಸಿದೆ.

ಆಧುನಿಕ ಹಾಗೂ ತಾಂತ್ರಿಕ ಯುಗದಲ್ಲಿ ಶಿಕ್ಷಣಕ್ಕೆ ಅತೀ ಹೆಚ್ಚು ಪ್ರಾಮುಖ್ಯತೆ ಲಭ್ಯವಾಗುತ್ತಿದೆ. ಜಾಗತೀಕರಣದ ಸಂದರ್ಭದಲ್ಲಂತೂ ಈ ಹಿಂದಿನ ಶಿಕ್ಷಣದ ರೂಪರೇಷೆಗಳಲ್ಲವೂ ಬದಲಾವಣೆಗೊಳಪಟ್ಟಿವೆ ಪ್ರಸ್ತುತ ಸನ್ನಿವೇಶದಲ್ಲಿ ಸಂಪ್ರಾದಾಯಿಕ ಶಿಕ್ಷಣಕ್ಕಿಂತಲೂ ತಾಂತ್ರಿಕ ಶಿಕ್ಷಣವು ಮೇಲುಗೈ ಸಾಧಿಸುತ್ತಿರುವುದರಿಂದ ಶಿಕ್ಷಣವು ಉಳ್ಳವರ ಪಾಲಾಗುತ್ತಿದೆ. ಇದರ ಜೊತೆಗೆ ಶಿಕ್ಷಣದ ಸ್ವರೂಪವನ್ನು ಪ್ರತ್ಯೇಕಿಸುವ ಮತ್ತು ಮತೀಯ ಆಧಾರದ ಮೇಲೆ ಶಿಕ್ಷಣವನ್ನು ಭೋದಿಸುವ ಮೂಲಕ ಪರಸ್ಪರ ಶಾಂತಿ ಸೌಹಾರ್ದತೆಯನ್ನು ಹೊಸಕಿಹಾಕುವ ಹುನ್ನಾರಗಳು ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯನಿರತಗೊಂಡಿವೆ. ಇಂದು ನಮ್ಮ ದೇಶವು ಬಹುರಾಷ್ಟ್ರೀಯ ಕಂಪನಿಗಳ ಹಿತಾಸಕ್ತಿಗೆ ಒಳಗಾಗಿರುವುದರಿಂದ ಈ ಹಿಂದೆ ಭಾರತ ಸಂವಿಧಾನದ ಪ್ರಸ್ತಾವನೆಯಲ್ಲಿ ಘೋಷಿಸಲ್ಪಟ್ಟಿದ "ಭಾರತದ ಸಮಸ್ತ ನಾಗರಿಕರಾದ ನಾವುಗಳು, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ, ನ್ಯಾಯ ವಿಚಾರ, ಅಭಿವ್ಯಕ್ತಿ, ನಂಬಿಕೆ, ಧರ್ಮ ಮತ್ತು ಉಪಾಸನಾ ಸ್ವಾತಂತ್ರ್ಯ, ಸ್ಥಾನಮಾನ ಹಾಗೂ ಅವಕಾಶಗಳಲ್ಲಿ ಸಮಾನತೆಯನ್ನು ಭಾರತೀಯ ನಾಗರಿಕತೆಗೆ ದೊರೆಯುವಂತೆ ವ್ಯಕ್ತಿಗೌರವ ಮತ್ತು ರಾಷ್ಟ್ರದ ಏಕತೆಯನ್ನು ಖಚಿತಪಡಿಸುವಂಥ ಭಾತೃ ಭಾವನೆಯನ್ನು ಎಲ್ಲರಲ್ಲೂ ಬೆಳೆಸುವ ಧೃಡಸಂಕಲ್ಪದಿಂದ ಸಂವಿಧಾನದವನ್ನು ಅಂಗೀಕರಿಸಿ ೧೯೪೯ರ ನವೆಂಬರ್ ೨೬ರಂದು ನಮ್ಮ ಸಂಸತ್ತಿನಲ್ಲಿ ಅಧಿನಿಯಮಿಸಿ ದೇಶಕ್ಕೆ ಅರ್ಪಿಸಿಕೊಂಡಿದ್ದೇವೆ"[೭] ಎಂಬ ಸಂವಿಧಾನದ ಉದಾತ್ತತೆಯಿಂದಾಗಿ ಈಡೀ ವಿಶ್ವಕ್ಕೆ ಭಾರತದ ಸಂವಿಧಾನವು ಮಾದರಿಯಾಗಿ ಪರಿಗಣಿತವಾಗುತ್ತದೆ. ಆದರೆ ಇತ್ತೀಚಿನ ದಿನಮಾನಗಳಲ್ಲಿ ನಮ್ಮನ್ನಾಳುವ ಘನಸರ್ಕಾರಗಳು ನೇರವಾಗಿ ಶಿಕ್ಷಣದಲ್ಲಿ ಪಾಲ್ಗೊಳ್ಳದೇ ಬಂಡವಾಳಶಾಹಿಗಳ ಏಕಸ್ವಾಮ್ಯತ್ವಕ್ಕೆ ಅವಕಾಶ ಮಾಡಿಕೊಡುವ ಕ್ರಮಗಳನ್ನು ಸರ್ಕಾರ ಅನುಸರಿಸುತ್ತಿದೆ. ಹೀಗಾಗಿ ಸರ್ಕಾರವು ತನ್ನ ಅಧಿಕೃತ ಕಾರ್ಯಯೋಜನೆಗಳಲ್ಲಿ ಶಿಕ್ಷಣದ ಖಾಸಗೀಕರಣದಿಂದಾಗಿ "ಉಳ್ಳವರ ಪಾಲಿಗೆ ಶಿಕ್ಷಣವೆಂಬ ನೀತಿಯು ಸಾರ್ವತ್ರಿಕಗೊಳ್ಳುತ್ತಿದೆ. ಆದರೆ ಭಾರತ ಸಂವಿಧಾನದ ಘೋಷಣೆ ಮತ್ತು ಪ್ರಚಲಿತ ಸನ್ನಿವೇಶದಲ್ಲಿ ಚಾಲ್ತಿಯಲ್ಲಿರುವ ಶಿಕ್ಷಣದ ಸ್ವರೂಪದಲ್ಲುಂಟಾಗಿರುವ ವ್ಯತ್ಯಾಸಕ್ಕೆ ಕಾರಣಗಳಿವೆ. ಇಂತಹ ಅಂಶಗಳನ್ನು ವಿಮರ್ಶೆಗೆ ಒಳಪಡಿಸಿದಾಗ, ಭಾರತದ ಶಿಕ್ಷಣ ಕ್ಷೇತ್ರವೂ ಸಿಲುಕಿರುವ ಬಿಕ್ಕಟ್ಟು ಆಕಸ್ಮಿಕವೂ ಅಲ್ಲ. ಅನಿವಾರ್ಯವೂ ಅಲ್ಲ. ದೇಶದ ಸ್ವಾತಂತ್ರ್ಯದ ಮೊದಲ ವರ್ಷಗಳಿಂದಲೂ ನಮ್ಮ ಶಿಕ್ಷಣದ ನೀತಿ, ಹಾಕಿಕೊಂಡ ಯೋಜನೆಗಳು ದಿಕ್ಕು ತಪ್ಪಿರುವುದೇ ಇದಕ್ಕೆ ಕಾರಣ. ಇಂದು ಬಿರ್ಲಾ ಅಂಬಾನಿಗಳು ದೇಶದ ಶಿಕ್ಷಣ ನೀತಿಯ ಚುಕ್ಕಾಣಿ ಹಿಡಿದಿರುವುದು. ಹಾಗೆಯೇ ಶಿಕ್ಷಣದ ಅಭಿವೃದ್ಧಿಗೆ ಸಂಬಂಧಿಸಿದಂತೆ ನೇಮಕಗೊಂಡ

ಸಲಹಾ ಸಮಿತಿಗಳಲ್ಲಿ ವಿದೇಶಿ ತಜ್ಞರ ಸಲಹೆಗಳನ್ನು ಆಧರಿಸಿರುವುದು. ಇದಕ್ಕೆ "೧೯೪೮-೪೯ರ ರಾಧಕೃಷ್ಣ ಸಮಿತಿಯ ೧೦ ಜನರಲ್ಲಿ ಮೂವರು ವಸಾಹತುಶಾಹಿ ದೇಶದವರು."[೮] ಹಾಗೆಯೇ ೧೯೬೬ರ ಕೊಠಾರಿ ಸಮಿತಿಯ ೧೭ ಸದಸ್ಯರಲ್ಲಿ ಎಂಟು ಜನರು ಹೊರದೇಶಗಳಿಂದ ಬಂದವರಾಗಿದ್ದರಿಂದ ಅವರಿಗೆ ದೇಶದ ವಾಸ್ತವಿಕ ಪರಿಸ್ಥಿತಿ ಹಾಗೂ ಸನ್ನಿವೇಶದ ಕೊರತೆಯಿಂದಾಗಿ ಇಂದಿಗೂ ಶಿಕ್ಷಣವು ಭಾರತದಲ್ಲಿನ ಸರ್ವರ ಪಾಲಿಗೆ ಮರೀಚಿಕೆಯಾಗಿಯೇ ಕಂಡುಬರುತ್ತಿದೆ". ಇನ್ನೂ ನಮ್ಮನ್ನಾಳುವ ಸರ್ಕಾರಗಳು ಕೈಗೊಳ್ಳುವ ಯಾವುದೇ ಯೋಜನೆಗಳು ಸಹ ಸರ್ವರನ್ನು ಗಮನದಲ್ಲಿಟ್ಟು ಕೊಂಡು ರೂಪಗೊಂಡ ನಿರ್ಧಾರಗಳಲ್ಲದ ಕಾರಣ, ಶಿಕ್ಷಣಕ್ಕಾಗಿ ಬಳಸುತ್ತಿರುವ ಹಣವು ಸಹ ಅತ್ಯಲ್ಪವಾಗಿ ಕಂಡುಬರುತ್ತದೆ. ಉದಾ: "ಭಾರತದ ೮ನೇ ಪಂಚವಾರ್ಷಿಕ ಯೋಜನೆಯ ಒಟ್ಟಾರೆ ಅಂದಾಜು ವೆಚ್ಚವಾದ ೨,೯೮,೦೦೦ ಕೋಟಿ. ರೂಗಳ ಪೈಕಿ ಶಿಕ್ಷಣ ಕ್ಷೇತ್ರಕ್ಕೆ ಮೀಸಲಾಗಿಟ್ಟಿದ್ದು ಕೇವಲ ೬೩೦೦ ಕೋಟಿ ರೂ. ಮಾತ್ರ ಅಂದರೆ ಶೇಕಡ ೧ ಕ್ಕಿಂತಲೂ ಕಡಿಮೆ. ಇಂತಹ ಅಲ್ಪ ಮೊತ್ತದ ಹಣವು ಕೇವಲ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಮಾತ್ರ ದೊರೆಯದೇ ಖಾಸಗಿ ಶಿಕ್ಷಣ ಕ್ಷೇತ್ರಕ್ಕೂ, ಅನುದಾನ, ವೇತನ ಮತ್ತು ಸಹಾಯ ಇತ್ಯಾದಿ ರೂಪಗಳಲ್ಲಿ ಹಂಚಿಕೆಯಾಗುವುದರಿಂದ ಭಾರತದಲ್ಲಿ ಶಿಕ್ಷಣದ ಅಭಿವೃದ್ಧಿ ಹಾಗೂ ಜನಾಕರ್ಷಣೆ ಹೇಗೆ ಸಾಧ್ಯ".[೯] ಈ ಹಿನ್ನೆಲೆಯಲ್ಲಿ ಉಳ್ಳವರ ಪಾಲಿಗೆ ಶಿಕ್ಷಣವೆಂಬ ನೀತಿಗೆ ಹೆಚ್ಚು ಧ್ವನಿ ಬರಲು ಸಾಧ್ಯವಾಗುತ್ತದೆ. ಇಂತಹ ಸಂಕ್ರಮಣ ಕಾಲಘಟ್ಟದಲ್ಲಿ ಭಾರತದಲ್ಲಿರುವ ಪ್ರತಿಯೊಬ್ಬರಿಗೂ ಶಿಕ್ಷಣವು ಸುಲಭ ಹಾಗೂ ಸರಳವಾಗಿ ದೊರಕದೇ ಬಹಳಷ್ಟು ದುಬಾರಿಯಾಗುತ್ತಿದೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಗಣಿಯಲ್ಲಿರುವ ಕಾರ್ಮಿಕರಿಗೆ ಕಡಿಮೆ ಕೂಲಿ, ಅತಂತ್ರ ದುಡಿಮೆ, ಸಾರಿಗೆಯ ಕೊರತೆ, ಆರೋಗ್ಯದ ಸಮಸ್ಯೆ, ವಲಸೆ ಸಮಸ್ಯೆಗಳಂತಹ ಹತ್ತಾರು ಸಮಸ್ಯೆಗಳಿಂದ ಬಳಲುತ್ತಿರುವ ಕಾರ್ಮಿಕರಿಗೆ ಶಿಕ್ಷಣದ ಸೌಲಭ್ಯಗಳಾವುವು? ಅನಕ್ಷರತೆಯಿಂದಾಗುವ ಪರಿಣಾಮಗಳಾವುವು ಅವರಿಗೆ ಎಂಥಹ ಶಿಕ್ಷಣದ ಅವಶ್ಯಕತೆ ಇದೆ ಎಂಬುದನ್ನು ವಿಮರ್ಶೆಗೆ ಒಳಪಡಿಸುವ ಮೂಲಕ ಶಿಕ್ಷಣಕ್ಕೆ ಪೂರಕವಾದ ಆಯಾಮಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಈಗಾಗಲೇ ಗಣಿ ಕಾರ್ಮಿಕರ ಕುಟುಂಬಗಳಲ್ಲಿ ಸಾಕ್ಷರತೆಯ ಪ್ರಮಾಣವನ್ನು ಈ ಹಿಂದಿನ ಅಧ್ಯಾಯದಿಂದ ಅರಿತಾದ ಮೇಲೆ ಜಿಲ್ಲೆಯ ಕಾರ್ಮಿಕರ ಕ್ಯಾಂಪ್‌ಗಳ ಸುತ್ತಮುತ್ತ ಶಿಕ್ಷಣವನ್ನು ಪಡೆಯುವ ಅವಕಾಶಗಳು ಎಷ್ಟಿವೆ? ಅವುಗಳ ಸ್ವರೂಪ ಮತ್ತು ಕಾಲಾವಧಿ ಹೇಗಿರುತ್ತದೆ ಎಂಬುದನ್ನು ತಿಳಿಯುವುದು ಅವಶ್ಯಕ. ಜಿಲ್ಲೆಯಲ್ಲಿರುವ ಬಹಳಷ್ಟು ಗಣಿಕಾರ್ಮಿಕ ಕ್ಯಾಂಪ್‌ಗಳು ರಾಜ್ಯಸರ್ಕಾರದ ಕಂದಾಯ ಇಲಾಖೆಯ ವ್ಯಾಪ್ತಿಯಲ್ಲಿ ದಾಖಲಾಗಿದ್ದರೂ, ಅವುಗಳ ವ್ಯಾಪ್ತಿಯಲ್ಲಿ ಸರ್ಕಾರದಿಂದ ಆರಂಭಗೊಂಡ ಶಾಲೆಗಳ ಪ್ರಮಾಣ ಕಡಿಮೆಯೆಂದೇ ಹೇಳಬೇಕಾಗಿದೆ. ಇದಕ್ಕೆ ಈ ಭಾಗದ ಬಗ್ಗೆ ಸ್ಥಳೀಯ ಆಡಳಿತದಲ್ಲಿರುವ

ನಿರುತ್ಸಾಹ ಹಾಗೂ ರಾಜಕೀಯ ಇಚ್ಛಾಶಕ್ತಿಯ ಕೊರತೆಯು ಒಂದು ಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಮೂರು ತಾಲೂಕುಗಳ ಜನಸಂಖ್ಯೆ ಹಾಗೂ ಶಿಕ್ಷಣದ ಸೌಕರ್ಯಗಳನ್ನು ಕೆಳಗಿನ ಕೋಷ್ಟಕದಿಂದ ತಿಳಿಯಬಹುದು.

ಬಳ್ಳಾರಿ ಜಿಲ್ಲೆಯಲ್ಲಿ ಪ್ರಧಾನ ಉದ್ಯೋಗವಾಗಿ ಕಂಡುಬರುವ ಕೃಷಿ ಮತ್ತು ಗಣಿಗಾರಿಕೆಯು ಚಟುವಟಿಕೆಯು ದುಡಿಯುವವರ ಪ್ರಮಾಣವನ್ನು ಹೆಚ್ಚಿಸಿವೆ. ಅನುಕ್ರಮಣವಾಗಿ ೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ಕೆಲಸಗಾರರ ಸಂಖ್ಯೆಯು ಕೋಷ್ಟಕ ೪.೩.೨ರಂತೆ ಕಂಡುಬರುತ್ತದೆ.

**ಕೋಷ್ಟಕ ೪.೩.೨ : ದುಡಿಮೆಗಾರರ ಪ್ರಮಾಣ**

| ಕ್ರ.ಸಂ. | ತಾಲೂಕುಗಳು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧. | ಬಳ್ಳಾರಿ | ೧೭೩೫೨೪ | ೯೨೬೭೫ | ೨೬೬೧೯೯ |
| ೨. | ಹೊಸಪೇಟೆ | ೧೦೩೬೩೨ | ೫೫೪೯೩ | ೧೫೯೧೨೫ |
| ೩. | ಸಂಡೂರು | ೫೩೩೫೨ | ೩೨೫೬೧ | ೮೫೯೧೩ |
| ಒಟ್ಟು | | ೫೬೨೩೨೩ | ೩೫೮೪೯೮ | ೯೨೦೮೨೧ |

ಮೂಲ : ಬಳ್ಳಾರಿ ಜಿಲ್ಲಾ ಅಂಕಿ-ಅಂಶಗಳ ನೋಟ, ೨೦೦೩-೦೪

೪.೩.೨ರ ಕೋಷ್ಟಕವು ಜಿಲ್ಲೆಯ ಪೂರ್ವ ತಾಲೂಕುಗಳಾದ ಬಳ್ಳಾರಿ, ಹೊಸಪೇಟೆ ಹಾಗೂ ಸಂಡೂರು ತಾಲೂಕುಗಳಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಜ್ ಅದಿರಿನ ಸಂಪನ್ಮೂಲವು ಕೇಂದ್ರೀಕೃತಗೊಂಡಿರುವುದರಿಂದ ಈ ತಾಲೂಕುಗಳಲ್ಲಿ ವಾಣಿಜ್ಯ ವ್ಯಾಪಾರಗಳೆಲ್ಲವೂ ಭರದಿಂದ ಸಾಗಿವೆ. ಇವುಗಳಿಗೆ ಪೂರಕವಾಗಿ ಬೇರೆ ಬೇರೆ ರಾಜ್ಯಗಳಿಂದ, ಜಿಲ್ಲೆಗಳಿಂದ ಮತ್ತು ತಾಲೂಕುಗಳಿಂದ ಕೆಲಸವನ್ನು ಹುಡುಕಿಕೊಂಡು ಬರುವವರ ಪ್ರಮಾಣ ದಿನೇ ದಿನೇ ವೃದ್ಧಿಗೊಳ್ಳುತ್ತಾ ಸಾಗಿದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯಲ್ಲಿ ಸುಮಾರು ೧೦ ಲಕ್ಷಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ದುಡಿಯುವವರ ಸಂಖ್ಯೆ ಬೆಳೆದುನಿಂತಿದೆ. ಆದರೆ ಜಿಲ್ಲಾ ಅಂಕಿಅಂಶಗಳ ಸಂಗ್ರಹಣಾಧಿಕಾರಿಗಳ ಪ್ರಕಾರ ಬಳ್ಳಾರಿ, ಹೊಸಪೇಟೆ ಹಾಗೂ ಸಂಡೂರು ತಾಲೂಕುಗಳಲ್ಲಿ ಸರಾಸರಿ ೯ ಲಕ್ಷ ೨೦ ಸಾವಿರಕ್ಕಿಂತಲೂ ಹೆಚ್ಚೂ ದುಡಿಯುವವರು ವಾಸವಾಗಿದ್ದಾರೆ ಎಂದು ಧೃಡಪಡಿಸುತ್ತದೆ. ಅವರಲ್ಲಿ ೫ ಲಕ್ಷ ೬೨ ಸಾವಿರಕ್ಕಿಂತಲೂ ಹೆಚ್ಚು ಪುರುಷ ಮತ್ತು ೩ ಲಕ್ಷ ೫೮ ಸಾವಿರಕ್ಕಿಂತಲೂ ಅಧಿಕ ಸಂಖ್ಯೆಯಲ್ಲಿ ಮಹಿಳೆಯರು ವಿವಿಧ ಉದ್ಯೋಗಗಳಲ್ಲಿ ನಿರತರಾಗಿದ್ದಾರೆ ಎಂದೂ ಧೃಢಪಡಿಸುತ್ತದೆ. ಈ ಮೇಲಿನ ಅಂಕಿಅಂಶಗಳನ್ನಾಧರಿಸಿ ಜಿಲ್ಲೆಯಲ್ಲಿ ಲಭ್ಯವಿರುವ ಶಿಕ್ಷಣ ಸಂಸ್ಥೆಗಳನ್ನು ಗಮನಿಸಿದಾಗ ಕಾರ್ಮಿಕ

ವರ್ಗಕ್ಕಿರುವ ಶಿಕ್ಷಣದ ಸೌಲಭ್ಯಗಳನ್ನು ಕಂಡುಹಿಡಿಯಬಹುದು. ಅವುಗಳು ಕೋಷ್ಠಕ ೪.೩೩ರಲ್ಲಿ ಕಂಡುಬರುತ್ತವೆ.

**ಕೋಷ್ಠಕ ೪.೩೩ : ಮೂರು ತಾಲೂಕುಗಳಲ್ಲಿನ ಶಿಕ್ಷಣದ ಸೌಲಭ್ಯಗಳು**

| ಕ್ರ.ಸಂ. | ತಾಲೂಕುಗಳು | ಪ್ರಾಥಮಿಕ | ಪ್ರೌಢ | ಪದವಿಪೂರ್ವ | ಪದವಿ | ತಾಂತ್ರಿಕ | ಗ್ರಂಥಾಲಯ |
|---|---|---|---|---|---|---|---|
| ೧. | ಬಳ್ಳಾರಿ | ೩೯೩ | ೭೦ | ೧೫ | ೦೩ | ೦೫ | ೩೦ |
| ೨. | ಹೊಸಪೇಟೆ | ೨೬೬ | ೫೨ | ೧೧ | ೦೩ | ೦೨ | ೨೪ |
| ೩. | ಸಂಡೂರು | ೧೮೬ | ೨೦ | ೦೩ | ೦೧ | -- | ೨೪ |
| | ಒಟ್ಟು | ೮೩೯ | ೧೪೨ | ೨೯ | ೦೭ | ೦೭ | ೭೮ |

ಮೂಲ : ಬಳ್ಳಾರಿ ಜಿಲ್ಲಾ ಅಂಕಿ-ಅಂಶಗಳ ನೋಟ, ೨೦೦೩-೦೪

೪.೩೩ರ ಕೋಷ್ಠಕವು ಜಿಲ್ಲೆಯ ಪೂರ್ವ ತಾಲೂಕುಗಳಲ್ಲಿ ಲಭ್ಯವಿದ್ದ ಸರ್ಕಾರಿ ಮತ್ತು ಸರ್ಕಾರೇತರ ಶಿಕ್ಷಣ ಸಂಸ್ಥೆಗಳನ್ನು ಪ್ರತಿನಿಧಿಸುತ್ತದೆ. ಗಣಿ ಕಾರ್ಮಿಕರ ಶಿಕ್ಷಣದ ಸೌಕರ್ಯದ ದೃಷ್ಟಿಯಿಂದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣವು ಜಿಲ್ಲೆಯ ಸರಾಸರಿ ಜನಸಂಖ್ಯೆಗೆ ಹೋಲಿಸಿಕೊಂಡಾಗ ತುಂಬಾ ಕಡಿಮೆಯೆಂದೇ ಹೇಳಬಹುದು. ಹೊಸಪೇಟೆ ತಾಲೂಕು ೨೬೬ ಮತ್ತು ೫೨ ಆದರೆ, ಅದು ಬಳ್ಳಾರಿ ತಾಲೂಕಿನಲ್ಲಿ ೩೯೩ ಹಾಗೂ ೭೦ ಆಗಿದೆ. ಸಂಡೂರು ತಾಲೂಕಿನಲ್ಲಿ ಕೇವಲ ೧೮೬ ಹಾಗೂ ೨೦ಕ್ಕೆ ಸೀಮಿತಗೊಂಡಿದೆ. ಆಯಾ ತಾಲೂಕಿನಲ್ಲಿ ನೆಲೆಸಿರುವ ಸರಾಸರಿ ಜನಸಂಖ್ಯೆಗೆ ಹೋಲಿಸಿದಾಗ ಕೇವಲ ಶೇಕಡ ೨ ರಷ್ಟು ಮಾತ್ರ ಸಾರ್ವಜನಿಕರಿಗೆ ಶಿಕ್ಷಣದ ಸೌಕರ್ಯ ಲಭ್ಯವಿರುವುದಾಗಿ ತಿಳಿದುಬರುತ್ತದೆ. ಇಂತಹ ಸಂಕೀರ್ಣ ಸನ್ನಿವೇಶದಲ್ಲಿ ಜಿಲ್ಲೆಯಲ್ಲಿರುವ ಬಡತನ, ನಿರುದ್ಯೋಗ, ಅನಕ್ಷರತೆ ಹಾಗೂ ಅಜ್ಞಾನದಲ್ಲಿರುವ ಗಣಿಕಾರ್ಮಿಕರು ಎಂತಹ ಶಿಕ್ಷಣವನ್ನು ಪಡೆಯಲು ಸಾಧ್ಯವೆಂಬುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ.

ಸರ್ವರಿಗೂ ಕಡ್ಡಾಯ ಶಿಕ್ಷಣದ ಯೋಜನೆಯಲ್ಲಿ ಜಿಲ್ಲಾ ಶಿಕ್ಷಣ ಇಲಾಖೆಯು ಆಯಾ ತಾಲೂಕುಗಳಲ್ಲಿ ನೆಲೆಸಿರುವ ಕಾರ್ಮಿಕರಿಗೆ ಅನೇಕ ಶಿಕ್ಷಣದ ಸೌಲಭ್ಯಗಳನ್ನು ಕೈಗೊಂಡಿದೆ. ಅವುಗಳೆಂದರೆ ಸಂಡೂರು ತಾಲೂಕಿನ ವ್ಯಾಪ್ತಿಯಲ್ಲಿ ಬರುವ ತಾರನಗರ, ಉಬ್ಬಲಗಂಡಿ, ರಾಜಾಪುರ, ಬನ್ನಿಹಟ್ಟಿ, ನರಸಾಪುರ, ನವಲಟ್ಟಿ, ಅಪ್ಪನಹಳ್ಳಿ, ತುಮಟಿತಾಂಡ, ನಾರಾಯಣಪುರ, ಕಮತೂರು, ದೇವಗಿರಿ, ಸುಬ್ರಾಯನಹಳ್ಳಿ, ನಂದಿಹಳ್ಳಿ, ಚನ್ನಬಸಪ್ಪ ಕ್ಯಾಂಪ್, ಧರ್ಮಾಪುರ, ಯಶವಂತನಗರ, ಸುಶೀಲಾನಗರ, ಸಿದ್ದಾಪುರ, ಜೈಸಿಂಗ್‌ಪುರ, ವೆಂಕಟಗಿರಿ, ರಾಮಘಡ, ಮುರಾರಿಪುರ ಇತ್ಯಾದಿ ಗ್ರಾಮಗಳಲ್ಲಿ ಗಣಿಯಲ್ಲಿ

ದುಡಿಯುತ್ತಿರುವ ಕಾರ್ಮಿಕರೇ ಹೆಚ್ಚಾಗಿ ವಾಸವಾಗಿದ್ದಾರೆ. ಈ ಗ್ರಾಮಗಳಲ್ಲಿ ಸರ್ಕಾರವೇ ಕಿರಿಯ ಹಾಗೂ ಹಿರಿಯ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿ ಶಿಕ್ಷಣವನ್ನು ಒದಗಿಸುತ್ತಿದೆ. ಹಾಗೆಯೇ ಹೊಸಪೇಟೆ ವ್ಯಾಪ್ತಿಯಲ್ಲಿ ಶಂಕರ್‌ನಗರ ಕ್ಯಾಂಪ್, ಕಾರಿಗನೂರು, ವಾಲ್ಮೀಕಿನಗರ, ಇಂಗಳಗಿ, ರಾಜಾಪುರ, ಕಲ್ಲಹಳ್ಳಿ, ಗುಂಡ್ಲುವದ್ದಿಗೇರಿ, ಕೊರಚರ ಹಟ್ಟಿ, ಪಾಪಿನಾಯಕನಹಳ್ಳಿ, ಕಲ್ಲಹಳ್ಳಿ, ಡಣಾಪುರ, ಗಾಳೆಮ್ಮನಗುಡಿ ವ್ಯಾಸಪುರಿ ಇತ್ಯಾದಿ ಗ್ರಾಮಗಳಲ್ಲಿ ಸರ್ಕಾರವೇ ಶಿಕ್ಷಣದ ಜವಾಬ್ದಾರಿಯನ್ನು ನಿರ್ವಹಿಸುತ್ತಿದೆ. ಇಂತಹ ಸನ್ನಿವೇಶದಲ್ಲಿ ನಮ್ಮ ಸರ್ಕಾರಿ ಶಿಕ್ಷಣದ ವ್ಯವಸ್ಥೆ ಯಾವ ಸ್ವರೂಪದಲ್ಲಿದೆ ಎಂಬುದನ್ನು ಪತ್ತೆ ಹಚ್ಚಲು ಈಗಾಗಲೇ ಪ್ರಕಟಿತ ಯುನೆಸ್ಕೋ ವರದಿಯನ್ನು ಪರಿಶೀಲಿಸಿದಾಗ "ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿ ಉಪಾಧ್ಯಾಯರ ಪ್ರಮಾಣ ೪೦:೧ ಇರಬೇಕು. ಆದರೆ ಭಾರತದಲ್ಲಿ ೧೦೦:೧ ಇದ್ದದ್ದು ಈಗ ೧೫೦:೧ ಕ್ಕೆ ಏರಿಕೆಯಾಗಿದೆ ಎಂಬುದು ತಿಳಿದುಬರುತ್ತದೆ. ಸರ್ಕಾರಿ ಸಾಮಾನ್ಯ ಶಾಲೆಗಳಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ತಲಾ ಒಬ್ಬರಿಗೆ ಖರ್ಚಾಗುವ ಹಣ ಕೇವಲ ೪ ರೂಪಾಯಿಗಳಾದರೆ ನವೋದಯ ಶಾಲೆಯ ವಿದ್ಯಾರ್ಥಿಗೆ ೧೦೦ ರೂಪಾಯಿಗಳಷ್ಟು ಖರ್ಚು ಮಾಡಲಾಗುತ್ತದೆ"[೨೦] ಎಂಬ ವರದಿಯನ್ನು ವಿಶ್ಲೇಷಣೆಗೊಳಪಡಿಸಿದಾಗ, ನಮ್ಮ ಸಮಾಜದಲ್ಲಿ ತುಂಬಾ ನಿರ್ಲಕ್ಷ್ಯಗೆ ಒಳಪಟ್ಟ ಬುಡಕಟ್ಟು ಸಮುದಾಯಗಳ ಗಣಿ ಕಾರ್ಮಿಕರಿಗೆ ನಮ್ಮ ಸರ್ಕಾರಗಳು ಸಾರ್ವಜನಿಕ ಶಿಕ್ಷಣದ ಸೌಲಭ್ಯವು ಎಂತಹ ಶಿಕ್ಷಣವನ್ನು ಒದಗಿಸಲು ಸಾಧ್ಯ ಎಂಬುದನ್ನು ಅವಲೋಕಿಸಿದರೆ ಅದರ ಭಯಾನಕತೆಯ ಅರಿವಾಗುತ್ತದೆ. ಎಷ್ಟೋ ಸರ್ಕಾರಿ ಶಾಲೆಗಳಲ್ಲಿ, ಸುಣ್ಣ, ಬಣ್ಣಗಳಿಲ್ಲದ, ಕಪ್ಪು ಹಲಗೆ, ಶಿಕ್ಷಕರಿಲ್ಲದ, ಕೊಠಡಿಗಳಿಲ್ಲದ ಸ್ವರೂಪದಲ್ಲಿಯೇ ಶಿಕ್ಷಣವು ಕುಂಟುತ್ತಾ ಸಾಗಿರುವುದನ್ನು ದಿನನಿತ್ಯ ಪತ್ರಿಕೆಗಳಲ್ಲಿ, ರೇಡಿಯೋ ಹಾಗೂ ದೃಶ್ಯ ಮಾಧ್ಯಮಗಳಿಂದ ಕಾಣುತ್ತಿದ್ದೇವೆ. ಇಂತಹ ದುಸ್ಥಿತಿಯಲ್ಲಿ ಮೂಲತಃ ತಾಲೂಕು, ಪಟ್ಟಣ ಪ್ರದೇಶ ಹಾಗೂ ಹಳ್ಳಿಗಳಿಂದ ದೂರವಿರುವ ಕಾರ್ಮಿಕ ಕ್ಯಾಂಪ್‌ಗಳಲ್ಲಿ ಈಗಾಲು ಶೇಕಡ ೭೦ರಷ್ಟು ಚಿಮಣಿ(ಸೀಮೆಎಣ್ಣೆ) ದೀಪದಲ್ಲಿ ತಮ್ಮ ಬದುಕನ್ನು ಕಂಡುಕೊಳ್ಳುತ್ತಿದ್ದಾರೆ. ಕಡಿಮೆ ಕೂಲಿ, ಅತಂತ್ರ ದುಡಿಮೆ, ಹೆಚ್ಚು ಜನಸಂಖ್ಯೆ, ಮಧ್ಯಪಾನ, ಜೂಜಾಟ ಹಾಗೂ ಬಡತನಗಳಿಂದ ಕೂಡಿದ ಕಾರ್ಮಿಕರು ಹಾಗೂ ಅವರ ಮಕ್ಕಳು ಪ್ರಾಥಮಿಕ ಶಾಲೆಗಳಲ್ಲಿ ಯಾವ ಪ್ರಮಾಣದಲ್ಲಿ ಶಿಕ್ಷಣವನ್ನು ಪಡೆಯಲು ಸಾಧ್ಯ, ಒಂದು ವೇಳೆ ಖಾಸಗಿ ಶಿಕ್ಷಣವನ್ನು ಗಣಿ ಕಾರ್ಮಿಕರ ಮಕ್ಕಳು ಪಡೆಯುವಂಥ ನಿರ್ಧಾರ ಮಾಡಿದರೆ, ಅಂತಹ ಖಾಸಗಿ ಶಿಕ್ಷಣಕ್ಕೆ ಅವಶ್ಯಕವಾದ ಶುಲ್ಕ, ಉಡುಪು, ಪುಸ್ತಕಗಳಿಗಾಗಿ ಅವರು ಯಾವ ರೀತಿ ತಮ್ಮ ಆದಾಯವನ್ನು ಕ್ರೋಢೀಕರಿಸಿಕೊಳ್ಳಲು ಅವರಿಗೆ ಲಭ್ಯವಿರುವ ಅವಕಾಶಗಳನ್ನು ಪತ್ತೆಹಚ್ಚಿದಾಗ ಮಾತ್ರ ಗಣಿ ಕಾರ್ಮಿಕರ ನೈಜ ಶಿಕ್ಷಣ ಮಟ್ಟದ ಅರಿವಾಗುತ್ತದೆ.

ಮುಖ್ಯವಾಗಿ ಗಣಿಕಾರ್ಮಿಕರ ಶಿಕ್ಷಣದ ಪ್ರಶ್ನೆ ಬಂದಾಗ ಗಣಿ ಮಾಲಿಕರನ್ನು ಅಪರಾಧಿಗಳ

ಸ್ಥಾನದಲ್ಲಿ ನಿಲ್ಲಿಸಲೇಬೇಕಾಗುತ್ತದೆ. ಏಕೆಂದರೆ ಪ್ರಸ್ತುತ ಸನ್ನಿವೇಶದಲ್ಲಿ ನಮ್ಮನ್ನಾಳುವ ಘನ ಸರ್ಕಾರಗಳು ಯಾವುದೇ ಸಾಮಾಜಿಕ ಅಥವಾ ಖಾಸಗಿ ಸಂಸ್ಥೆಗಳು ಕೈಗೊಳ್ಳುವ ಸಾಮಾಜಿಕ ಯೋಗಕ್ಷೇಮದ ಕಾರ್ಯಕ್ರಮಗಳಿಗೆ ಪೂರಕವಾಗಿ, ಹತ್ತು ಹಲವಾರು ಸೌಕರ್ಯಗಳನ್ನು ಒದಗಿಸಿ ಕೊಟ್ಟಿದೆ. ಆದರೆ ಜಿಲ್ಲೆಯ ಗಣಿ ಮಾಲೀಕರು ಕಾರ್ಮಿಕರ ಯೋಗಕ್ಷೇಮಕ್ಕಾಗಲೀ ಇಲ್ಲವೆ ಅವರ ವಿದ್ಯಾಭ್ಯಾಸಕ್ಕಾಗಲೀ ಯಾವುದೇ ನಿರ್ದಿಷ್ಟವಾದ ಕಾರ್ಯಯೋಜನೆಯನ್ನು ಜಿಲ್ಲೆಯ ಗಣಿಸಂಸ್ಥೆಗಳಲ್ಲಿ ಕಾಣುವುದು ಕಷ್ಟಕರವಾಗಿದೆ.

ಜಿಲ್ಲೆಯ ಖಾಸಗಿ ಗಣಿ ಸಂಸ್ಥೆಗಳಲ್ಲಿ ಕಾರ್ಮಿಕರ ಶಿಕ್ಷಣಕ್ಕೆ ಸಂಬಂಧಿಸಿದ ಯಾವುದೇ ಯೋಜನೆಗಳು ಎಲ್ಲಿಯೂ ನೋಡಲು ಸಾಧ್ಯವಾಗಿಲ್ಲ. ಆದರೆ ಸಂಡೂರು ತಾಲೂಕಿನಲ್ಲಿ ಸ್ಮಯೋರ್ ಹಾಗೂ ದೋಣಿಮಲೈನ ಎನ್.ಎಂ.ಡಿ.ಸಿ. ಸಂಸ್ಥೆಗಳು ತಮ್ಮ ಆಧೀನ ಸಂಸ್ಥೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಹಾಗೂ ಅವರ ಕುಟುಂಬದವರಿಗಾಗಿ ಶಾಲೆಯ ಸ್ಥಾಪನೆ, ಸ್ಕಾಲರ್‌ಶಿಪ್, ಹೆಚ್ಚುವರಿ ಶಿಕ್ಷಣಕ್ಕೆ ಪ್ರೋತ್ಸಾಹ ಇತ್ಯಾದಿ. ಶಿಕ್ಷಣಕ್ಕಾಗಿ ಹತ್ತಾರು ಯೋಜನೆಗಳನ್ನು ಜಾರಿಗೊಳಿಸಿವೆ. ಉಳಿದಂತೆ ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಖಾಸಗಿ ಗಣಿ ಸಂಸ್ಥೆಗಳೆಲ್ಲವೂ ಕಾರ್ಮಿಕರ ಶಿಕ್ಷಣದ ವಿಷಯದಲ್ಲಿ ಸ್ವಾರ್ಥತೆಗೆ ಹಾಗೂ ಲಾಭಕ್ಕೆ ಹೆಚ್ಚು ಮಾನ್ಯತೆಯನ್ನು ಕೊಟ್ಟಿವೆ ಎಂದೆನ್ನಬಹುದು. ಕಾರ್ಮಿಕರಿಗೆ ಸಂಬಂಧಿಸಿದಂತೆ ವಯಸ್ಕರ ಶಿಕ್ಷಣ ಪದ್ಧತಿಯಾಗಲೀ ಅಥವಾ ಕಾರ್ಮಿಕರ ಮಕ್ಕಳಿಗಾಗಿ, ಕ್ರಷ್‌ಗಳ ಬಳಕೆಯನ್ನು ಗಣಿಗಾರಿಕೆಯಲ್ಲಿ ಕಾಣಲು ಸಾಧ್ಯವಿಲ್ಲ. ಇಂತಹ ಬೆಳವಣಿಗೆಗೆ ಗಣಿ ಮಾಲೀಕ ವರ್ಗವು ಅನುಸರಿಸುವ ಕೆಲವು ಪೂರ್ವಗ್ರಹಗಳಿಂದಾಗಿ ಅವರಲ್ಲಿರುವ ಅಮೌಲಿಕ ಧೋರಣೆಗಳನ್ನು ಸಾಬೀತುಗೊಳಿಸುತ್ತದೆ. ಶಿಕ್ಷಣವು ಮುಖ್ಯವಾಗಿ ಮಾನವನ ಬೌದ್ಧಿಕ ತಿಳುವಳಿಕೆಯ ಜೊತೆಗೆ ಶೋಷಣೆಯ ಆಯಾಮಗಳನ್ನು ಪ್ರಶ್ನಿಸುವ ಹಾಗೂ ಅವುಗಳ ಪರಿಹಾರಕ್ಕೆ ಶ್ರಮಿಸುವ ಇಲ್ಲವೇ ಕಾರ್ಯೋನ್ಮುಖತೆಗೆ ಅವಕಾಶ ಮಾಡಿಕೊಡುತ್ತದೆ. ಈ ಅಂಶಗಳಿಂದ ಮಾಲೀಕ ವರ್ಗ ಆದಷ್ಟೂ ಕಾರ್ಮಿಕರನ್ನು ಶಿಕ್ಷಣದಿಂದ ವಂಚಿಸುವ ತಂತ್ರಗಳನ್ನೇ ಪಾಲಿಸುತ್ತಿದೆಯೋ, ಏನೋ ಎಂಬಂತೆ ಗಣಿಗಾರಿಕೆಯಲ್ಲಿನ ವಾತಾವರಣವು ನಿರ್ಮಾಣಗೊಂಡಿದೆ.

'ಶಿಕ್ಷಣ'ವು ಗಣಿ ಕಾರ್ಮಿಕರ ಕೆಲಸದ ಸ್ವರೂಪ, ವೇತನದ ಪ್ರಮಾಣ ಹಾಗೂ ಸ್ಥಾನಮಾನದ ನಿರ್ಧಾರದಲ್ಲಿ ಪ್ರಮುಖ ಮಾನದಂಡವಾಗಿ ಕಂಡುಬರುತ್ತದೆ. ಮುಖ್ಯವಾಗಿ ಜಿಲ್ಲೆಯ ಗಣಿಯಲ್ಲಿ ಶಿಕ್ಷಣವನ್ನು ಪಡೆದ ಕಾರ್ಮಿಕರ ಅರ್ಹತೆಗಳಿಗನುಸಾರವಾಗಿ ಕುಶಲ, ಅರೆಕುಶಲ ಮತ್ತು ಕುಶಲರಹಿತ ಕಾರ್ಮಿಕರೆಂದೂ ವರ್ಗೀಕರಿಸಿ, ಅವರ ಶಿಕ್ಷಣದ ಪ್ರಮಾಣಕ್ಕನುಗುಣವಾಗಿ ಕೆಲಸದ ಸ್ವರೂಪ ಹಾಗೂ ವೇತನದ ಪ್ರಮಾಣ ನಿರ್ಧಾರವಾಗುತ್ತವೆ. ಕುಶಲ ಕೆಲಸಗಾರರ ಸಾಲಿನಲ್ಲಿ ಮೇನೇಜರ್, ಫೋರ್‌ಮನ್, ಬ್ಲಾಸ್ಟರ್, ಆಪರೇಟರ್, ಡ್ರೈವರ್ ಇತ್ಯಾದಿ ಕೆಲಸಗಾರರು ಪರಿಗಣನೆಗೆ ಬರುತ್ತಾರೆ. ಇವರ

ಕೆಲಸದ ಸಮಯ ಹಾಗೂ ಕೆಲಸದ ಒತ್ತಡವು ತುಂಬಾ ಸರಳವಾಗಿದ್ದು, ಸಮಯಕ್ಕೆ ತಕ್ಕಂತೆ ಹೆಚ್ಚುವರಿ ವೇತನಕ್ಕೆ ಅವಕಾಶವಿರುತ್ತದೆ. ಈ ವರ್ಗದವರಿಗೆ ತಮ್ಮ ವಸತಿ ಪ್ರದೇಶದಿಂದ ಮೈನ್ಸ್‌ಗಳಿಗೆ ಬಂದುಹೋಗಲು ವ್ಯವಸ್ಥಿತವಾದ ಸಾರಿಗೆ ಸೌಕರ್ಯವಿರುತ್ತದೆ. ಹೆಚ್ಚುವರಿಯಾಗಿ ವೈದ್ಯಕೀಯ ಸೌಲಭ್ಯ, ಬೋನಸ್, ಹೆಚ್ಚುವರಿ ಸಮಯದ ವೇತನ ಇತ್ಯಾದಿಗಳಿಂದಾಗಿ ಈ ವರ್ಗದವರ ಜೀವನ ಮಟ್ಟವು ಉತ್ತಮವಾಗಿದೆ. ಜೊತೆಗೆ ಅತ್ಯಧಿಕ ಆದಾಯ ಹಾಗೂ ಜೀವನ ಮಟ್ಟದ ಸುಧಾರಣೆಯಿಂದಾಗಿ ಇವರ ಸಾಮಾಜಿಕ ಸ್ಥಾನಮಾನವು ಉತ್ತಮವಾಗಿದೆ. ಅರೆಕುಶಲಿಗಳ ವರ್ಗದಲ್ಲಿ ಬರುವವರು ಅಲ್ಪಸ್ವಲ್ಪ ಶಿಕ್ಷಣವನ್ನು ಪಡೆದವರು, ಕಾಲಾನುಕ್ರಮದಲ್ಲಿ ಅವರಲ್ಲಿರುವ ಬೌದ್ಧಿಕ ಜ್ಞಾನ ಹಾಗೂ ಕಾರ್ಯತೀಕ್ಷ್ಣತೆಗಳಿಂದಾಗಿ ಕುಶಲತೆಯನ್ನು ಮೈಗೂಡಿಸಿಕೊಳ್ಳುತ್ತಾರೆ. ಅವರೆಂದರೆ ಹೆಲ್ಪರ್ಸ್, ಕ್ಲಿನರ್ಸ್, ಡ್ರಿಲ್ಲರ್ಸ್, ಅಸಿಸ್ಟೆಂಟ್ಸ್‌ಗಳು ಅರೆಕುಶಲಿಗಳಾಗಿದ್ದು, ಇವರ ಕೆಲಸದ ಸಮಯವು ನಿರ್ದಿಷ್ಟವಾಗಿರುತ್ತದೆ. ಆದರೆ ಕೆಲಸದ ಸ್ವರೂಪವು ತುಂಬಾ ಕಷ್ಟದಾಯಕ ಹಾಗೂ ಶ್ರಮದಾಯಕವಾಗಿರು ತ್ತದೆ. ಆರಂಭದಲ್ಲಿ ಈ ವರ್ಗವು ಪಡೆಯುವ ವೇತನ ಕಡಿಮೆಯೆಂದೇ ಕಂಡುಬಂದರೂ ಕಾಲಕ್ರಮೇಣ ಈ ವರ್ಗವೆಲ್ಲಾ ಕುಶಲ ಕೆಲಸಗಾರರಾಗಿ ಪರಿವರ್ತನೆಗೊಳ್ಳುವುದರಿಂದ ಹೆಚ್ಚು ವೇತನ, ಒಳ್ಳೆಯ ಉದ್ಯೋಗದ ಸ್ಥಾನಮಾನಗಳು ದೊರೆಯುತ್ತವೆ. ಇನ್ನೂ ಕುಶಲರಹಿತ ವರ್ಗದಲ್ಲಿ ಬರುವವರು ಅನಕ್ಷರಸ್ಥರು ಹಾಗೂ ದೈಹಿಕ ಸಾಮರ್ಥ್ಯವನ್ನು ನಂಬಿಕೊಂಡವರು ಆಗಿರುತ್ತಾರೆ. ಈ ವರ್ಗದಲ್ಲಿ ಬರುವವರು ಅನಕ್ಷರಸ್ಥ ಪುರುಷರು, ಮಹಿಳಾ ಹಾಗೂ ಬಾಲ ಕಾರ್ಮಿಕರು, ಜರಡಿ ಹಿಡಿಯುವವರು, ಕಲ್ಲು ಹೊಡೆಯುವವರು ಹಾಗೂ ಲೋಡರ್ಸ್ ಇತ್ಯಾದಿ. ಈ ವರ್ಗವು ಕೇವಲ ತಮ್ಮ ದೈಹಿಕ ಶ್ರಮವನ್ನು ಆಧರಿಸಿ ತಮ್ಮ ಕೆಲಸ, ದುಡಿಮೆ ಮತ್ತು ವೇತನವನ್ನು ಗಳಿಸಿಕೊಳ್ಳಬೇಕಾಗುತ್ತದೆ. ಕುಶಲರಹಿತ ಕಾರ್ಮಿಕರಿಗೆ ಒಂದು ನಿರ್ದಿಷ್ಟವಾದ ವೇತನ ಪದ್ಧತಿಯಾಗಲೀ ಹಾಗೂ ನಿರಂತರವಾದ ಆದಾಯದ ಮೂಲವಾಗಲೀ ಇರುವುದಿಲ್ಲ. ಈ ವರ್ಗವು ಹೆಚ್ಚು ಶ್ರಮದಾಯಕ ಸೇವೆಯನ್ನು ಮಾಡುವವರು. ನಾನಾ ಕೆಲಸದ ಒತ್ತಡಗಳ ಮಧ್ಯೆ ಆಡಳಿತ ವರ್ಗ, ಕಂಟ್ರಾಕ್ಟರ್ ಮಧ್ಯವರ್ತಿಗಳು ಹಾಗೂ ಗಣಿಯಲ್ಲಿರುವ ಇನ್ನಿತರ ವರ್ಗಗಳಿಂದ ಸದಾ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಕಡಿಮೆ ಕೂಲಿ, ಹೆಚ್ಚು ಶ್ರಮದಾಯಕ ಕೆಲಸ ಮತ್ತು ಕಡಿಮೆ ಆದಾಯದಿಂದಾಗಿ ಇವರ ಸಾಮಾಜಿಕ ಸ್ಥಾನಮಾನವು ತುಂಬಾ ನಿಕೃಷ್ಟವಾಗಿದೆ.

ಗಣಿಗಾರಿಕೆಯಲ್ಲಿ ಶಿಕ್ಷಣದ ವಂಚನೆಯಿಂದಾಗುವ ಪರಿಣಾಮಗಳು ಅತ್ಯಧಿಕ. ಮುಖ್ಯವಾಗಿ ಶಿಕ್ಷಣವು ಕೂಲಿಯ ತಾರತಮ್ಯಕ್ಕೆ ಅವಕಾಶ ಮಾಡಿಕೊಡುತ್ತದೆ. ಶಿಕ್ಷಿತರಿಗೆ ಹೆಚ್ಚು ಕೂಲಿ ಅಶಿಕ್ಷತರಿಗೆ ಕಡಿಮೆ ಕೂಲಿ ವಿತರಿಸಲಾಗುತ್ತದೆ. ಶಿಕ್ಷಣವು ದುಡಿಮೆಯಲ್ಲಿ ಭದ್ರತೆಯನ್ನು ಒದಗಿಸಿದರೆ ಅನಕ್ಷರತೆಯ

ಅತಂತ್ರತೆಯನ್ನು ಹುಟ್ಟುಹಾಕಿ, ದುಡಿಮೆ ಆದಾಯ ಮತ್ತು ಜೀವನದ ಭರವಸೆಯನ್ನೇ ಹೋಗಲಾಡಿಸುತ್ತದೆ. ಅನಕ್ಷರಸ್ಥ ಕೂಲಿ ಕಾರ್ಮಿಕರು ಕೇವಲ ವಾರಕ್ಕೆ ೪ ಅಥವಾ ೫ ದಿನಗಳ ದುಡಿಮೆಯನ್ನು ಮಾತ್ರ ಕಾಣಬಹುದು. ಆದರೆ ಶಿಕ್ಷಿತ ಗಣಿಕಾರ್ಮಿಕರು ವಾರಕ್ಕೆ ೭ ದಿನಗಳ ದುಡಿಮೆಯ ಜೊತೆಗೆ ಬೇರೆ ಬೇರೆ ಸೌಲಭ್ಯಗಳನ್ನು ಪಡೆಯುವವರಾಗಿದ್ದಾರೆ. ಅಕ್ಷರಸ್ಥ ಕಾರ್ಮಿಕರ ನಿರ್ವಹಿಸುವ ಕೆಲಸದ ಸ್ವರೂಪವು ಸರಳ ಹಾಗೂ ಕಡಿಮೆ ಶ್ರಮದಾಯಕವುಳ್ಳದ್ದು ಆಗಿರುತ್ತದೆ. ಆದರೆ ಅನಕ್ಷರಸ್ಥರು ಹೆಚ್ಚಾಗಿ ತಮ್ಮ ದೈಹಿಕ ಶ್ರಮವನ್ನು ಆಧಾರಿಸಿಕೊಂಡೇ ಹೆಚ್ಚೊ ಕಠಿಣ ಕೆಲಸವನ್ನು ನಿರ್ವಹಿಸಿ, ಕಡಿಮೆ ಸಂಬಳವನ್ನು (ಕೂಲಿ) ಪಡೆಯುತ್ತಾರೆ. ಅನಕ್ಷರಸ್ಥ ಕಾರ್ಮಿಕರನ್ನು ಗಣಿ ಕಂಪನಿಯ ಸಾಮಾನ್ಯ ನೌಕರರಿಂದ ಹಿಡಿದು ತಾಂತ್ರಿಕ ಹಾಗೂ ತಾಂತ್ರಿಕೇತರ ಕಾರ್ಮಿಕರಿಂದ ಸದಾ ಲೈಂಗಿಕ ದೌರ್ಜನ್ಯ, ದಬ್ಬಾಳಿಕೆ, ಹಲವು ಬಗೆಯ ಶೋಷಣೆಗೆ ಈಡಾಗಬೇಕಾಗಿದೆ. ಕೇವಲ ತಮ್ಮ ದೈಹಿಕ ಶ್ರಮದಿಂದ ದೈನಂದಿನ ಕೂಲಿ, ತಿಂಗಳ ಆದಾಯವನ್ನು ಸರಿದೂಗಿಸಿಕೊಳ್ಳಬೇಕಾಗಿದೆ. ಈ ಎಲ್ಲಾ ಕಾರಣಗಳಿಂದ ಅನಕ್ಷರಸ್ಥ ಕಾರ್ಮಿಕರಿಗೆ ಸಾಮಾಜಿಕ ಸ್ಥಾನಮಾನವು ತುಂಬಾ ಕೆಳಮಟ್ಟದಲ್ಲಿರುತ್ತದೆ.

ಭಾರತದ ಸಂವಿಧಾನ ಹಾಗೂ ಸರ್ಕಾರಗಳು ಸಾರ್ವಜನಿಕರ ಶಿಕ್ಷಣಕ್ಕಾಗಿ ಏನೆಲ್ಲಾ ಕ್ರಮಗಳನ್ನು ಮತ್ತು ಪರಿಹಾರೋಪಾಯಗಳನ್ನು ಜಾರಿಗೊಳಿಸಿದ್ದರೂ ಶೇಕಡ ೫೦ಕ್ಕಿಂತಲೂ ಹೆಚ್ಚು ನಮ್ಮ ಸುತ್ತಲಿನ ವ್ಯವಸ್ಥೆಯಲ್ಲಿ ಅನಕ್ಷರಸ್ಥರ ಪ್ರಮಾಣ ಹೆಚ್ಚು ಇರುವುದನ್ನು ಮನಗಂಡಾಗ, ನಮ್ಮೆಲ್ಲಾ ಕಾಯ್ದೆಕಾನೂನುಗಳು ಕೇವಲ ಕಾಗದ ಅಥವಾ ಕಡತಗಳಲ್ಲಿ ತುಂಬಾ ಶಕ್ತಿಶಾಲಿಗಳೆಂದೂ, ವಾಸ್ತವಿಕತೆಯಲ್ಲಿ ತುಂಬಾ ಅಶಕ್ತ ಕ್ರಮಗಳೆಂದೇ ಹೇಳಬೇಕಾಗಿದೆ. ಏಕೆಂದರೆ ಸರ್ಕಾರದ ಯೋಜನೆಗಳನ್ನು ಜಾರಿಗೊಳಿಸಬೇಕಾಗಿರುವ ನೌಕರಶಾಹಿ, ರಾಜಕೀಯ ಹಿತಾಸಕ್ತಿ ಹಾಗೂ ಜನಸಮುದಾಯಗಳ ಭಾಗವಹಿಸುವಿಕೆಯಲ್ಲಿ ಬಹುದೊಡ್ಡ ಅಂತರ ಹುಟ್ಟುಹಾಕಿರುವುದು ಒಂದು ಕಾರಣವಾದರೇ, ಜನಸಮುದಾಯಗಳಿಗೆ ತಮ್ಮ ದೈನಂದಿನ ಜೀವನಕ್ಕೆ ಅತ್ಯಗತ್ಯವಾದ ಆಹಾರ, ಉಡುಪು, ವಸತಿಗಳ ಸಮಸ್ಯೆಯೇ ಬೃಹದಾಕಾರವಾಗಿ ಕಾಡುತ್ತಿರುವಾಗ ಸರ್ಕಾರದ ಯೋಜನೆಗಳಿಗೆ ಸ್ಪಂದಿಸಲು ಸಮಯವಾದರೂ ಎಲ್ಲಿಂದ ಬರಬೇಕು. ಈ ಕಾರಣದಿಂದ ಸರ್ಕಾರದ ನೂರಾರು ಯೋಜನೆಗಳ ಫಲಿತಾಂಶವು ಪುಸ್ತಕಗಳಲ್ಲಿಯೇ ನಿರ್ಧಾರವಾಗಿ, ಗೆದ್ದಲು ಕ್ರಿಮಿಗಳಿಗೆ ಆಹಾರವಾಗುತ್ತಿವೆ. ಇಂತಹ ದುಸ್ಥಿತಿಯಲ್ಲಿ ಗಣಿಕಾರ್ಮಿಕರ ಶಿಕ್ಷಣದ ಪ್ರಮಾಣವನ್ನು ಒಂದು ಸಮಸ್ಯೆಯಾಗಿ ನೋಡಲೇಬೇಕಾಗಿದೆ. ಈ ಹಿನ್ನೆಲೆಯಲ್ಲಿ ಮುಖ್ಯವಾಗಿ ೨ ಅಂಶಗಳನ್ನು ಚರ್ಚೆಗೆ ಒಳಪಡಿಸುವುದು ಸೂಕ್ತವಾದೀತು. ಮೊದಲನೆಯದಾಗಿ ಗಣಿಮಾಲೀಕರು ತಮ್ಮ ಉತ್ಪಾದನೆ, ವಿತರಣೆಯ ಜೊತೆಗೆ ಲಾಭಕ್ಕೆ ಕೊಡುವ ಮಹತ್ವದಲ್ಲಿ ಕೇವಲ ಶೇಕಡ ೧ ರಷ್ಟು ಮಾತ್ರ ಕಾರ್ಮಿಕರ ಶಿಕ್ಷಣದ ಕಡೆಗೆ ಗಮನಹರಿಸಿದರೆ ಸಾಕು. ಇಡೀ ಕಾರ್ಮಿಕ ವರ್ಗವೇ ಶಿಕ್ಷಿತಗೊಳ್ಳಲು

ಸಾಧ್ಯವಾಗುತ್ತದೆ. ಇದಕ್ಕೆ ಮಾಲೀಕ ವರ್ಗವು ಹಿರಿಯ ಗಣಿಕಾರ್ಮಿಕರನ್ನು ಬಿಟ್ಟು, ಉಳಿದ ಮಧ್ಯವಯಸ್ಕ, ಯುವಕ ಹಾಗೂ ಮಕ್ಕಳಿಗೆ ಅವಶ್ಯಕವಾದ ಶಿಕ್ಷಣದ ಕಾರ್ಯಯೋಜನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದರೆ ಗಣಿಗಾರಿಕೆಯಲ್ಲಿ ಅನಕ್ಷರತೆಯನ್ನು ಬೇರು ಸಹಿತ ಕಿತ್ತು ಹಾಕಬಹುದು. ಆದರೆ ಕ್ಷೇತ್ರಕಾರ್ಯದುದ್ದಕ್ಕೂ ಗಣಿ ಸಂಸ್ಥೆಗಳಿಂದಾಗಲೀ ಇಲ್ಲವೇ, ಮಾಲೀಕರಿಂದಾಗಲೀ ಇಂತಹ ಯಾವುದೇ ಪ್ರಯತ್ನಗಳು ಕಂಡುಬಂದಿಲ್ಲ. ಕೆಲವು ಗಣಿ ಸಂಸ್ಥೆಗಳು ಕಾರ್ಮಿಕರ ಮಕ್ಕಳ ವಿದ್ಯಾಭ್ಯಾಸಕ್ಕೆ ಅವಶ್ಯಕವಾದ ಶುಲ್ಕಗಳನ್ನು ಭರಿಸುವುದಾಗಿ, ಅರ್ಹತೆಗಳಿಗನುಗುಣವಾಗಿ ಶಿಷ್ಯವೇತನ ನೀಡುವುದಾಗಿ ಆಶ್ವಾಸನೆ ಕೊಡುತ್ತಿವೆ. ಆದರೆ ಆಯಾ ಸಂಸ್ಥೆಗಳಲ್ಲಿ ದುಡಿಯುವ ಪುರುಷ ಹಾಗೂ ಮಹಿಳಾ ಕಾರ್ಮಿಕರನ್ನು ಶಿಕ್ಷಣಕ್ಕಾಗಿ ಗಣಿಸಂಸ್ಥೆಯು ಹಮ್ಮಿಕೊಂಡಿರುವ ಯೋಜನೆಗಳ ಬಗ್ಗೆ ವಿಚಾರಿಸಿದಾಗ ತುಂಬಾ ನಿರಾಶದಾಯಕ ಉತ್ತರ ಮೂಡಿಬರುತ್ತದೆ. ಕೆಲವು ಖಾಸಗಿ ಗಣಿಯಲ್ಲಿ ದುಡಿಯುವ ಕಾರ್ಮಿಕರು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಹಣವನ್ನು ಸಾಲವಾಗಿ ಕೇಳಿದರೇ, ಕೊಡುವುದೇ ಅಸಾಧ್ಯವೆನ್ನುತ್ತಾರೆ. ಆದರೆ ಭಾರತ ಸರ್ಕಾರದ ಅಧೀನ ಸಂಸ್ಥೆಯಾದ ಎನ್.ಎಂ.ಡಿ.ಸಿ.ಯಲ್ಲಿ ಕಾರ್ಮಿಕರ ಮಕ್ಕಳಿಗಾಗಿ ಪ್ರಾಥಮಿಕ ಶಿಕ್ಷಣದಿಂದ ಹಿಡಿದು ವಿವಿಧ ಕಾಲೇಜ್ ಶಿಕ್ಷಣದವರೆಗೆ ವಿವಿಧ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದೆ. ಇತ್ತೀಚೆಗೆ ಜಿಲ್ಲೆಯ ಬೇರೆ ಬೇರೆ ಗಣಿ ಸಂಸ್ಥೆಗಳು ಸ್ಥಳೀಯ ವೃತ್ತಪತ್ರಿಕೆ, ಟಿ.ವ್ಹಿ. ಮಾಧ್ಯಮಗಳ ಮೂಲಕ ಕಾರ್ಮಿಕರು ಸೇರಿದಂತೆ ಇನ್ನಿತರ ಮಕ್ಕಳಿಗೂ ಶಾಲಾಶುಲ್ಕಗಳನ್ನು ಪಾವತಿಸಿರುವ ಕಾರ್ಯಕ್ರಮದ ಬಗ್ಗೆ ಸಾಕಷ್ಟು ಪ್ರಚಾರವನ್ನು ಪಡೆಯುತ್ತಿದ್ದಾರೆ.

ಗಣಿ ಕಾರ್ಮಿಕರ ಶಿಕ್ಷಣದ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚೆಯನ್ನು ಆರಂಭಿಸುವುದಾದರೆ ಬಳ್ಳಾರಿ ಜಿಲ್ಲೆಯಲ್ಲಿರುವ ಎಲ್ಲಾ ಗಣಿ ಮಾಲೀಕರನ್ನು ಅಪರಾಧಿಗಳ ಸ್ಥಾನದಲ್ಲಿಟ್ಟು ನೋಡಿದಾಗ ಮಾತ್ರ ಗಣಿ ಕಾರ್ಮಿಕರ ಶಿಕ್ಷಣದ ಅವ್ಯವಸ್ಥೆಗೆ ನ್ಯಾಯ ಒದಗಿಸಲು ಸಾಧ್ಯವಾಗುತ್ತದೆ. ಏಕೆಂದರೆ "೧೯೬೦ರ ಮೈನ್ಸ್‌ಕ್ರೇಷ್ ಕಾನೂನುಗಳ ಪ್ರಕಾರ ಪ್ರತಿಯೊಂದು ಗಣಿಪ್ರದೇಶದ ವ್ಯಾಪ್ತಿಯಲ್ಲಿ ಕಂಡುಬರುವ ಬಾಲಕ-ಬಾಲಕಿಯರ ಸಂರಕ್ಷಣೆ ಹಾಗೂ ಪೋಷಣಾಗೃಹಗಳಿಂದ ಹಿಡಿದು ಶಿಕ್ಷಣಕ್ಕೆ ಅವಶ್ಯಕವಾದ ಕಾರ್ಯಯೋಜನೆಗಳನ್ನು ಕೈಕೊಳ್ಳುವುದು ಕಡ್ಡಾಯವಾಗಿರುತ್ತದೆ."[೧೧] ಈ ಹಿನ್ನೆಲೆಯಲ್ಲಿ ಎಲ್ಲಾ ಗಣಿ ಮಾಲೀಕರು ಹಾಗೂ ಸಿಬ್ಬಂಧಿಯು ಹೇಗೆ ತಮ್ಮ, ತಮ್ಮ ಕಂಪನಿಯ ಉತ್ಪಾದನೆ ಹಾಗೂ ವಿತರಣೆಯನ್ನು ಹೆಚ್ಚಿಸಬೇಕು ಮತ್ತು ಕಂಪನಿಯ ಅತ್ಯಧಿಕ ಲಾಭಕ್ಕಾಗಿ ಯಾವ, ಯಾವ ಕ್ರಮಗಳನ್ನು ಕೈಗೊಳ್ಳಬೇಕು? ಕಂಪನಿಯ ಅಭಿವೃದ್ಧಿಗೆ ತೊಡಕಾಗಿರುವ ವಿವಿಧ ಕಾರಣಗಳನ್ನು ಯಾವ ರೀತಿ ಪರಿಹರಿಸಿಕೊಳ್ಳಬೇಕೆಂಬ ಇತ್ಯಾದಿ ಅಂಶಗಳ ಸುತ್ತಲು ಆಡಳಿತ ವರ್ಗದ ಕಾರ್ಯ ತಂತ್ರಗಳು ಯಾವಾಗಲೂ ಗಿರಕಿ ಹೊಡೆಯುತ್ತಿರುತ್ತವೆ. ಆದರೆ ಗಣಿಯಲ್ಲಿ ದುಡಿಯುತ್ತಿರುವ ಕಾರ್ಮಿಕರ ದುಡಿಮೆಯ ಬಗ್ಗೆ, ಕೂಲಿಯ ಬಗ್ಗೆ, ವಸತಿಯ ಬಗ್ಗೆ ಹಾಗೂ ಶಿಕ್ಷಣದ ಬಗ್ಗೆಯಾಗಲೀ

ಆಲೋಚಿಸುವ ಇಲ್ಲವೇ ಕಾರ್ಯಗತಗೊಳಿಸುವ ಸಂಗತಿಗಳು ತುಂಬಾ ಕಡಿಮೆಯೆಂದೇ ಹೇಳಬಹುದು. ಆದರೆ ಕಾರ್ಮಿಕರ ಶಿಕ್ಷಣಕ್ಕೆ ಸಂಬಂಧಿಸಿದಂತೆ ವಿಶ್ಲೇಷಣೆಗೊಳಪಡಿಸುವುದಾದರೆ ಗಣಿಯಲ್ಲಿ ದುಡಿಯುತ್ತಿರುವ ಕಾರ್ಮಿಕರು ಯಾವ ಹಂತದ ಶಿಕ್ಷಣವನ್ನು ಪಡೆದಿದ್ದಾರೆ, ಅವರು ಪಡೆಯುತ್ತಿರುವ ಶಿಕ್ಷಣ ಸೌಕರ್ಯಗಳು ಯಾವುವು ಅವರಿಗಿರುವ ಆದಾಯದ ಮೂಲಗಳೇನು ಎಂಬುದನ್ನು ಮಾಲೀಕವರ್ಗ ಆಲೋಚಿಸುವುದಾದರೆ ಕಾರ್ಮಿಕರ ಶಿಕ್ಷಣದ ಹಿಂಬೀಳಿಕೆಗೆ ಕಾರಣವಾದ ಅಂಶಗಳು ನಗ್ನಗೊಳ್ಳಲು ಸಾಧ್ಯವಾಗುತ್ತದೆ. ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ಗಣಿ ಕಾರ್ಮಿಕ ಮತ್ತು ಅವರ ಕುಟುಂಬದಲ್ಲಿ ಶಿಕ್ಷಣದ ಬಗ್ಗೆ ಅವರಲ್ಲಿರುವ ಉತ್ಸಾಹ, ಕಾತುರ ಹಾಗೂ ಗೌರವದ ಮನೋಭಾವನೆ ವ್ಯಕ್ತವಾದರೆ, ಗಣಿ ಮಾಲೀಕ ಹಾಗೂ ಸಿಬ್ಬಂದಿಗಳಲ್ಲಿ ಕಾರ್ಮಿಕರ ಶಿಕ್ಷಣಕ್ಕೆ ಸಂಬಂಧಿಸಿದಂತೆ ನಿರುತ್ಸಾಹ, ನಿಷ್ಕಾಳಜಿ, ನಿರ್ಲಕ್ಷ್ಯತೆಯ ಧೋರಣೆಗಳು ಕಂಡುಬರುತ್ತವೆ. ಇತ್ತೀಚಿನ ದಿನಗಳಲ್ಲಿ ಪ್ರತಿಯೊಬ್ಬ ಉತ್ಪಾದಕನು ಇಲ್ಲವೆ ಸಂಸ್ಥೆಗಳ ಮಾಲೀಕರು ಕಾರ್ಮಿಕ ಸಂಬಂಧಿತ ಉತ್ಪಾದನೆಗಿಂತಲೂ, ತಾಂತ್ರಿಕ ಸಂಬಂಧಿತ ಉತ್ಪಾದನ ಕಾರ್ಯತಂತ್ರಗಳನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಜಾಗತೀಕರಣದ ಸಂದರ್ಭದಲ್ಲಿ ಸರ್ಕಾರವು ಇಂತಹ ಆಯಾಮಗಳಿಗೆ ಮುಕ್ತವಾಗಿ ಅವಕಾಶ ಹಾಗೂ ಪರವಾನಿಗೆಯನ್ನು ಕೊಟ್ಟಿರುವುದರಿಂದ ನಮ್ಮ ಸುತ್ತಲಿನ ವ್ಯವಸ್ಥೆಯಲ್ಲಿ ನಿರುದ್ಯೋಗ, ಬಡತನ, ಅನಕ್ಷರತೆ, ಹಸಿವು, ಕೊಲೆ, ದರೋಡೆ ಹಿಂಸಾಚಾರದ ಸಂಗತಿಗಳು ಅತ್ಯಂತ ಸರಳವಾಗಿ ಸಹಜವೆಂಬಂತೆ ಕಂಡುಬರುತ್ತಿವೆ. ಇದಕ್ಕೆ ನಮ್ಮ ಘನ ಸರ್ಕಾರಗಳು ಅನುಸರಿಸುತ್ತಿರುವ ಅವೈಜ್ಞಾನಿಕ ನೀತಿಗಳೇ ಕಾರಣವೆನ್ನಬಹುದು.

ಹೀಗಾಗಿ ಗಣಿ ಕಾರ್ಮಿಕ ಸಮುದಾಯದ ಶಿಕ್ಷಣದ ಮಟ್ಟವನ್ನು ಹೆಚ್ಚಿಸಲು ಇಲ್ಲವೆ ಸುಧಾರಿಸಲು ಜಿಲ್ಲೆಯ ಗಣಿ ಮಾಲೀಕವರ್ಗವು ಈ ಕೆಳಗಿನ ಕೆಲವು ಕಾರ್ಯಯೋಜನೆಗಳನ್ನು ಕೈಗೊಳ್ಳುವುದು ಅತ್ಯವಶ್ಯಕ. ಅವುಗಳೆಂದರೆ,

- ಗಣಿ ಕಾರ್ಮಿಕರ ಮಕ್ಕಳ ಶಿಕ್ಷಣದ ಸೌಲಭ್ಯಕ್ಕಾಗಿ ಜಿಲ್ಲೆಯ ಎಲ್ಲಾ ಗಣಿ ಮಾಲೀಕರು ತಮ್ಮ ತಮ್ಮ ಅಧೀನ ಸಂಸ್ಥೆಗಳ ಕಾರ್ಮಿಕ ಕ್ಯಾಂಪ್‌ಗಳಲ್ಲಿ ಕ್ರಷ್‌ಗಳನ್ನು ಆರಂಭಿಸಬೇಕು. ಇದರಿಂದ ಕಾರ್ಮಿಕ ಕುಟುಂಬಗಳಲ್ಲಿರುವ ಮಹಿಳೆಯರ ಮೇಲೆ ಮಕ್ಕಳ, ಪಾಲನೆ ಹಾಗೂ ಪೋಷಣೆಯ ಜವಾಬ್ದಾರಿಯು ಕಡಿಮೆಯಾಗಿ, ಅವರ ಆರೋಗ್ಯವು ಸುಧಾರಿಸುತ್ತದೆ. ಹಾಗೆಯೇ ಕಾರ್ಮಿಕರ ಮಕ್ಕಳಿಗೆ ಪೌಷ್ಠಿಕ ಆಹಾರ, ಉಡುಪು, ಆರೋಗ್ಯದ ಬಗ್ಗೆ ಕಾಳಜಿ ವಹಿಸುವುದರಿಂದ ಮಕ್ಕಳು ಆರೋಗ್ಯವಂತರಾಗಿ ಬೆಳೆದು, ಒಳ್ಳೆಯ ಶಿಕ್ಷಣ ಪಡೆಯಲು ಸಾಧ್ಯವಾಗುತ್ತದೆ.
- ಸರ್ಕಾರವು ಮಕ್ಕಳ ಆರೋಗ್ಯ ಮತ್ತು ಶಿಕ್ಷಣಕ್ಕೆ ಪೂರ್ವಭಾವಿಯಾಗಿ ಹಮ್ಮಿಕೊಂಡಿರುವ ಅಂಗನವಾಡಿ ಕೇಂದ್ರಗಳು, ಬಾಲಾವಾಡಿಗಳು ಹಾಗೂ ಪೂರ್ವ ಪ್ರಾಥಮಿಕ ಶಾಲೆಗಳನ್ನು ಕಾರ್ಮಿಕ ಕ್ಯಾಂಪ್‌ಗಳಲ್ಲಿಯೇ ಸ್ಥಾಪಿಸುವಂತೆ ಸರ್ಕಾರದ ಮೇಲೆ ಒತ್ತಡವನ್ನು ಹೇರಬೇಕು.

- ಯುವಕ-ಯುವತಿಯರಿಗಾಗಿ ಕಾರ್ಮಿಕ ಕ್ಯಾಂಪ್‌ಗಳಲ್ಲಿಯೇ ಪ್ರಾಥಮಿಕ ಹಾಗೂ ಹಿರಿಯ ಪ್ರಾಥಮಿಕ, ಶಾಲೆಗಳನ್ನು ಆರಂಭಿಸುವಂತೆ ಸ್ಥಳೀಯ ಆಡಳಿತ ಸಂಸ್ಥೆಗಳ ಮೇಲೆ ಒತ್ತಡವನ್ನು ತರುವುದು.
- ಕಾರ್ಮಿಕ ಕ್ಯಾಂಪ್‌ಗಳಲ್ಲಿ ಗಣಿ ಮಾಲೀಕರು ತಮ್ಮ ಖಾಸಗಿ ಒಡೆತನದಲ್ಲಿಯೇ ಕಾರ್ಮಿಕ ಕುಟುಂಬದ ಶಿಕ್ಷಣದ ಪ್ರಮಾಣವನ್ನು ಹೆಚ್ಚಿಸಲು ಖಾಸಗಿ ಶಾಲೆಗಳನ್ನು ಹೆಚ್ಚೂ ಹೆಚ್ಚಾಗಿ ಆರಂಭಿಸುವುದು.
- ಕಾರ್ಮಿಕರ ಮಕ್ಕಳ ಪ್ರಾಥಮಿಕ ಹಂತದ ನಂತರ ವಿದ್ಯಾಭ್ಯಾಸದ ಅನುಕೂಲತೆಗಾಗಿ ಗಣಿ ಮಾಲೀಕರೇ ನೇರವಾಗಿ ವಾಹನದ ಸೌಕರ್ಯವನ್ನು ಕಲ್ಪಿಸಿಕೊಡಬೇಕು.
- ಕಾರ್ಮಿಕರಲ್ಲಿ ಸಾಕ್ಷರತೆಯ ಬಗ್ಗೆ ಅಭಿರುಚಿಯನ್ನು ಮತ್ತು ಆಸಕ್ತಿಯತನ್ನು ಬೆಳೆಸಲು ಓದುತ್ತಿರುವ ಎಲ್ಲಾ ಮಕ್ಕಳಿಗೆ ಉಡುಪು, ಶಾಲಾಶುಲ್ಕ ಹಾಗೂ ಪುಸ್ತಕಗಳನ್ನು ಪುಕ್ಕಟೆಯಾಗಿ ವಿತರಿಸಬೇಕು.
- ಶಿಕ್ಷಿತ ಕಾರ್ಮಿಕ ಕುಟುಂಬವನ್ನು ಗುರುತಿಸುವ ಮೂಲಕ ಬಹಿರಂಗವಾಗಿ ಅವರನ್ನು ಗೌರವಿಸುವ ಇಲ್ಲವೇ ಸತ್ಕರಿಸುವ ಹತ್ತಾರು ಯೋಜನೆಗಳನ್ನು ಕೈಗೊಂಡಾಗ ಕಾರ್ಮಿಕ ಕುಟುಂಬಗಳು ತಮ್ಮ ಮೌಢ್ಯವನ್ನು ತೊಡೆದು ಹಾಕಿ, ಶಿಕ್ಷಣವನ್ನು ಪಡೆಯಲು ಇಲ್ಲವೆ ಮಕ್ಕಳನ್ನು ಶಿಕ್ಷಣಕ್ಕೆ ಸೇರಿಸಲು ಮುಂದೆ ಬರಲು ಸಾಧ್ಯವಾಗುತ್ತದೆ.
- ಗಣಿ ಮಾಲೀಕರು ಕಾರ್ಮಿಕ ಮಕ್ಕಳಲ್ಲಿ ಉತ್ತಮ ಅಂಕಗಳನ್ನು ಪಡೆದವರನ್ನು ಗುರುತಿಸಿ, ಅವರಿಗೆ ಪ್ರೋತ್ಸಾಹಕ ಹಣ, ಉಡುಪು ಮತ್ತು ಬಹುಮಾನಗಳನ್ನು ನೀಡಬೇಕು. ಇಂತಹ ಪ್ರಯತ್ನಗಳಿಂದ ಮಕ್ಕಳಲ್ಲಿ ಉತ್ಸಾಹ; ಸ್ಪರ್ಧಾ ಮನೋಭಾವನೆಯನ್ನು ಬೆಳೆಸಬಹುದು.
- ಹಿರಿಯ ಗಣಿ ಕಾರ್ಮಿಕರಲ್ಲಿ ಶಿಕ್ಷಣದ ಬಗ್ಗೆ ಆಸಕ್ತಿಯನ್ನು ಹುಟ್ಟಿಸಲು ರಾತ್ರಿ ಶಾಲೆಗಳು ಅಥವಾ ಸಂಹವನ ಮಾಧ್ಯಮಗಳ ಮೂಲಕ ಅವರ ವೈಚಾರಿಕತೆಯನ್ನು ಬದಲಾಯಿಸುವ ಕ್ರಮಗಳನ್ನು ಅನುಸರಿಸಿ, ಶಿಕ್ಷಣದಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸುವುದು.
- ಕಾರ್ಮಿಕರಲ್ಲಿ ಶಿಕ್ಷಣವನ್ನು ಹೆಚ್ಚಿಸಲು ಸರ್ಕಾರ ಹಾಗೂ ಖಾಸಗಿ ಸಂಘ-ಸಂಸ್ಥೆಗಳು ಸಂಚಾರಿ ಶಿಕ್ಷಣ ಕೇಂದ್ರಗಳನ್ನು, ಸಂಚಾರಿ ಗ್ರಂಥಾಲಯ ವ್ಯವಸ್ಥೆಯನ್ನು ರೂಪಿಸಿದಾಗ ಕಾರ್ಮಿಕರಲ್ಲಿ ಶಿಕ್ಷಣದ ಅಭಿರುಚಿಯನ್ನು ಮೂಡಿಸಬಹುದು.
- ಜಿಲ್ಲೆಯಲ್ಲಿರುವ ಪ್ರತಿಯೊಬ್ಬ ಗಣಿ ಮಾಲೀಕನು ತಮ್ಮ ತಮ್ಮ ಕಾರ್ಮಿಕ ಕ್ಯಾಂಪ್‌ಗಳಲ್ಲಿ

ಶಿಕ್ಷಿತರ ಹಾಗೂ ಅಶಿಕ್ಷಿತರ ಪ್ರಮಾಣವನ್ನು ವರ್ಷಕ್ಕೊಮ್ಮೆ ಘೋಷಣೆ ಮಾಡಬೇಕು. ಇಂತಹ ಕ್ರಮದಿಂದ ಆಯಾ ಗಣಿ ಸಂಸ್ಥೆಗಳಲ್ಲಿ ಪೈಪೋಟಿ ಬೆಳೆದು ಕಾರ್ಮಿಕರ ಶಿಕ್ಷಣಕ್ಕೆ ಉತ್ತೇಜನ ದೊರೆಯುತ್ತದೆ.

- ಕಾರ್ಮಿಕರ ಶಿಕ್ಷಣದ ಅಭಿವೃದ್ಧಿಗಾಗಿ ಗಣಿ ಸಂಸ್ಥೆಗಳು ಪ್ರತ್ಯೇಕ ಸಿಬ್ಬಂದಿಯನ್ನು ಹಾಗೂ ಆಯಾ ಗಣಿ ಸಂಸ್ಥೆಗಳಲ್ಲಿರುವ ಶಿಕ್ಷಣ ಸ್ವರೂಪವನ್ನು ಬಹಿರಂಗ ಪಡಿಸಬೇಕು.
- ಮಹಿಳಾ ಕಾರ್ಮಿಕರಿಗೆ ಉದ್ಯೋಗ ಆಧಾರಿತ ಶಿಕ್ಷಣವನ್ನು ಪರಿಚಯಿಸುವ ಮೂಲಕ ತಮ್ಮ ಮಕ್ಕಳ ಶಿಕ್ಷಣಕ್ಕೆ ಉತ್ಸಾಹಕರಾಗುವಂತೆ ಕಾರ್ಮಿಕ ಸಮುದಾಯಗಳನ್ನು ತರಬೇತಿಗೊಳಿಸುವುದು.
- ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿರುವ ಗಣಿ ಮಾಲೀಕರೆಲ್ಲರೂ ಒಂದೆಡೆ ಸಭೆ ಸೇರಿ, ತಮ್ಮ ತಮ್ಮ ಸಂಸ್ಥೆಗಳಲ್ಲಿ ಹಮ್ಮಿಕೊಂಡಿರುವ ಶಿಕ್ಷಣದ ಕಾರ್ಯಯೋಜನೆಗಳನ್ನು ಚರ್ಚಿಸುವ ಹಾಗೂ ಅಡ್ಡಿ, ಆತಂಕಗಳ ಬಗ್ಗೆ ಪರಿಷ್ಕರಿಸುವ ಸಭೆ, ಸಮಾರಂಭಗಳನ್ನು ಹಮ್ಮಿಕೊಳ್ಳಬೇಕು. ಇದರಿಂದ ಸರ್ಕಾರವು ಕಾರ್ಮಿಕರ ಶಿಕ್ಷಣದ ಅಭಿವೃದ್ಧಿಗೆ ಸಂಬಂಧಿಸಿದಂತೆ ಹತ್ತಾರು ನಿಲುವುಗಳನ್ನು ಪ್ರಕಟಿಸಲು ಸಾಧ್ಯವಾಗುತ್ತದೆ.
- ಕಾರ್ಮಿಕರ ಬೌದ್ಧಿಕ ಜ್ಞಾನದ ವಿಸ್ತರಣೆಗೆ ಅನುಕೂಲವಾಗಲು ಕಾರ್ಮಿಕ ಕುಟುಂಬಗಳಿಗೆ ಪ್ರವಾಸ, ತರಬೇತಿ, ವಿಶೇಷ ಉಪನ್ಯಾಸ ಹಾಗೂ ಚರ್ಚೆ ಕಮ್ಮಟಗಳನ್ನು ಹಮ್ಮಿಕೊಂಡು ಶಿಕ್ಷಣ ಪಡೆಯಲು ಮುಂದೆ ಬರುವಂತೆ ಕಾರ್ಮಿಕ ಕುಟುಂಬವನ್ನು ಜಾಗೃತಗೊಳಿಸುವುದು.
- ಕಾರ್ಮಿಕರಿಗೆ ಹೊರಗಿನ ಜ್ಞಾನವನ್ನು ಪರಿಚಯಿಸಲು ವಿದ್ಯುತ್, ರೇಡಿಯೋ, ದೂರದರ್ಶನ, ಸಿನಿಮಾ, ನಾಟಕಗಳ ವ್ಯವಸ್ಥೆಯನ್ನು ಕಲ್ಪಿಸಬೇಕು.

ಹೀಗೆ ಪ್ರತಿಯೊಂದು ಗಣಿಸಂಸ್ಥೆಯು ಈ ಮೇಲಿನ ಸಲಹೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದ್ದೇ ಆದರೆ ಗಣಿ ಕಾರ್ಮಿಕರ ಶಿಕ್ಷಣದ ಪ್ರಮಾಣವನ್ನು ವಿಸ್ತರಿಸಲು ಅಥವಾ ಸುಧಾರಿಸಲು ಸಾಧ್ಯವಾಗುತ್ತದೆ. ಜೊತೆಗೆ ಸರ್ಕಾರ ಮತ್ತು ಸ್ಥಳೀಯ ಸಂಘಸಂಸ್ಥೆಗಳು ಈ ಮೇಲಿನ ಎಲ್ಲಾ ಪರಿಹಾರೋಪಾಯಗಳನ್ನು ಗಣಿ ಸಂಸ್ಥೆಗಳು ಪಾಲಿಸುತ್ತಿವೆಯೋ ಇಲ್ಲವೋ ಎಂಬುದನ್ನು ಮೇಲ್ವಿಚಾರಣೆ ಮಾಡಬೇಕು. ಒಂದು ವೇಳೆ ಯಾವುದೇ ಗಣಿ ಸಂಸ್ಥೆಯು ಶಿಕ್ಷಣದ ಕಾರ್ಯಯೋಜನೆಗಳನ್ನು ಜಾರಿಗೊಳಿಸಲು ಅಸಮರ್ಥವಾದ್ದಲ್ಲಿ ಅಂತಹ ಗಣಿಸಂಸ್ಥೆಗಳ ವಿರುದ್ಧ ಪ್ರಚಾರ ಕಾರ್ಯ, ಪರವಾನಗಿಯ ರದ್ಧತಿ, ದಂಡ, ಶುಲ್ಕಗಳನ್ನು ವಿಧಿಸುವಂಥ ನೀತಿಗಳನ್ನು ಸರ್ಕಾರ ಕಟ್ಟುನಿಟ್ಟಾಗಿ ಕಾರ್ಯಗತಗೊಳಿಸುವಂತಾದಾಗ ಮಾತ್ರ ಗಣಿಕಾರ್ಮಿಕರ ಶಿಕ್ಷಣದ ಸಮಸ್ಯೆಗಳನ್ನು ಸುಧಾರಿಸಲು ಸಾಧ್ಯವಾಗುತ್ತದೆ.

೪.೮. ಸಂಘಟನೆ

ಸಂಘಟನೆಯ ಪ್ರಕ್ರಿಯೆಗೆ ಸುದೀರ್ಘವಾದ ಇತಿಹಾಸವಿದೆ. ಸಂಘಟನೆಯು ಪ್ರಕೃತಿಯ ಗರ್ಭದಲ್ಲಿನ ನೀತಿ-ನಿಯಮಗಳಿಂದ ಬೆಳೆದು ಬಂದಿರುವುದನ್ನೂ ಪ್ರಕೃತಿಯಲ್ಲಿರುವ ಪ್ರಾಣಿಗಳಿಂದ, ಪಕ್ಷಿಗಳಿಂದ ಹಾಗೂ ಸಣ್ಣ-ಪುಟ್ಟ ಕ್ರಿಮಿ-ಕೀಟಗಳಿಂದಾಗಿ ಸಾವಿರಾರು ಜೀವಕೋಶಗಳಿಂದಲೂ ತಿಳಿಯಬಹುದು. ಇದಕ್ಕೆ ಪಾರಿವಾಳಗಳು, ಜೇನ್ನೊಣಗಳು, ಇರುವೆ ಸಾಲು ಇತ್ಯಾದಿ ಸಂಘಟನೆಯ ಪ್ರಾಮುಖ್ಯತೆಗೆ ಸಾಕ್ಷಿಯಾಗಿ ನಿಲ್ಲುತ್ತವೆ. ಒಂದು ವೇಳೆ ಸಂಘಟನೆಯನ್ನು ತೊರೆಯುವುದಾಗಲೀ, ಅದರಿಂದ ದೂರವಿರುವುದಾಗಲೀ ಕಷ್ಟಸಾಧ್ಯ, ಏಕೆಂದರೆ "ಹಿಂಡನ್ನಗಲಿದ ತುರು-ಕರುವಿನಂತೆ" ಎಂಬ ಲೋಕೋಕ್ತಿಯು ಅಸಂಘಟನೆಯಿಂದಾಗುವ ಅಚಾತುರ್ಯವನ್ನು ಮನದಟ್ಟು ಮಾಡುತ್ತದೆ. ಹೀಗಾಗಿ ಸಂಘಟನೆಯಿಂದಾಗುವ ಹತ್ತಾರು ಮಾರ್ಗೋಪಾಯಗಳನ್ನು ತಿಳಿಸುವ ಸೂಚ್ಯಾರ್ಥಕಗಳ ಬಳಕೆಯು ನಮ್ಮ ಸುತ್ತಮುತ್ತಾ ಪ್ರತಿನಿತ್ಯ ಕೇಳಿಬರುತ್ತವೆ. ಅವುಗಳೆಂದರೆ "ಹನಿ-ಹನಿ ಕೂಡಿದರೆ ಹಳ್ಳ", "ತೆನೆ-ತೆನೆ ಕೂಡಿದರೆ ಬಳ್ಳ", "ಒಗ್ಗಟ್ಟಿನಲ್ಲಿ ಬಲವಿದೆ", "ಒಕ್ಕಣ್ಣಿಗಿಂತ ಮುಕ್ಕಣ್ಣು ಲೇಸು" ಎಂಬೀ ನಾಣ್ಣುಡಿಗಳು ಸಂಘಟನೆಯಲ್ಲಿ ಅಡಗಿರುವ ಹತ್ತಾರು ಸಂದೇಶಗಳನ್ನು ಬಿತ್ತರಿಸುತ್ತವೆ.

ಸಂಘಟನೆಯು ಬಹುಮುಖ್ಯವಾಗಿ ಆಯಾ ವ್ಯಕ್ತಿ, ಪ್ರಾಣಿ, ಸಮಾಜ ಮತ್ತು ಸಮುದಾಯಗಳಲ್ಲಿರುವ ಐಕ್ಯತೆಯನ್ನು ಪ್ರತಿನಿಧಿಸುತ್ತದೆ ಹಾಗೂ ಅವುಗಳ ಸಂಬಂಧ ಹಾಗೂ ಸ್ವರೂಪಗಳನ್ನು ಹೊರಗಿನ ಆಕ್ರಮಣಗಳಿಂದ ರಕ್ಷಿಸುವ ಹಾಗೂ ಪ್ರತಿರೋಧಿಸುವ ಮನಸ್ಥಿತಿಯನ್ನು ಬೆಳೆಸುವಲ್ಲಿ ಪ್ರಧಾನ ಪಾತ್ರ ವಹಿಸುತ್ತದೆ. ಪ್ರತಿಯೊಂದು ಸಂಘಟನೆಯು ತನ್ನ ಆಂತರಿಕ ಸಂಬಂಧಗಳ ಬಾಹ್ಯ ರಕ್ಷಣೆಯನ್ನು ಮಾಡುವ ಕಾವಲುಗಾರನಾಗಿ ಕಾರ್ಯವನ್ನು ಮಾಡುತ್ತದೆ. ಅದಕ್ಕಾಗಿಯೇ ಪಕ್ಷಿಗಳೆಲ್ಲಾ ಒಂದಾದರೆ ಹುಲಿಯ ಚರ್ಮವನ್ನೇ ಸುಲಿಯಬಹುದು ಎಂಬೀ ಗಾದೆಯ ಮಾತಿನಂತೆ ಸಂಘಟನೆಯು ಭಯ, ಆತಂಕ, ಹೆದರಿಕೆ ಅಸಮರ್ಥತೆಯನ್ನು ಹೋಗಲಾಡಿಸಿ, ಪ್ರತಿಯೊಬ್ಬರಲ್ಲಿ ಆತ್ಮಸ್ಥೈರ್ಯ, ನಂಬಿಕೆ, ವಿಶ್ವಾಸ, ನೆಮ್ಮದಿ ಹಾಗೂ ಶಾಂತಿಯನ್ನು ಹುಟ್ಟುಹಾಕುವಲ್ಲಿ ಸಮರ್ಥವಾಗಿದೆ. ಹೇಗೆಂದರೆ ಮೃಗರಾಜನೆಂದು ಕರೆಯಲ್ಪಡುವ ಹಿಂಸಾಪ್ರವೃತ್ತಿಯುಳ್ಳ ಮತ್ತು ಬಲಶಾಲಿಯಾದ ಹುಲಿಯನ್ನು ಅತ್ಯಂತ ಕ್ಷುದ್ರ ಸಾಮರ್ಥ್ಯದ ಪಕ್ಷಿಗಳೆಲ್ಲಾ ಸೇರಿ ಕೊಂದು ಹಾಕಬಲ್ಲವು ಎಂಬ ಗಾದೆಯು ಏನೆಲ್ಲಾ ವಿಶ್ಲೇಷಣೆಗಳಿಗೆ ಆಧಾರವಾಗಿ ನಿಲ್ಲುತ್ತದೆ.

ಸಂಘಟನೆಯ ಪ್ರವೃತ್ತಿಯನ್ನು ಸಸ್ಯವರ್ಗಗಳಲ್ಲಿಯು ಕಾಣಬಹುದು. ಅರಣ್ಯ ಪ್ರದೇಶದಲ್ಲಿರುವ ಬಹಳಷ್ಟು ಗಿಡ-ಮರ-ಬಳ್ಳಿಗಳೆಲ್ಲವೂ ಒಂದು ಇನ್ನೊಂದನ್ನು ಅವಲಂಬಿಸಿಯೋ ಇಲ್ಲವೆ ಆಧಾರವಾಗಿಯೋ ತನ್ನ ಅಸ್ಥಿತ್ವವನ್ನು ಕಂಡುಕೊಂಡಿರುತ್ತದೆ. ಇಂತಹ ಸಂದರ್ಭದಲ್ಲಿ ಅರಣ್ಯದಲ್ಲಿರುವ ಅವುಗಳ

ಅವಲಂಬಿತ ಸಸ್ಯವರ್ಗ ನಾಶವಾಗಿದ್ದೇ ತಡ ಮತ್ತೊಂದು ಸಸ್ಯವರ್ಗ ಒಣಗಿ ಹೋಗಿ ಇಡೀ ಕಾಡೇ ನಾಶವಾಗಿಬಿಡುತ್ತದೆ ಎಂಬುದು ಅನೇಕ ಸಸ್ಯಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಇದಕ್ಕೆ ಪಶ್ಚಿಮ ಕರಾವಳಿಯ ಕಾಡುಗಳಲ್ಲಿ ನಡೆದಿರುವ. ಗಣಿಗಾರಿಕೆಯಿಂದಾಗಿ ಆ ಭಾಗದಲ್ಲಿದ್ದ "ಶೋಲಾ" ಹುಲ್ಲುಗಾವಲಿನ ನಾಶದಿಂದ ಇಡೀ ಅರಣ್ಯದ ನಾಶಕ್ಕೆ ಚರಮ ಗೀತೆ ಹಾಡಿದಂತೆ, ಇತ್ತೀಚೆಗೆ ಪಶ್ಚಿಮ ಘಟ್ಟಗಳಲ್ಲಿ ಮಳೆಯ ಪ್ರಮಾಣ ಕಡಿಮೆಯಾಗಿರುವುದಕ್ಕೆ ಶೋಲಾ ಹುಲ್ಲುಗಾವಲಿನ ನಾಶವು ಪ್ರಮುಖ ಕಾರಣವಾಗಿದೆ (ಶಿವರಾಮಯ್ಯ, ಕುದುರೆಮುಖ, ಸಿ.ವಿ.ಜಿ. ಪಬ್ಲಿಕೇಷನ್, ೨೦೦೩, ಪು.೪೨) ಎಂಬ ಅನೇಕ ಪರಿಸರ ತಜ್ಞರ ಅಭಿಮತವು ಸಾಕ್ಷಿಯಾಗಿ ನಿಲ್ಲುತ್ತದೆ. ಅಂದರೆ ಯಾವುದೇ ಒಂದು ವರ್ಗ ಪ್ರಕೃತಿಯಲ್ಲಿ ನಾಶಗೊಂಡರೆ ಇತರೇ ವರ್ಗಗಳಲ್ಲಿಯು ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ಅವುಗಳು ಪರಸ್ಪರ ಅವಸಾನ ಹೊಂದುವುದನ್ನು ಇತಿಹಾಸದುದ್ದಕ್ಕೂ ನೂರಾರು ಉದಾಹರಣೆಗಳನ್ನು ಕಾಣಬಹುದು. ಅದಕ್ಕಾಗಿ ಸಂಘಟನೆಯನ್ನು ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಸಂರಕ್ಷಣೆ ಹಾಗೂ ಬೌದ್ಧಿಕ ಪ್ರಗತಿಯ ಕುರುಹಾಗಿ ಪರಿಗಣಿಸಲಾಗುತ್ತಿದೆ.

ಪ್ರಸ್ತುತ ಜಾಗತೀಕರಣದ ಸನ್ನಿವೇಶದಲ್ಲಿ ಸಂಘಟನೆಯ ಪ್ರಕ್ರಿಯೆಯು ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ಥಾನ-ಮಾನಗಳ ನಿರ್ಧಾರಕವೂ ಹೌದು. ಅದು ಆಯಾ ವರ್ಗಗಳ ರಕ್ಷಣೆ, ಪೋಷಣೆ ಹಾಗೂ ಬೆಳವಣಿಗೆಯನ್ನು ನಿರಂತರವಾಗಿ ಕಾಯುವ ರಕ್ಷಕವಚವಾಗಿ ಕಂಡುಬರುತ್ತದೆ. ಒಂದು ವೇಳೆ ಸಂಘಟನೆಯನ್ನು ತೊರೆದು ಜೀವಿಸುವುದು ತುಂಬಾ ಕಠಿಣ, ಅಂತಹ ಯಾವುದೇ ನಿರ್ಧಾರವು ಬುದ್ಧಿ ಭ್ರಮಣೆಗೆ, ದೈಹಿಕ ನಿಶ್ಯಕ್ತಿಗೆ, ಬೌದ್ಧಿಕ ಏರಿಳಿತಗಳಿಗೆ ಇಲ್ಲವೇ ಅನೇಕ ಒತ್ತಡಗಳಿಗೆ ಕಾರಣವಾಗಿ ಸರ್ವನಾಶಕ್ಕೆ ಆಹ್ವಾನವಿತ್ತಂತೆ. ಇದಕ್ಕೆ ಆಧಾರವಾಗಿ ಪ್ರಾಚೀನ ಕಾಲದ ಮಾನವ ಕುಟುಂಬವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಸಂಘಟನೆಯ ಕೆಲವು ದೃಷ್ಟಾಂತಗಳು ಕಂಡುಬರುತ್ತವೆ. ಯಾವುದೇ ಒಬ್ಬ ವ್ಯಕ್ತಿ ತನ್ನ ಸಮಾಜ ಅಥವಾ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಮತ್ತು ನೈತಿಕ ಮೌಲ್ಯಗಳಿಗೆ ದಕ್ಕೆಯನ್ನುಂಟು ಮಾಡಿದರೆ, ಅಂತಹವರನ್ನು ಶಿಕ್ಷಿಸಲು ಇಲ್ಲವೇ ಪಶ್ಚಾತ್ತಾಪಕ್ಕೆ ಅನುವು ಮಾಡಿಕೊಡಲು, ಕಾಡಿಗೆ ಅಟ್ಟುವ ಅನೇಕ ಸಂದರ್ಭಗಳನ್ನು ಮಾನವನ ಸಾಂಸ್ಕೃತಿಕ ಜೀವನವನ್ನು ಬಿತ್ತರಿಸುವ ರಾಮಾಯಣ ಹಾಗೂ ಮಹಾಭಾರತಗಳಲ್ಲಿ ಕಾಣುತ್ತೇವೆ. ಇಂತಹ ಅನೇಕ ಘಟನೆಗಳು ಸಂಘಟನೆಯುಳ್ಳ ಜೀವನದ ಮಹತ್ವವನ್ನು ಎತ್ತಿಹಿಡಿಯುತ್ತವೆ. ಪ್ರಸ್ತುತ ಸಂದರ್ಭಗಳಂತೂ ಸಂಘಟನೆಗೆ ವಿಶಾಲವಾದ ಅಸ್ತಿಭಾರವನ್ನು ಒದಗಿ ಕೊಡುತ್ತದೆ. ಹೇಗೆಂದರೆ ದಿನನಿತ್ಯವು ರೇಡಿಯೋ, ಪತ್ರಿಕೆಗಳಲ್ಲಿ ಕೋಮುಗಲಭೆ, ದರೋಡೆ, ದಬ್ಬಾಳಿಕೆ, ದೌರ್ಜನ್ಯದ ಪ್ರಕರಣಗಳು ಪ್ರಕಟಗೊಳ್ಳುವುದನ್ನು ಗಮನಿಸಿದಾಗ, ವಾಸ್ತವಿಕವಾಗಿ ಯಾವುದೇ ವ್ಯಕ್ತಿಯಾಗಲೀ ಅಥವಾ ಸಂಸ್ಥೆಯಾಗಲೀ

ಸ್ವತಂತ್ರವಾಗಿ ಬದುಕನ್ನು ಕಟ್ಟಿಕೊಳ್ಳುವುದು ಕಷ್ಟ ಸಾಧ್ಯವೆಂದೇ ಹೇಳಬಹುದು. ಏಕೆಂದರೆ ಸಂವಿಧಾನ ದಯಪಾಲಿಸಿದ ಅನೇಕ ಹಕ್ಕುಗಳು ಮತ್ತು ಅವಕಾಶಗಳನ್ನು ಪಡೆಯಲು ಹಾಗೂ ಅವುಗಳನ್ನು ಸದುಪಯೋಗಪಡಿಸಿಕೊಳ್ಳಲು ಹೋರಾಟವನ್ನು ಮಾಡಬೇಕಾದ ದುಸ್ಥಿತಿ ನಮ್ಮೆದುರಿಗಿದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಬ್ಬ ವ್ಯಕ್ತಿ, ಸಮಾಜ, ಸಮುದಾಯಗಳು ತಮ್ಮಲ್ಲಿರುವ ಆಂತರಿಕ ಕಲಹವನ್ನು ಮರೆತು, ಸಂಘಟಿತಗೊಂಡಾಗ ಮಾತ್ರ, ಅವುಗಳ ಅಭಿವೃದ್ಧಿ, ಸ್ಥಿರತೆ, ಹಾಗೂ ಸೌಖ್ಯವನ್ನು ಕಾಣಲು ಸಾಧ್ಯವಾಗುತ್ತದೆ. ಇದಕ್ಕೆ ಕರ್ನಾಟಕ ರಾಜ್ಯದಲ್ಲಿ ದೊಡ್ಡ ಶಕ್ತಿಯಾಗಿ ಹೊರಹೊಮ್ಮಿದ ಲಿಂಗಾಯಿತ ಮತ್ತು ಒಕ್ಕಲಿಗ ಸಮಾಜಗಳೇ ಸಾಕ್ಷಿಯಾಗಿ ನಿಲ್ಲುತ್ತವೆ. ಇಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದ ಅಂಶವೆನೆಂದರೆ ಲಿಂಗಾಯಿತ ಅಥವಾ ಒಕ್ಕಲಿಗರೆಲ್ಲಾ ಒಂದೇ ಜಾತಿಯಲ್ಲ, ಹತ್ತಾರು ಉಪಜಾತಿಗಳು ಹಾಗೂ ಪಂಗಡಗಳೆಲ್ಲಾ ಸೇರಿ ತಮ್ಮ ಆಂತರಿಕ ಭಿನ್ನತೆಗಳನ್ನು ಮರೆತು ಒಂದು ವೇದಿಕೆಗೆ ಬಂದಿದ್ದರಿಂದಲೇ ಕರ್ನಾಟಕದಲ್ಲಿ ಇಂದು ದೊಡ್ಡ ಶಕ್ತಿಯಾಗಿ ಬೆಳೆದು, ರಾಜಕೀಯವಾಗಿ ಉನ್ನತ ಹುದ್ದೆಗಳನ್ನು ಪಡೆಯಲು ಸಾಧ್ಯವಾಗಿರುವುದು. ಇಂತಹ ತಂತ್ರಗಳನ್ನು ಇತ್ತೀಚಿಗೆ ರಾಜ್ಯಮಟ್ಟದಲ್ಲಿ ಸಂಘಟನೆಗೊಳ್ಳುತ್ತಿರುವ "ಕುರುಬ" ಸಮುದಾಯದಲ್ಲಿಯೂ ಮನಗಾಣಬಹುದು. ಹೀಗಾಗಿ ಅಸ್ತಿತ್ವದಲ್ಲಿರುವ ನೂರಾರು ಜಾತಿಗಳು ತಮ್ಮೆಲ್ಲಾ ರೂಡಿ-ಸಂಪ್ರದಾಯ-ಪದ್ಧತಿ ಹಾಗೂ ಆಚರಣೆಗಳನ್ನು ಬದಿಗೊತ್ತಿ, ತಾವೆಲ್ಲಾ ಒಂದೇ ಎಂಬ ಮನೋಭಾವನೆಯಿಂದ ಸಂಘಟಿತಗೊಂಡು, ಒಂದೇ ವೇದಿಕೆಯ ಕೆಳಗಡೆ ಬಂದಾಗ ಮಾತ್ರ ಅಭಿವೃದ್ಧಿ ಸಾಧ್ಯವೆಂಬ ಕಟುಸತ್ಯವನ್ನು ಪ್ರತಿಯೊಬ್ಬರು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಭಾರತದ ಮೂಲನಿವಾಸಿಗಳಾದ ಆದಿವಾಸಿಗಳು, ಬುಡಕಟ್ಟುಗಳು, ಅಲೆಮಾರಿ ಪಂಗಡಗಳು ಒಂದು ಶಕ್ತಿಯಾಗಿ ಸಂಘಟಿತಗೊಳ್ಳದೇ ಇರುವುದರಿಂದ ಅವರ ಮೇಲಿನ ದೌರ್ಜನ್ಯ, ಆರೋಪ, ಶೋಷಣೆ, ಹಾಗೂ ದಬ್ಬಾಳಿಕೆಗಳಿಗೆ ಒಂದು ಮಿತಿಯೇ ಇಲ್ಲವಾಗಿದೆ. ಈ ಕಾರಣದಿಂದಾಗಿ 'ಸಂಘಟನೆಯು' ಪ್ರಸ್ತುತ ಕಾಲಘಟ್ಟದಲ್ಲಿ ಬಹುಮುಖ್ಯವಾದ ಹಾಗೂ ಪರಿಣಾಮಕಾರಿ 'ಅಸ್ತ್ರ'ವೆಂದು ಕರೆಯಬಹುದು.

ಇಂತಹ ವೈಶಿಷ್ಟ್ಯಪೂರ್ಣವಾದ ಸಂಘಟನೆಯ ಪ್ರವೃತ್ತಿ ಜಿಲ್ಲೆಯ ಗಣಿ ಕಾರ್ಮಿಕರಲ್ಲಿದೆಯೆ? ಇದ್ದರೆ ಅದು ಯಾವ ರೀತಿ ಕಾರ್ಯನಿರ್ವಹಿಸುತ್ತಿದೆ? ಇಲ್ಲವಾದರೆ ಅದಕ್ಕೆ ಕಾರಣಗಳೇನು? ಎಂಬುದನ್ನು ಪರಿಶೀಲಿಸುವುದರ ಜೊತೆಗೆ ಸಂಘಟನೆಯಿಂದಾಗುವ ಪ್ರಯೋಜನಗಳನ್ನು ಚರ್ಚಿಸಿ, ಗಣಿ ಕಾರ್ಮಿಕರಲ್ಲಿ ಜಾಗೃತಿಯನ್ನುಂಟು ಮಾಡುವ ಕಾರ್ಯಯೋಜನೆಗಳ ಬಗ್ಗೆ ಚರ್ಚಿಸಲಾಗಿದೆ. ಆರಂಭದಲ್ಲಿ ಸಂಘಟನೆ ಎಂದರೇನು? ಸಂಘಟನೆಯನ್ನೊಳಗೊಂಡ ವಿವಿಧ ಸೇವಾ ವಲಯಗಳ ಸ್ವರೂಪ ಹೇಗಿದೆ ಎಂಬುದನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಏಕೆಂದರೆ ಸಂಘಟನೆಗೆ ಸಂಬಂಧಿಸಿದ

ಅಧ್ಯಯನಗಳ ಬಗ್ಗೆ ವಿಶಾಲವಾದ ಮತ್ತು ಅತ್ಯಂತ ದೀರ್ಘವಾದ ವಿವರಣೆಗಳನ್ನು ವಿಶ್ಲೇಷಿಸುತ್ತಾ ಹೋದಂತೆ ನಮ್ಮ ಮಹಾಪ್ರಬಂಧದ ಮುಖ್ಯ ಉದ್ದೇಶಕ್ಕೆ ಧಕ್ಕೆಯಾಗಬಹುದೆಂಬ ಹಿನ್ನೆಲೆಯಲ್ಲಿ ಸಂಘಟನೆಗೆ ಸಂಬಂಧಿಸಿದ ವಿಶ್ಲೇಷಣೆಯನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಸಂಘಟನೆಗೆ ಸಂಬಂಧಿಸಿದಂತೆ ನಿರ್ದಿಷ್ಟವಾದ ಹಾಗೂ ಒಂದೇ ಚೌಕಟ್ಟಿನೊಳಗೆ ಬರುವ ಅರ್ಥವನ್ನು ಕೊಡುವುದು ತುಂಬಾ ಕಠಿಣ, ಅದು ಅನೇಕ ವೈವಿಧ್ಯತೆಗಳುಳ್ಳ ಅಂಶಗಳಿಂದ ಕೂಡಿದ, ವಿಶಾಲ ತಳಹದಿಯನ್ನುಳ್ಳ, ಚಲನಾತ್ಮಕ ಗುಣಗಳನ್ನು ಮೈಗೂಡಿಸಿಕೊಂಡ ಬಹುಮುಖಿ ವೇದಿಕೆಯಾಗಿರುವುದರಿಂದ 'ಸಂಘಟನೆ' ಎಂದರೆ ಯಾವುದೇ ಒಂದು ಸಮಾಜ ಅಥವಾ ಸಮುದಾಯವು ತನ್ನೆಲ್ಲಾ ವೈಯಕ್ತಿಕ ಆಶೋತ್ತರಗಳನ್ನು ಬದಿಗೊತ್ತಿ, ಸಾಮೂಹಿಕವಾಗಿ ಒಂದು ಒಪ್ಪಂದಕ್ಕೆ ಬರುವ ಮೂಲಕ ಸರ್ವರ ಹಿತರಕ್ಷಣೆಗಾಗಿ ಶ್ರಮಿಸುವ ಹಾಗೂ ಚಲನಾತ್ಮಕ ಗುಣಗಳುಳ್ಳ ಅನುಕೂಲಕರವಾದ ಒಂದು ವ್ಯವಸ್ಥೆಯನ್ನು 'ಸಂಘಟನೆ' ಎಂದೂ ಕರೆಯಬಹುದು.

ಈ ಹಿನ್ನೆಲೆಯಲ್ಲಿ ನಮ್ಮ ಸುತ್ತಲಿನ ಯಾವುದೇ ಉತ್ಪಾದನೆಯ ವಲಯವನ್ನು ಗಣನೆಗೆ ತೆಗೆದುಕೊಂಡರೂ ಆ ವಲಯಗಳ ಅಭಿವೃದ್ಧಿ ಮತ್ತು ಅನಾಭಿವೃದ್ಧಿಯ ಕಾರ್ಯಚಟುವಟಿಕೆಗಳು ಅವುಗಳು ಹೊಂದಿರುವ ಸಂಘಟನೆಯ ಸ್ವರೂಪದ ಮೇಲೆ ನಿರ್ಧಾರವಾಗಿರುತ್ತದೆ. ಈ ಕಾರಣದಿಂದಾಗಿ ಆಯಾ ವಲಯಗಳ ಪ್ರಗತಿಯನ್ನು ಇಲ್ಲವೆ ಅವನತಿಯನ್ನು ಗುರುತಿಸಬಹುದು. ಪ್ರಸ್ತುತ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಿಯಂತ್ರಣಕ್ಕೊಳಪಟ್ಟ ವಿವಿಧ ಸೇವಾ ರಂಗಗಳಲ್ಲಿ ದುಡಿಯುವ ನೌಕರರ ಸಂಘಟನೆಗಳು ಜನರ ದೈನಂದಿನ ಜೀವನವನ್ನು ಅಸ್ತವ್ಯಸ್ತಗೊಳಿಸುವ, ಮತ್ತು ಸರ್ಕಾರಕ್ಕೆ ಸವಾಲನ್ನು ಹಾಕುವ ಸಾಮರ್ಥ್ಯವನ್ನು ಪಡೆದುಕೊಂಡಿರುವುದು, ಅವುಗಳ ಐಕ್ಯತೆಯಲ್ಲಿನ ಸಾಮರ್ಥ್ಯವನ್ನು ಸಾಬೀತುಗೊಳಿಸುತ್ತದೆ. ಅವುಗಳಲ್ಲಿ ಪ್ರಮುಖವಾಗಿ ಶಿಕ್ಷಣಕ್ಷೇತ್ರ, ಸಾರಿಗೆ-ಸಂಪರ್ಕ ಕ್ಷೇತ್ರಗಳು, ವೈದ್ಯಕೀಯ ಕ್ಷೇತ್ರ ಇತ್ಯಾದಿ ಕ್ಷೇತ್ರಗಳಲ್ಲಿನ ಬೇಡಿಕೆಗಳನ್ನು ಘನ ಸರ್ಕಾರಗಳು ಅವುಗಳನ್ನು ಪರೀಕ್ಷಿಸುವ ಪರಿಶೀಲಿಸುವ ಹಾಗೂ ವಿಶೇಷ ಕಾರ್ಯಪಡೆಗಳನ್ನು ರೂಪಿಸುವ ಮಟ್ಟಕ್ಕೆ ಮುಂದಾಗುವಂತೆ ಮಾಡುವಲ್ಲಿ ಸಂಘಟನೆಗಳು ಶಕ್ತಿಯುತಗೊಂಡಿವೆ. ಆದರೆ ಅಸಂಘಟಿತ ವಲಯಗಳಾದ ಕೃಷಿ, ಕೈಗಾರಿಕೆ, ಸಾಂಪ್ರದಾಯಿಕ ಉದ್ಯೋಗ ಮತ್ತು ಖಾಸಗಿ ರಂಗದ ಅನೇಕ ಕ್ಷೇತ್ರಗಳಲ್ಲಿ ದುಡಿಯುವವರಲ್ಲಿ ಪರಸ್ಪರ ಹೊಂದಾಣಿಕೆ, ವಿಶ್ವಾಸ ಮತ್ತು ನಂಬಿಕೆಗಳಲ್ಲಿದ ಕಾರಣ ಅವರಲ್ಲಿ ಸಂಘಟನೆ ಮಾಯವಾಗಿ, ಕಾರ್ಮಿಕರನ್ನು ಶೋಷಿಸುವ, ನಿಯಂತ್ರಿಸುವ, ದಬ್ಬಾಳಿಕೆ ಹಾಗೂ ದೌರ್ಜನ್ಯಕ್ಕೆ ಎಡೆಮಾಡಿಕೊಡುವಂಥ ಘಟನೆಗಳು ಸರ್ವೇ ಸಾಮಾನ್ಯವಾಗಿ ಕಂಡುಬರುತ್ತವೆ. ಈ ನಿಟ್ಟಿನಲ್ಲಿ ಜಿಲ್ಲೆಯ ಗಣಿ ಕಾರ್ಮಿಕರನ್ನು ಒಗ್ಗೂಡಿಸುವ ಅಥವಾ ಆಯಾ ವರ್ಗಗಳ ಹಿತರಕ್ಷಣೆಯನ್ನು ಹಾಗೂ ಅವರ ಹಕ್ಕು ಬಾದ್ಯತೆಗಳನ್ನು ಎತ್ತಿಹಿಡಿಯುವಲ್ಲಿ ಸಂಘಟನೆಯು ಪ್ರಬಲ ಶಕ್ತಿ ಎಂಬುದಾಗಿ ವ್ಯಾಖ್ಯಾನಿಸಬಹುದಾಗಿದೆ.

ಬಳ್ಳಾರಿ ಜಿಲ್ಲೆಯ ಸಂಡೂರು, ಹೊಸಪೇಟೆ ಹಾಗೂ ಬಳ್ಳಾರಿ ತಾಲೂಕುಗಳಲ್ಲಿ ಕಾರ್ಯ-ನಿರತ ಸುಮಾರು ೫೦ಕ್ಕೂ ಹೆಚ್ಚು ಕಬ್ಬಿಣ ಮತ್ತು ಮ್ಯಾಂಗನೀಸ್ ಗಣಿ ಕಂಪನಿಗಳಲ್ಲಿ ಅಧಿಕೃತ ದಾಖಲೆಗಳ ಪ್ರಕಾರ ಸುಮಾರು ೧೦೦೦೦ಕ್ಕಿಂತಲೂ ಹೆಚ್ಚು ಕಾರ್ಮಿಕರು ಕೆಲಸ ಮಾಡುತ್ತಿದ್ದಾರೆ. ಅತ್ಯಧಿಕ ಸಂಖ್ಯೆಯಲ್ಲಿರುವ ಖಾಸಗಿ ಗಣಿ ಸಂಸ್ಥೆಗಳಲ್ಲಿ ಯಾವುದೇ ಕಾರ್ಮಿಕ ಸಂಘಟನೆಯನ್ನಾಗಲೀ ಅಥವಾ ಸಂಘಟನೆಗೆ ಸಂಬಂಧಿಸಿದ ಯಾವುದೇ ಚಟುವಟಿಕೆಗಳನ್ನು ನೋಡಲು ಸಾಧ್ಯವಿಲ್ಲ. ಅಂದರೆ ಗಣಿಗಾರಿಕೆಯಲ್ಲಿರುವ ಕಾರ್ಮಿಕರಲ್ಲಾಗಲೀ ಅಥವಾ ಗಣಿ ಸಂಸ್ಥೆಗಳಲ್ಲಾಗಲೀ ಯಾವುದೇ ಸ್ವರೂಪದ ಕಾರ್ಮಿಕ ಸಂಘಟನಾ ಪ್ರಕ್ರಿಯೆಗಳು ಇಲ್ಲವೆಂದೇ ಹೇಳಬಹುದು ಈ ಪರಿಸ್ಥಿತಿಯಿಂದಾಗಿ ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯನ್ನು ಗಣಿ ಮಾಲೀಕರ "ಸುರಕ್ಷಿತ ವಲಯ"(protective zone) ಎಂದೇ ಗುರುತಿಸಲಾಗುತ್ತಿದೆ. ನಮ್ಮ ದೇಶದಲ್ಲಿ ೧೯೨೦ರಿಂದ ಕಾರ್ಮಿಕ ಸಂಘಟನೆಯ ರೂಪು ರೇಷೆಗಳಿಗೆ ವಿಶಾಲ ವ್ಯಾಪ್ತಿ ಪ್ರಾಪ್ತವಾಗಿದೆ. ಹೀಗಾಗಿ ನೂರಾರು ಕಾರ್ಮಿಕ ಸಂಘಟನೆಗಳು ಬೆಳೆದುಬಂದಿವೆ. ಸ್ವಾತಂತ್ರ್ಯಪೂರ್ವ ಹಾಗೂ ನಂತರ ಭಾರತ ಸರ್ಕಾರ ಕಾರ್ಮಿಕರ ಹಿತರಕ್ಷಣೆಯನ್ನು ಕಾಪಾಡುವ, ಹಾಗೂ ಅವರ ಹಕ್ಕು ಭಾದ್ಯತೆಗಳನ್ನು ಗೌರವಿಸಲು ನೂರಾರು ಕಾರ್ಮಿಕ ಕಾಯ್ದೆ-ಕಾನೂನುಗಳನ್ನು ಜಾರಿಗೊಳಿಸಿದೆ. ಬಳ್ಳಾರಿ ಜಿಲ್ಲೆಯಲ್ಲಿ ಸುಮಾರು ನೂರು ವರ್ಷಗಳ ಇತಿಹಾಸವಿರುವ ಗಣಿಗಾರಿಕೆಯಲ್ಲಿ ಕಾರ್ಮಿಕರ ರಕ್ಷಣೆ ಮತ್ತು ಅಭಿವೃದ್ಧಿಗಾಗಿ ಯಾವುದೇ ಪ್ರದೇಶಗಳಲ್ಲಿ ಕಾರ್ಮಿಕರು ಸಂಘಟಿತ ಗೊಂಡಿರುವುದನ್ನು ಕಾಣಲು ಸಾಧ್ಯವಿಲ್ಲದ ಸನ್ನಿವೇಶ ನಿರ್ಮಾಣಗೊಂಡಿರುವುದು ವಿಚಿತ್ರವಾಗಿ ಕಂಡುಬಂದರೂ, ಕಟು ವಾಸ್ತವದಿಂದ ಕೂಡಿದೆ. ಜಿಲ್ಲೆಯ ಕೆಲವು ತಾಲೂಕು ಪ್ರದೇಶಗಳಲ್ಲಿ ಕೇಂದ್ರ ಮತ್ತು ರಾಜ್ಯಸರ್ಕಾರಗಳ ಅಧೀನದಲ್ಲಿ ನಡೆಯುತ್ತಿರುವ ಗಣಿ ಸಂಸ್ಥೆಗಳಾದ Naional Minaral Development Corporation (NMDC) ದೋಣಿಮಲೈ ಸಂಡೂರು ತಾಲೂಕು, ಹಾಗೂ Mysore Minerals Limited (MML) ತಿಮ್ಮಪ್ಪನ ಗುಡ್ಡದ ಗಣಿಸಂಸ್ಥೆಗಳಲ್ಲಿ ರಾಷ್ಟ್ರಮಟ್ಟದ ಕಾರ್ಮಿಕ ಸಂಘಟನೆಗಳಾದ AITUC ಮತ್ತು INTUC ಸಂಘಟನೆಗಳು ಕಾರ್ಯನಿರ್ವಹಿಸುತ್ತಿವೆ. ಆದರೆ ಜಿಲ್ಲೆಯ ದೊಡ್ಡ ಗಣಿ ಕಂಪನಿಯೆಂದೇ ಗುರುತಿಸಲ್ಪಡುವ ನೂರು ವರ್ಷಗಳ ಇತಿಹಾಸ ಹೊಂದಿರುವ SMIORE ಕಂಪನಿಯಲ್ಲಿ, ರಾಷ್ಟ್ರಮಟ್ಟದ ಇಲ್ಲಿತನಕ ಯಾವುದೇ ಕಾರ್ಮಿಕ ಸಂಘಟನೆಗಳಿಗೆ ಅವಕಾಶ ನೀಡದೇ, ತಮ್ಮ ಸಂಸ್ಥೆಯಲ್ಲಿಯೇ ಕೆಲಸ ಮಾಡುತ್ತಿರುವ ಕಾರ್ಮಿಕರನ್ನೊಳಗೊಂಡ ಸಂಘಟನೆಯನ್ನು ಹುಟ್ಟುಹಾಕಿರುವುದನ್ನು ಮನಗಂಡಾಗ ಮಾಲೀಕ ವರ್ಗವು ಸಂಘಟನೆಯ ಬಗೆ ತಳೆದಿರುವ ನಿಲುವ ಅರ್ಥವಾಗುತ್ತದೆ. ಆದರೆ ಜಿಲ್ಲೆಯ ಇನ್ನಿತರ ಯಾವುದೇ ಖಾಸಗಿ ಗಣಿಸಂಸ್ಥೆಗಳಲ್ಲಿ ಕಾರ್ಮಿಕ ಸಂಘಟನೆಗಳನ್ನು ಕಾಣಲು ಸಾಧ್ಯವಿಲ್ಲದ ಸನ್ನಿವೇಶ ಜಿಲ್ಲೆಯ ಗಣಿಗಾರಿಕೆಯಲ್ಲಿದೆ. ಇಂತಹ ಕಠಿಣ ನೀತಿಗೆ ಕಾರಣಗಳೇನು? ಎಂಬುದನ್ನು ಹುಡುಕಲು ಪ್ರಾರಂಭಿಸಿದಾಗ ಪ್ರಧಾನವಾಗಿ ಕಂಡುಬರುವ ಅಂಶಗಳಲ್ಲಿ ಗಣಿ ಮಾಲೀಕರ ವಿರೋಧಿತನದ ನೀತಿಯೂ ಒಂದಾಗಿದೆ.

೧. ಗಣಿ ಮಾಲೀಕರ ವಿರೋಧಿತನ

ಜಿಲ್ಲೆಯ ಗಣಿಗಾರಿಕೆಯಲ್ಲಿರುವ ಕಾರ್ಮಿಕರ ಅಸಂಘಟನೆಗೆ ಬಹುಮುಖ್ಯ ಕಾರಣವೆಂದರೆ ಗಣಿಮಾಲೀಕ ವರ್ಗವು ಅನುಸರಿಸುತ್ತಿರುವ ಸಂಘಟನಾ ವಿರೋಧಿ ನೀತಿಯು ಒಂದು. ಎಲ್ಲಾ ಗಣಿ ಮಾಲೀಕರ ಮುಖ್ಯ ಉದ್ದೇಶ, ತಮ್ಮ ಅಧೀನ ಗಣಿ ಸಂಸ್ಥೆಗಳಲ್ಲಿ ಯಾವುದೇ ಕಾರ್ಮಿಕ ಸಂಘಟನೆ ತಲೆ ಎತ್ತದಂತೆ ನೋಡಿಕೊಳ್ಳಲಾಗುತ್ತದೆ. ಇದಕ್ಕಾಗಿ ಗಣಿಯಲ್ಲಿರುವ ಕಾರ್ಮಿಕ ವರ್ಗದ ಚಲನ-ವಲನಗಳ ಮೇಲೆ ಯಾವಾಗಲು ಹದ್ದಿನ ಕಣ್ಣನ್ನು ಇಟ್ಟಿರುತ್ತಾರೆ. ಒಂದು ವೇಳೆ ತಮ್ಮ ಗಮನಕ್ಕೆ ಬಾರದೇ ತೆರೆ ಮರೆಯಲ್ಲಿ ಏನಾದರೂ ಕಾರ್ಮಿಕ ಸಂಘಟನೆಗೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳು ಕಂಡುಬಂದರೆ, ಮಾಲೀಕ ವರ್ಗವು ತೆಗೆದುಕೊಳ್ಳುವ ನಿರ್ಧಾರಗಳು ತುಂಬಾ ಆಶ್ಚರ್ಯಕರ ಹಾಗೂ ಕಠಿಣವಾಗಿರುತ್ತವೆ. ಸುಮಾರು ೧೦-೧೨ ವರ್ಷಗಳ ಹಿಂದೆ ಸಂಡೂರಿನ ಪ್ರತಿಷ್ಠಿತ ಗಣಿಸಂಸ್ಥೆಯಲ್ಲಿ ಫೋರ್‌ಮೆನ್(Foremen) ಆಗಿ ಕೆಲಸ ನಿರ್ವಹಿಸುತ್ತಿದ್ದ ಆಂಧ್ರಮೂಲದ ವ್ಯಕ್ತಿಯು ಕಾರ್ಮಿಕರನ್ನು ಸಂಘಟಿಸುವುದಕ್ಕಾಗಿ ಕಾರ್ಮಿಕರೊಂದಿಗೆ ಬೆರೆಯುವ, ಅವರೊಂದಿಗೆ, ಚರ್ಚಿಸುವ, ಕಾರ್ಮಿಕರ ನೋವು- ನಲಿವುಗಳಿಗೆ ಸ್ಪಂದಿಸುವ, ಅವರ ಕೆಲಸ-ಕಾರ್ಯಗಳನ್ನು ಸಹಾನುಭೂತಿಯಿಂದ ಕಾಣುವ ಮನೋಧರ್ಮದಿಂದಾಗಿ ಬಹುಬೇಗನೆ ಆ ಕಂಪನಿಯಲ್ಲಿ ದುಡಿಯುವ ವರ್ಗದ ಹಿತೈಶಿಯಾಗಿ ಮತ್ತು ಅವರ ನಾಯಕನಾಗಿ ಬೆಳಕಿಗೆ ಬಂದನು. ಇಂತಹ ಬೆಳವಣಿಗೆಯು ಸಂಸ್ಥೆಯ ಮಾಲಿಕರಲ್ಲಿ ಅಸಮಾಧಾನ ಹಾಗೂ ಆತಂಕವನ್ನು ಹುಟ್ಟುಹಾಕುವಲ್ಲಿ ಕಾರಣವಾಯಿತು. ಇಂತಹ ಸನ್ನಿವೇಶದಲ್ಲಿಯೇ ಕಂಪನಿಯಲ್ಲಿ ಜರುಗಿದ ಕೆಲವು ಕಾರ್ಮಿಕರ ಅಪಘಾತಗಳಿಗೆ ಯೋಗ್ಯವಾದ ಪರಿಹಾರ ಸೌಲಭ್ಯಗಳನ್ನು ಒದಗಿಸಿಕೊಡುವುದು ಮತ್ತು ಹತ್ತಾರು ಕಾರ್ಮಿಕರ ದೂರುಗಳಿಗೆ ಸಂಬಂಧಿಸಿದಂತೆ ಯಶಸ್ಸನ್ನು ಸಾಧಿಸಿಲಾಯಿತು. ಹೀಗೆ ಗಣಿಯಲ್ಲಿನ ಕಾರ್ಮಿಕರ ಅಭೂತಪೂರ್ವ ಒಗ್ಗಟ್ಟಿನ ಬೆಳವಣಿಗೆಯು ಸಂಘಟನೆಯನ್ನು ನೊಂದಾಯಿಸುವ ಹಂತಕ್ಕೂ ಬಂದು ತಲುಪಿತು. ಸಂಸ್ಥೆಯಲ್ಲಿ ಜರುಗುತ್ತಿದ್ದ ಪ್ರತಿಯೊಂದು ಬದಲಾವಣೆಗಳನ್ನು ಪರಿಶೀಲಿಸುತ್ತಿದ್ದ ಮಾಲೀಕವರ್ಗವು ರಾತ್ರೋರಾತ್ರಿ ಒಂದು ತಂತ್ರವನ್ನು ಹೆಣೆಯಿತು. ಆ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ನೌಕರರ ಸಭೆ ಕರೆದು, ಅವರೊಂದಿಗೆ ಮಾತನಾಡುವ, ಚರ್ಚಿಸುವ ಮತ್ತು ನೌಕರರೊಂದಿಗೆ ಸಹಭೋಜನದ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಆದರೆ ಕಾರ್ಮಿಕ ಮುಖಂಡನನ್ನು ಗಣಿ ಕಂಪನಿಯು ಬೇರೆ ಕೆಲಸದ ನಿಮಿತ್ತಾ ಹೊರ ಪ್ರಯಾಣಕ್ಕೆ ಆದೇಶ ನೀಡಲಾಯಿತು.

ಕಾರ್ಮಿಕರ ಸತ್ಕಾರ ಹಾಗೂ ಭೋಜನ ಕಾರ್ಯಕ್ರಮದಲ್ಲಿ ಸಂಸ್ಥೆಯ ಆಡಳಿತ ನಿರ್ದೇಶಕರು ಕಾರ್ಮಿಕರನ್ನುದ್ದೇಶಿಸಿ ಮಾತನಾಡುತ್ತಾ "ಸಂಸ್ಥೆಯ ಎಲ್ಲಾ ಕಾರ್ಮಿಕರ ಸೇವೆಯನ್ನು ಕೊಂಡಾಡಿ,

ಈ ವರ್ಷ ಸಂಸ್ಥೆಯು ಪಡೆದ ಲಾಭಕ್ಕೆ ತಾವೆಲ್ಲಾ ಕಾರಣಕರ್ತರಾಗಿದ್ದಿರಿ, ಹೀಗಾಗಿ ಸಂಸ್ಥೆಯು ಪ್ರತಿಯೊಬ್ಬ ಕಾರ್ಮಿಕನಿಗೆ ಶೇಕಡ ೧೨ರ ದರದಲ್ಲಿ ನಗದು ಹಣವನ್ನು ಬಹುಮಾನವಾಗಿ ಘೋಷಿಸುವುದರ ಜೊತೆಗೆ ಎಲ್ಲಾ ಕಾರ್ಮಿಕರನ್ನು ಈ ತಕ್ಷಣದಿಂದಲೇ ಕರ್ನಾಟಕದ ಪ್ರವಾಸಕ್ಕೆ ಏರ್ಪಾಡು ಮಾಡಿರುವುದಾಗಿ ಘೋಷಣೆ ಮಾಡಿದರು. ಈ ಎಲ್ಲಾ ಘಟನೆಗಳು ಕಾರ್ಮಿಕ ಸಂಘಟನೆಯ ನೊಂದಣಿ ದಿನಾಂಕಕ್ಕನುಗುಣವಾಗಿ ಸುಮಾರು ೮ ಸರ್ಕಾರಿ ರಸ್ತೆಸಾರಿಗೆ ಬಸ್ಸುಗಳ ಮೂಲಕ ೭ ದಿನಗಳ ಕಾಲ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಅನೇಕ ಪ್ರೇಕ್ಷಣೀಯ ಸ್ಥಳಗಳ ವೀಕ್ಷಣೆಗಾಗಿ ವ್ಯವಸ್ಥೆಯನ್ನು ಮಾಡಲಾಯಿತು. ಇದೇ ಸಂದರ್ಭದಲ್ಲಿ ಸಂಸ್ಥೆಯು ಕಾರ್ಮಿಕ ನಾಯಕನಾಗಿ ಮುಂಚೂಣಿಯಲ್ಲಿದ್ದ ವ್ಯಕ್ತಿಗೆ ಅತಿರೇಕದ ವರ್ತನೆಗಾಗಿ ಸಸ್ಪೆಂಡ್ ಮಾಡುವ ಮತ್ತು ಕಾರಣ ಕೇಳಿ ನೋಟಿಸ್‌ಗೆ ಉತ್ತರಿಸದಿದ್ದರೆ ಕೆಲಸದಿಂದ ವಜಾಗೊಳಿಸುವ ಆದೇಶವನ್ನು ಹೊರಡಿಸಲಾಯಿತು. ಈ ಎಲ್ಲಾ ಘಟನೆಗಳು ಕಾರ್ಮಿಕರ ಪ್ರವಾಸದ ದಿನಗಳಲ್ಲಿಯೇ ನಡೆದು ಹೋದವು. ವಿವಾದಿತ ಗಣಿ ಸಂಸ್ಥೆಯ ಕಾರ್ಯಕಾರಿ ಮಂಡಳಿಯ ತೀರ್ಮಾನದಂತೆ ಕಾರ್ಮಿಕರ ಸಂಘಟನೆಗೆ ಕಾರಣವಾದ ವ್ಯಕ್ತಿಯನ್ನು ಕಂಪನಿಯ ಕೆಲಸದಿಂದ ತೆಗೆದುಹಾಕಲಾಯಿತು. ಪ್ರವಾಸ ಮುಗಿಸಿ ಬಂದ ಕಾರ್ಮಿಕರು ಮಾಲೀಕರ ಬಗ್ಗೆ ಸಹಾನುಭೂತಿ ಹಾಗೂ ಮೃದು ಧೋರಣೆಯನ್ನು ತಾಳಿದ್ದರಿಂದ, ತಮ್ಮ ಮುಖಂಡನ ಮೇಲೆ ಕಂಪನಿಯು ಕೈಗೊಂಡು ತೀರ್ಮಾನವನ್ನು ಪ್ರಶ್ನಿಸುವುದಾಗಲೀ ಅಥವಾ ಪ್ರತಿಭಟಿಸುವ ಯಾವುದೇ ಕಾರ್ಯಕ್ರಮವನ್ನು ಹಮ್ಮಿಕೊಳ್ಳದೇ, ಯಾರೊಬ್ಬರು ಚಕಾರವೆತ್ತಲಿಲ್ಲ. ಇಂತಹ ಸಮಯವನ್ನೇ ನಿರೀಕ್ಷಿಸುತ್ತಿದ್ದ ಸಂಸ್ಥೆಯ ಮಾಲೀಕರು ಆ ವ್ಯಕ್ತಿಯನ್ನು ಜೀವ ಬೆದರಿಕೆ, ದೈಹಿಕ ಹಲ್ಲೆಯಂಥ ಕ್ರಮಗಳನ್ನು ಅನುಸರಿಸುವ ಮೂಲಕ ಸಂಸ್ಥೆಯಿಂದ ಹೊರತಳ್ಳಲಾಯಿತು. ಹೀಗೆ ಜಿಲ್ಲೆಯ ಬಹುತೇಕ ಗಣಿ ಮಾಲೀಕವರ್ಗವು ಇಂಥಹ ಧೋರಣೆಗಳನ್ನು ಅನುಸರಿಸುತ್ತಿರುವುದರಿಂದ ಜಿಲ್ಲೆಯ ಗಣಿಗಾರಿಕೆಯಲ್ಲಿ ಈವರೆಗೂ ಕಾರ್ಮಿಕ ಸಂಘಟನೆಯ ಚಟುವಟಿಕೆಗಳು ಸಾಧ್ಯವಾಗುತ್ತಿಲ್ಲ. ಜಿಲ್ಲೆಯ ಅನೇಕ ಸಂಸ್ಥೆಗಳಲ್ಲಿಯು ಈ ಮೇಲಿನ ಹತ್ತಾರು ಪ್ರಕರಣಗಳನ್ನು ಕಾಣಬಹುದಾಗಿದೆ. ಜಿಲ್ಲೆಯಲ್ಲಿ ಹತ್ತಾರು ಗಣಿಕಂಪನಿಗಳು ಭರದಿಂದ ಉತ್ಪಾದನೆಯ ಚಟುವಟಿಕೆಯನ್ನು ಕೈಗೊಂಡು, ನೂರಾರು ಜನರಿಗೆ ಉದ್ಯೋಗ ಒದಗಿಸಿದ್ದರೂ, ಸಂಘಟನೆಯ ಕಾರ್ಯಕ್ಕಾಗಿ ಒಂದು ಕಂಪನಿಯಲ್ಲಿ ದುಡಿಯುವ ನೌಕರರಿಗೆ ಪ್ರೋತ್ಸಾಹಧನ ಹಾಗೂ ಕರ್ನಾಟಕದ ಪ್ರವಾಸಕ್ಕೆ ಕಾರಣನಾದ ಫೋರ್‌ಮೆನ್/ ಕಾರ್ಮಿಕ ಮುಂದಾಳು (Foreman) ಈವರಿಗೂ ಯಾವುದೇ ಕಂಪನಿಯಲ್ಲಿ ಕೆಲಸವಿಲ್ಲದೆ ಅಲೆಯುತ್ತಿರುವುದನ್ನು ಮನಗಂಡಾಗ, ಯಾವ ವ್ಯಕ್ತಿ ಗಣಿ ಕಾರ್ಮಿಕ ಸಂಘಟನಾ ಚಟುವಟಿಕೆಯಲ್ಲಿ ಪಾಲ್ಗೊಳ್ಳಲು ಮುಂದೆ ಬರಲು ಸಾಧ್ಯ? ಇಂತಹ ಕಾರಣಗಳಿಂದಾಗಿ ಜಿಲ್ಲೆಯ ಗಣಿಯಲ್ಲಿರುವ ಪ್ರತಿಯೊಬ್ಬರು ಮನೋಜ್ಞವಾಗಿ ಸಂಘಟನೆಯ ಪ್ರಕ್ರಿಯೆಯನ್ನು ವಿಶ್ಲೇಷಣೆಗೆ ಒಳಪಡಿಸಬೇಕಾಗಿದೆ ಹಾಗೂ ಸಿನಿಮಾ, ದೂರದರ್ಶನ, ರೇಡಿಯೋ, ವೃತ್ತಿಪತ್ರಿಕೆಗಳ ಮೂಲಕ ಸರ್ಕಾರ ಮತ್ತು ಸರ್ಕಾರೇತರ

ಸಂಘ-ಸಂಸ್ಥೆಗಳು ಕಾರ್ಮಿಕ ಕಾಯ್ದೆ ಕಾನೂನುಗಳ ಬಗ್ಗೆ ಹಾಗೂ ಮಾಲೀಕರ ಕರ್ತವ್ಯಗಳ ಬಗ್ಗೆ ಸಾಕಷ್ಟು ಪ್ರಚಾರಕಾರ್ಯವನ್ನು ಕೈಗೊಳ್ಳಬೇಕಾಗಿದೆ. ಇದಕ್ಕೆ ಮಾಲೀಕ ವರ್ಗ ತೆರೆಮರೆಯಲ್ಲಿ ಅನುಸರಿಸುತ್ತಿರುವ ಹಣದ ಆಮಿಷ, ಸಂಘಟನೆಯನ್ನು ಪ್ರೋತ್ಸಾಹಿಸುವರಿಗೆ ಶಿಕ್ಷೆ, ನಿರುದ್ಯೋಗದ ಭಯ, ಸೂಟಕೇಸ್ ಬದಲಾಯಿಸುವ ಕಾರ್ಯವೈಖರಿಯ ಪ್ರಕರಣಗಳು ಅವ್ಯಾಹತವಾಗಿ ನಡೆದಿವೆ.

ಗಣಿಯಲ್ಲಿರುವ ಶೇಕಡ ೭೦ರಷ್ಟು ಕಾರ್ಮಿಕರು ಬೇರೆ-ಬೇರೆ ಪ್ರದೇಶಗಳಿಂದ ವಲಸೆ ಬಂದವರು. ಹೀಗಾಗಿ ಗಣಿಸಂಸ್ಥೆಯ ವ್ಯವಸ್ಥಾಪಕರನ್ನು ಇಲ್ಲವೇ ಮಾಲೀಕ ವರ್ಗವನ್ನು ಪ್ರಶ್ನಿಸುವ ಎದೆಗಾರಿಕೆ ಅವರಲ್ಲಿ ಇಲ್ಲವಾಗಿದೆ.

ಕೆಲವು ಸ್ಥಳೀಯ ಮೂಲದ ಕಾರ್ಮಿಕರು ಕೈಗೊಳ್ಳುವ ಯಾವುದೇ ಸ್ವರೂಪದ ಸಂಘಟನೆಯಲ್ಲಿ ಕಾರ್ಮಿಕರು ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಮುಂದೆ ಬರುತ್ತಿಲ್ಲ. ಇದಕ್ಕೆ ಬದುಕಿನ ಅನಿವಾರ್ಯತೆ ಹಾಗೂ ಮಾಲೀಕರ ವಿರೋಧದ ಮುಂದೆ ಕಾರ್ಮಿಕರು ತರಗಲೆಗಳಂತೆ ಒಬ್ಬೊಬ್ಬರೆ ಕ್ರಮೇಣ ಕಣ್ಮರೆಯಾಗುತ್ತಾರೆ. ಕಾರ್ಮಿಕರ ಸಂಘಟನೆಯ ಹಿನ್ನೆಡೆಗೆ ಮತ್ತೊಂದು ಕಾರಣವೆಂದರೆ ಕೆಲಸದ ಅಭದ್ರತೆ, ಬಹುತೇಕ ಕಾರ್ಮಿಕರು ವಲಸೆಗಾರರಾಗಿದ್ದು, ಅವರಿಗೆ ಗಣಿ ಉದ್ಯೋಗ ಬಿಟ್ಟು ಬೇರೆ ಪರ್ಯಾಯ ಉದ್ಯೋಗಗಳ ಅವಕಾಶ ಇಲ್ಲದಿರುವದರಿಂದ ಪ್ರತಿದಿನ ಅತಂತ್ರ ಸ್ಥಿತಿಯಲ್ಲಿಯೇ ಕಾಲ ಕಳೆಯಬೇಕಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಸಂಘಟನೆ ಎಂಬುದು ಕನಸಿನ ಮಾತಾಗುತ್ತದೆ. ಸಂಘಟನೆಯಿಂದಾಗುವ ಪ್ರಯೋಜನಗಳ ಬಗ್ಗೆ ಕಾರ್ಮಿಕರು ಅರಿಯದವರಾಗಿದ್ದಾರೆ. ಮೂಲತಃ ಗಣಿಯಲ್ಲಿರುವ ಶೇಕಡ ೮೦ರಷ್ಟು ಕಾರ್ಮಿಕರು ಅನಕ್ಷರಸ್ಥರು, ಮೂಢನಂಬಿಕೆಯುಳ್ಳವರು ಆಗಿರುವುದರಿಂದ ಸಂಘಟನೆಯ ಮಹತ್ವವನ್ನು ತಿಳಿಯುವ ಪ್ರಯತ್ನವನ್ನೇ ಮಾಡುವುದಿಲ್ಲ. ಬಳ್ಳಾರಿ ಜಿಲ್ಲೆಯ ಗಣಿ ಉದ್ಯೋಗದಲ್ಲಿರುವವರು ಹೆಚ್ಚಾಗಿ ಪರಿಶಿಷ್ಟ ಜಾತಿ, ಮತ್ತು ಪರಿಶಿಷ್ಟ ಪಂಗಡದವರು. ಅವರನ್ನು ಸಂಘಟಿಸಲು, ಜಾಗೃತಗೊಳಿಸಲು ಅಥವಾ ಗಣಿಸಂಸ್ಥೆಯ ಪ್ರತಿರೋಧಗಳಿಂದ ರಕ್ಷಿಸಲು ಇಲ್ಲವೇ ಗಣಿಕಾಯ್ದೆಯ ವಿಧಿ-ವಿಧಾನಗಳನ್ನು ಪಾಲಿಸಲು ಯಾವೊಬ್ಬ ರಾಜಕೀಯ ನಾಯಕ ಅಥವಾ ಸಮಾಜದ ಕಳಕಳಿಯುಳ್ಳವರು ಅಥವಾ ಸರ್ಕಾರೇತರ ಸಂಘ-ಸಂಸ್ಥೆಗಳು ಮುಂದೆ ಬಾರದಿರುವುದು ಸಂಘಟನೆಯ ಹಿನ್ನೆಡೆಗೆ ಕಾರಣವಾಗಿದೆ. ಜಿಲ್ಲೆಯ ಗಣಿ ಕಾರ್ಮಿಕರಲ್ಲಿ ಜಾಗೃತಿಯನ್ನು ಮೂಡಿಸಲು ಹಾಗೂ ಕಾರ್ಮಿಕ ಕಾಯ್ದೆಗಳ ಬಗ್ಗೆ, ಅವರ ಹಕ್ಕುಗಳಾವುವು ಮತ್ತು ಅವರ ಕರ್ತವ್ಯಗಳ ಬಗ್ಗೆ ತಿಳಿಹೇಳುವ, ಸರ್ಕಾರೇತರ ಸಂಘ ಸಂಸ್ಥೆಗಳು ಜಿಲ್ಲೆಯಲ್ಲಿ ತುಂಬಾ ಕಡಿಮೆ ಇವೆ. ಈಗಾಗಲೇ ಅಸ್ತಿತ್ವದಲ್ಲಿರುವ ಸಂಘ-ಸಂಸ್ಥೆಗಳು ಬೇರೆ-ಬೇರೆ ಉದ್ದೇಶ ಹಾಗೂ ಗುರಿಸಾಧನೆಯಲ್ಲಿ ತೊಡಗಿರುವುದರಿಂದ ಗಣಿ ಕಾರ್ಮಿಕರ ಸಮಸ್ಯೆಗಳತ್ತಾ ಗಮನಹರಿಸುತ್ತಿಲ್ಲ. ಅಷ್ಟೇ ಅಲ್ಲದೆ ಗಣಿ ಕಾರ್ಮಿಕರನ್ನು ಸಂಘಟಿಸುವ

ಸ್ವಯಂ ಸೇವಕರಿಗೆ ಕಾನೂನಿನ ರಕ್ಷಣೆ ಇಲ್ಲವಾಗಿದೆ. ಏಕೆಂದರೆ ಹಣ ಅಂತಸ್ತು, ಅಧಿಕಾರ ಬಲವುಳ್ಳವರ ಬಾಗಿಲು ಕಾಯುವ, ಅವರ ಅಜ್ಞೆಗಳನ್ನು ಪಾಲಿಸುವ ಪೋಲಿಸ್ ಹಾಗೂ ಕಾನೂನು ವ್ಯವಸ್ಥೆಯು ಹಣವಂತರನ್ನು ರಕ್ಷಿಸುವುದು ತಮ್ಮ ಮೂಲಭೂತ ಕರ್ತವ್ಯವೆಂದೂ ಭಾವಿಸಿವೆ. ಜೊತೆಗೆ ಸಾಮಾಜಿಕ ನ್ಯಾಯದ ಬಗ್ಗೆ ಧ್ವನಿ ಎತ್ತುವವರನ್ನು ಬಾಯಿ ಮುಚ್ಚಿಸುವುದು ತಮ್ಮ ಪರಮೋಧರ್ಮವೆಂದೂ ಕಾರ್ಯಪಾಲನೆ ಮಾಡುತ್ತಿವೆ. ಹೀಗಾಗಿ ಜಿಲ್ಲೆಯ ಗಣಿಗಾರಿಕೆಯಲ್ಲಿ ಕಾರ್ಮಿಕರನ್ನು ಸಂಘಟಿಸುವ ಕಾರ್ಯ ಚಟುವಟಿಕೆಗಳು ತುಂಬಾ ಹಿಂದೆ ಬಿದ್ದಿವೆ.

ಜಿಲ್ಲೆಯ ಗಣಿ ಕಾರ್ಮಿಕರ ಅಸಂಘಟನೆಗೆ ಹತ್ತಾರು ಕಾರಣಗಳನ್ನು ಅರಿತ ಮೇಲೆ ಜಿಲ್ಲೆಯಲ್ಲಿರುವ ಪುರುಷ ಹಾಗೂ ಮಹಿಳಾ ಕಾರ್ಮಿಕರಲ್ಲಿ ಸಂಘಟನೆಯ ಬಗ್ಗೆ ಆಸಕ್ತಿ ಇದೆಯೇ? ಅಥವಾ ಇಲ್ಲವೆ ಎಂಬುದನ್ನು ಗುರುತಿಸಲು ಪ್ರಯತ್ನಿಸಿದಾಗ ದೊರೆತ ಉತ್ತರವು ಕೋಷ್ಟಕ ೪.೩೪ರಂತೆ ಕಂಡುಬರುತ್ತದೆ.

**ಕೋಷ್ಟಕ ೪.೩೪ : ಕಾರ್ಮಿಕರಲ್ಲಿರುವ ಸಂಘಟನೆಯ ಆಸಕ್ತಿ**

| ಕ್ರ.ಸಂ. | ಸಂಘಟನೆಯ ಅಗತ್ಯತೆ | ಬೇಕು | ಬೇಡ | ಗೊತ್ತಿಲ್ಲ | ಒಟ್ಟು |
|---|---|---|---|---|---|
| ೧. | ಕಾರ್ಮಿಕರ ಸಂಖ್ಯೆ | ೧೨೦ | ೪೦ | ೩೦ | ೨೦೦ |
| ೨. | ಶೇಕಡಾವರು | ೬೫% | ೨೦% | ೧೫% | ೧೦೦% |

ಮೂಲ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

೪.೩೪ರ ಕೋಷ್ಟಕವು ಗಣಿಯಲ್ಲಿರುವ ಕಾರ್ಮಿಕರಲ್ಲಿ ಸಂಘಟನೆಯ ಬಗ್ಗೆ ಅವರಲ್ಲಿರುವ ಮನಸ್ಥಿತಿಯನ್ನು ತಿಳಿಸುತ್ತದೆ. ಗಣಿಯಲ್ಲಿನ ಹತ್ತಾರು ಕಾರಣಗಳಿಂದ ಸಂಘಟನೆ ಅಸಾಧ್ಯವಾಗಿದ್ದರೂ ದುಡಿಯುವವರು ಅನುಭವಿಸುವ ದಬ್ಬಾಳಿಕೆ, ದೌರ್ಜನ್ಯ, ಪಕ್ಷಪಾತ, ಶೋಷಣೆ ಹಾಗೂ ತಾರತಮ್ಯಗಳಿಂದ ನೊಂದ ಶೇಕಡ ೬೫ ರಷ್ಟು ಕಾರ್ಮಿಕರು ಸಂಘಟನೆಯು ಕಾರ್ಮಿಕರಿಗೆ ಅತ್ಯವಶ್ಯಾಕವೆಂದೂ ಅಭಿಪ್ರಾಯಪಡುತ್ತಾರೆ. ಶೇಕಡ ೨೦ ರಷ್ಟು ಕಾರ್ಮಿಕರು ಈಗಾಗಲೇ ತಮ್ಮ ಹಿರಿಯ ಕಾರ್ಮಿಕರು ಸಂಘಟನೆಯಿಂದ ಅನುಭವಿಸಿದ ತೊಂದರೆಗಳಿಗೆ ಹೆದರಿಕೊಂಡು ತಮಗೆಲ್ಲಾ ಸಂಘಟನೆಯೇ ಬೇಡವೆಂದೂ ನುಡಿಯುತ್ತಾರೆ, ಆದರೆ ಅವರು ಸಹ ಕಾರ್ಮಿಕರ ರಕ್ಷಣೆಗೆ ಸಂಘಟನೆಯ ಅತ್ಯವಶ್ಯಕವೆಂಬುದನ್ನು ತಳ್ಳಿಹಾಕಲಾರರು, ಸಂಘಟನೆ ಬೇಡ ಎನ್ನುವವರಲ್ಲಿ ಹೆಚ್ಚಾಗಿ ಮಹಿಳೆಯರು ಹಾಗೂ ಮಕ್ಕಳು ಸೇರಿದ್ದಾರೆ. ಇವರ ಪ್ರಕಾರ ಸಂಘಟನೆಯಿಂದಾಗಿ ಆಡಳಿತ ವರ್ಗದ ವಿರೋಧವನ್ನು ಎದುರಿಸಬೇಕಾಗುತ್ತದೆ. ಬಡವನ ಕೋಪ ದವಡೆಗೆ ಮೂಲವೆಂಬಂತೆ ಸಂಘಟನೆಯಿಂದ ಜಗಳ, ಘರ್ಷಣೆ, ನಿರುದ್ಯೋಗ

ಮತ್ತು ಪೋಲಿಸ್‌ಕೇಸ್‌ಗಳಿಗೆ ಕಾರಣವಾಗುವುದಾದರೆ ಸಂಘಟನೆಯೇ ಬೇಡವೆನ್ನುತ್ತಾರೆ. ಅಂತಹವರ ಪ್ರಮಾಣ ಶೇಕಡ ೧೫ರಷ್ಟು ಇರುವುದರ ಜೊತೆಗೆ ಈ ಹೇಳಿಕೆಗಳಲ್ಲಿ ಬಾಲ ಕಾರ್ಮಿಕರು ಸೇರುವುದರಿಂದ ಸಂಘಟನೆಯಿಂದಾಗುವ ಲಾಭನಷ್ಟಗಳನ್ನು ಪ್ರಮಾಣೀಕರಿಸಿ ನೋಡುವ ಸಾಮರ್ಥ್ಯ ಅವರಲ್ಲಿಲ್ಲದ ಕಾರಣ ಸಂಘಟನೆಯ ಮಹತ್ವಗೊತ್ತಿಲ್ಲವೆಂಬ ಉತ್ತರವನ್ನು ನೀಡಿದ್ದಾರೆ. "೧೯೫೦ರ ಗಣಿ ಕಾಯ್ದೆಯ ಪ್ರಕಾರ ಪ್ರತಿಯೊಂದು ಉತ್ಪಾದನಾ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕಾರ್ಮಿಕರ ಪ್ರಮಾಣವು ಕನಿಷ್ಠ ೭ ಸದಸ್ಯರಿಗಿಂತ ಹೆಚ್ಚಾಗಿದ್ದರೆ. ಅಂತಹ ಉತ್ಪಾದನಾ ವಲಯದಲ್ಲಿ ಕಡ್ಡಾಯವಾಗಿ ಕಾರ್ಮಿಕರ ಸಂಘಟನೆಗೆ ಅವಕಾಶವಿರಬೇಕೆಂದು ಆದೇಶಿಸಲಾಗಿದೆ."[೨] ಆದರೆ ಇದುವರೆಗೂ ಜಿಲ್ಲೆಯ ಗಣಿಗಾರಿಕೆಯಲ್ಲಿ ಏಕೆ ಸಂಘಟನೆ ಸಾಧ್ಯವಾಗಿಲ್ಲವೆಂಬುದನ್ನು ಸಮಾಜವು ಗಂಭೀರವಾಗಿ ಚಿಂತಿಸಬೇಕಾಗಿದೆ. ಗಣಿ ಕಾರ್ಮಿಕರ ಜೀವನ, ಕುಟುಂಬದ ಸ್ವರೂಪ, ಹಣಕಾಸಿನ ಸ್ಥಿತಿಗತಿಯ ಮೇಲೆ ಸಂಘಟನೆಯ ಸ್ವರೂಪ ನಿರ್ಧಾರಗೊಳ್ಳುವುದರಿಂದ ಗಣಿಗಾರಿಕೆಯಲ್ಲಿನ ಕಾರ್ಮಿಕರ ಅತಂತ್ರತೆಯಿಂದ ಜಿಲ್ಲೆಯಲ್ಲಿ ಸಂಘಟನೆಯ ಪ್ರಕ್ರಿಯೆ ಕಷ್ಟಕರವೆಂದೇ ಹೇಳಬೇಕಾಗಿದೆ.

ಈ ಮೇಲಿನ ಎಲ್ಲಾ ವೈಪರಿತ್ಯಗಳ ಮಧ್ಯೆ ಬಳ್ಳಾರಿ ಜಿಲ್ಲೆಯ ಕೆಲವು ಕಾರ್ಮಿಕ ಸಂಘಟನೆಗಳು ವಿವಿಧ ಕಬ್ಬಿಣ ಮತ್ತು ಮ್ಯಾಂಗನೀಸ್ ಗಣಿ ಸಂಸ್ಥೆಗಳಲ್ಲಿರುವ ಕಾರ್ಮಿಕರೊಂದಿಗೆ ಕೆಲಸ ನಿರ್ವಹಿಸುತ್ತಿರುವುದನ್ನು ೪.೩೫ರ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೪.೩೫ : ಕಾರ್ಮಿಕ ಸಂಘಟನೆಗಳ ವಿವರ**

| ಕ್ರ. ಸಂ. | ಗಣಿ ಸಂಸ್ಥೆಯ ಹೆಸರು | ಗಣಿ ಸಂಸ್ಥೆ ನೆಲೆಸಿರುವ ಪ್ರದೇಶ | ಕಾರ್ಮಿಕ ಸಂಘಟನೆ ಹೆಸರು | ಸದಸ್ಯರ ಸಂಖ್ಯೆ |
|---|---|---|---|---|
| ೧. | B.I.O.P.* ಕ್ಯಾಂಪ್ | ಎಚ್. ಸಿದ್ದಾಪುರ | AITUC* | ೩೦ ರಿಂದ ೬೦ |
| ೨. | T.B.A.* Ltd | ಹರಗಿನದೋಣಿ | UTUC* (LS) | ೩೦ ರಿಂದ ೫೦ |
| ೩. | ರೈಲ್ವೆ ಲೋಡಿಂಗ್ | ತೋರಣಗಲ್ಲು | AITUC | ೨೦ ರಿಂದ ೫೦ |
| ೪. | ಲಾರಿ, ಕ್ಲೀನರ್ಸ್ ಮತ್ತು ಡ್ರೈವರ್ಸ್ ಸಂಘ | ಪಾಪಿನಾಯಕನಹಳ್ಳಿ | AITUC | ೨೦ ರಿಂದ ೫೦ |

ಮೂಲ : ಕ್ಷೇತ್ರಕಾರ್ಯ ಸಮೀಕ್ಷೆ ವರದಿ

B.I.O.P: Bellary Iron Ore Obalapuram

T.B.A. Ltd: Tiffens Barytees Asbescs and Paints Limited

AITUC: All Indian Trade Union Congress

UTUC (LS): Unit Trade Union Congress (Lenin Series)

೪.೩೫ರ ಕೋಷ್ಟಕವು ಜಿಲ್ಲೆಯ ವಿವಿಧ ತಾಲೂಕುಗಳಲ್ಲಿನ ಗಣಿ ಕಾರ್ಮಿಕರೊಂದಿಗೆ ಸಿ.ಪಿ.ಐ. ಪಕ್ಷದ ಅಧೀನದಲ್ಲಿರುವ A.I.T.U.C. ಕಾರ್ಮಿಕರ ಸಂಘಟನೆಯು ಬಳ್ಳಾರಿಯ ಗಡಿ ಪ್ರದೇಶವಾದ ಹೆಚ್. ಸಿದ್ದಾಪುರಂನಲ್ಲಿರುವ B.I.O.P. ಗಣಿ ಸಂಸ್ಥೆಯಲ್ಲಿ ಸುಮಾರು ೩೦ ರಿಂದ ೬೦ ಕಾರ್ಮಿಕರೊಂದಿಗೆ ಸಂಘಟನೆಯನ್ನು ಆರಂಭಿಸಿದೆ. ಜೊತೆಗೆ ಸಂಡೂರು ತಾಲೂಕಿನ ತೋರಣಗಲ್ಲು ರೈಲ್ವೆ ನಿಲ್ದಾಣದಲ್ಲಿ ರೈಲ್ವೆ ವ್ಯಾಗೀನ್‌ಗೆ ಕಬ್ಬಿಣ ಅದಿರು ತುಂಬುವ ೨೦ ರಿಂದ ೫೦ ಕಾರ್ಮಿಕರನ್ನು ಹಾಗೂ ಹೊಸಪೇಟೆ ತಾಲೂಕಿನ ಪಾಪಿನಾಯಕನಹಳ್ಳಿಯಲ್ಲಿ ಸುಮಾರು ೨೦ ರಿಂದ ೫೦ ಮೈನ್ಸ್ ಲಾರಿ ಡ್ರೈವರ್ಸ್ ಹಾಗೂ ಕ್ಲಿನರ್ಸ್‌ಗಳ ಸಂಘಟನೆಯನ್ನು ಕಟ್ಟಲಾಗಿದೆ. ಇದರ ಜೊತೆಗೆ S.U.C.I. ಪಕ್ಷದ U.T.U.C. (LS) ಸಂಘಟನೆಯು ಹರಗಿನದೋಣಿಯಲ್ಲಿರುವ T.B.A. Ltd ಸಂಸ್ಥೆಯಲ್ಲಿ ಸುಮಾರು ೩೦ ರಿಂದ ೫೦ ಕಾರ್ಮಿಕರನ್ನೊಳಗೊಂಡಂತೆ ಸಂಘಟನೆಯನ್ನು ಆರಂಭಿಸುವ ಮೂಲಕ ಜಿಲ್ಲೆಯಾದ್ಯಂತ ನೆಲೆಗೊಂಡಿರುವ ಗಣಿ ಸಂಸ್ಥೆಗಳಲ್ಲಿ ಕಾರ್ಮಿಕ ಸಂಘಟನೆಯನ್ನು ವಿಸ್ತರಿಸುವ ಮಹತ್ವಾಕಾಂಕ್ಷೆಯನ್ನು ಸಂಘಟನಕಾರರು ಹೊಂದಿದ್ದಾರೆ.

ಗಣಿಗಾರಿಕೆಯಲ್ಲಿ ಯಾವುದೇ ರೀತಿಯ ಸಂಘಟನೆಯಿಲ್ಲದ ಗಣಿಕಾರ್ಮಿಕರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಗಣಿಗಾರಿಕೆಯಲ್ಲಿ ವಿಶೇಷವಾಗಿ ಗಮನಿಸಬೇಕಾಗಿರುವುದು ಕಾರ್ಮಿಕರ ಮೇಲಿನ ಲೈಂಗಿಕ ದೌರ್ಜನ್ಯ. ಮೂಲತಃ ಗಣಿಕಾರ್ಮಿಕರು ವಲಸೆಗಾರರಾಗಿದ್ದು, ಬಡತನ ಹಾಗೂ ಕೆಳಜಾತಿಗಳಿಂದ ಬಂದವರು, ಹೀಗಾಗಿ ಅವರು ಸಾಮಾಜಿಕ ಮತ್ತು ಆರ್ಥಿಕವಾಗಿ ದುರ್ಬಲರಾಗಿರುವುದರಿಂದ ಕಂಪನಿಯ ಬೇರೆ-ಬೇರೆ ನೌಕರರು ಈ ಸಮುದಾಯಗಳ ಮೇಲೆ ಸವಾರಿ ಮಾಡಲು ಯಾವಾಗಲೂ, ಜಾತಕ ಪಕ್ಷಿಯಂತೆ ಕಾಯುತ್ತಾ ಕುಳಿತಿರುತ್ತಾರೆ. ಗಣಿಯಲ್ಲಿರುವ ಯಾವುದೇ ಕಾರ್ಮಿಕನು ಹತ್ತು ವರ್ಷಗಳಿಂದ ಇಪ್ಪತ್ತು ವರ್ಷಗಳವರೆಗೆ ಗಣಿಕಂಪನಿಯಲ್ಲಿ ಸೇವೆಸಲ್ಲಿಸಿದ್ದರೂ ಅವರೆಂದೂ ಖಾಯಂ ನೌಕರರಾಗಲು ಸಾಧ್ಯವಿಲ್ಲ ಎಂದ ಮೇಲೆ ಮಹಿಳಾ ಕಾರ್ಮಿಕರ ಪರಿಸ್ಥಿತಿಯಂತೂ ಅಧೋಗತಿಯಿಂದ ಕೂಡಿದೆ. ಅವಳು ಕಂಪನಿಯ ಸೂಪರ್‌ವೈಜರನಿಂದ ಹಿಡಿದು ಡ್ರೈವರ್ಸ್, ಆಪರೇಟರ್ಸ್ ಕಂಟ್ರಾಕ್ಟರ್ಸ್‌ಗಳ ಲೈಂಗಿಕ ಕೆಲಸಗಳಿಗೆ ಸಹಕರಿಸಲೇಬೇಕಾಗಿದೆ. ಒಂದು ವೇಳೆ ಪ್ರತಿಭಟಿಸಿದಲ್ಲಿ ಮರುದಿನವೇ ಕೆಲಸವನ್ನು ಕಳೆದುಕೊಳ್ಳಬೇಕಾದ ದುರ್ಗತಿ ಬಂದೋದಗುತ್ತದೆ. ಉದಾಹರಣೆಗೆ ಲೇಬರ್ ಕಾಂಟ್ರಾಕ್ಟರ್‌ನಿಗೆ ಲೈಂಗಿಕವಾಗಿ ಸಹಕರಿಸುವುದರಿಂದ ಕಮಿಷನ್ ಮುರಿದುಕೊಳ್ಳದೇ ಕೂಲಿಯನ್ನು ಹಾಗೂ ಕಷ್ಟಕರವಲ್ಲದ ಕೆಲಸವನ್ನು ಮಾಡಬಹುದು. ಸೂಪರ್‌ವೈಜರ್‌ನಿಗೆ ಲೈಂಗಿಕವಾಗಿ ಸಹಕರಿಸುವುದರಿಂದ ವಾರದುದ್ದಕ್ಕೂ ಶ್ರಮವಹಿಸಿ ಸಂಗ್ರಹಿಸಿದ ಫೈನ್ಸ್, ಲಂಪಿ ಹಾಗೂ ಮಿನಿಸೈಜ್ ಅದಿರು ಇತ್ಯಾದಿಗಳಲ್ಲಿ ಮೋಸವಿಲ್ಲದೆ ಸರಿಯಾದ ತೂಕ ಮತ್ತು ಹಣವನ್ನು ಪಡೆಯಲು ಸಾಧ್ಯವಾಗುತ್ತದೆ. ಇಲ್ಲವಾದಲ್ಲಿ ಸಂಗ್ರಹಿಸಿದ

ಕಬ್ಬಿಣ ಕಲ್ಲು, ಕಬ್ಬಿಣ ಪುಡಿ, ಮಿನಿಸೈಜ್‌ಗಳಲ್ಲಿ ತೂಕ ಕಡಿಮೆಯಾಗುವುದು. ಹಾಗೆಯೇ ಕಷ್ಟಕರವಾದ ಸ್ಥಳಗಳಲ್ಲಿ ಅವರನ್ನೂ ಕೆಲಸಕ್ಕೆ ಕಳುಹಿಸುವುದು ಅನಾವಶ್ಯವಾಗಿ ತೆಗಳುವುದು ಇತ್ಯಾದಿಗಳು ಸಾಮಾನ್ಯವಾಗಿರುತ್ತವೆ. ಕೆಲವೊಮ್ಮೆ ಹಿರಿಯ ಮಹಿಳಾ ಹಾಗೂ ಪುರುಷ ಕಾರ್ಮಿಕರು ಕಂಪನಿಯ ಪುರುಷರೊಂದಿಗೆ ಸಹಕರಿಸಲು ಒತ್ತಾಯ ಹೇರುತ್ತಾರೆ, ಒಂದು ವೇಳೆ ನಿರಾಕರಿಸಿದರೆ ಅವರೆಲ್ಲಾ ಅವಳೊಂದಿಗೆ ಮಾತನಾಡದೇ ಮೌನವಾಗಿ ಹಿಂಸಿಸುವುದು ಸಾಮಾನ್ಯವಾಗಿರುತ್ತದೆ. ಈಗಾಗಲೇ ರಾಜ್ಯದ ವಿವಿಧ ಸಂಘಟಿತ ವಲಯಗಳಲ್ಲಿ ಸುಶಿಕ್ಷಿತ ಮಹಿಳೆಯರ ಮೇಲೆ ನಾನಾ ರೀತಿಯಿಂದ ಅತ್ಯಾಚಾರಗಳು, ದೌರ್ಜನ್ಯದ ಪ್ರಕರಣಗಳನ್ನು ರೇಡಿಯೋ, ಮಾಧ್ಯಮಗಳ ಮೂಲಕ ಕೇಳುತ್ತಿರುವಾಗ, ಅಸಂಘಟಿತ ವಲಯದಲ್ಲಿ ಮಹಿಳೆಯರ ಮೇಲಿನ ಶೋಷಣೆ ಹಾಗೂ ದೌರ್ಜನ್ಯದ ಸ್ವರೂಪ ಊಹಿಸಿಕೊಂಡರೆ ಸಾಕು ನಾನಾ ಸ್ವರೂಪದ ಚಿತ್ರಣವು ಮೂಡಿಬರುತ್ತದೆ.

ಮಹಿಳಾಕಾರ್ಮಿಕರ ಮೇಲೆ ನಡೆಯುತ್ತಿರುವ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುವ ಬಹುತೇಕ ಗಣಿಕಾರ್ಮಿಕರೆಲ್ಲರೂ ತಾತ್ಕಾಲಿಕ, ಗುತ್ತಿಗೆ ಆಧಾರದ ಮೇಲೆ ಕೆಲಸ ಮಾಡುವವರು ಆಗಿದ್ದಾರೆ. ಮಹಿಳೆಯರು ಹೆಚ್ಚಾಗಿ ಗುತ್ತಿಗೆ ಹಾಗೂ ಋತುಮಾನದ ಉದ್ಯೋಗಕ್ಕಾಗಿ ಕೆಲಸವನ್ನು ಹುಡುಕಿಕೊಂಡು ಬಂದವರು. ಇವರ ಕೆಲಸದ ಸ್ವರೂಪವು ಕಂಪನಿಯ ಇತರ ನೌಕರರೊಂದಿಗೆ ಸಹಕರಿಸುವ ಇಲ್ಲವೇ ಹೊಂದಾಣಿಕೆಯ ಪ್ರವೃತ್ತಿಯ ಆಧಾರದ ಮೇಲೆ ನಿರ್ಧಾರವಾಗುತ್ತದೆ. ಸುಂದರ ಹಾಗೂ ಯೌವ್ವನದ ತರುಣಿಯರು ಕಂಪನಿಯ ಕಾಂಟ್ರಾಕ್ಟರ್, ಸೂಪರ್‌ವೈಸರ್, ಡ್ರೈವರ್ಸ್, ಆಪರೇಟರ್ಸ್ ಇತ್ಯಾದಿ ಪುರುಷರೊಂದಿಗೆ ಲೈಂಗಿಕ ಚಟುವಟಿಕೆಗಳಿಗೆ ಸಹಕರಿಸಬೇಕಾಗಿದೆ.

ಗಣಿಸಂಸ್ಥೆಗಳು ತಮ್ಮ ಕಾರ್ಮಿಕರಿಗೆ ಸರ್ಕಾರದ ಕೂಲಿಯ ನೀತಿ ನಿಯಮದಂತೆ ವೇತನವನ್ನು ಪಾವತಿಸದೇ ಕಂಪನಿಯ ಆದಾಯ ವ್ಯವಹಾರ ಹಾಗೂ ರಾಜಕೀಯ ಆಧಾರದ ಮೇಲೆ ನಿರ್ಧಾರಗೊಳ್ಳುತ್ತದೆ. ಕಂಪನಿ ನೀಡುವ ಕೂಲಿಯ ದರವು ನೇರವಾಗಿ ಕಾರ್ಮಿಕರಿಗೆ ದೊರೆಯದೇ ಮಧ್ಯವರ್ತಿಗಳ ಮೂಲಕ ಇಲ್ಲವೇ ಕಾಂಟ್ರಾಕ್ಟರ್‌ಗಳ ಮೂಲಕ ಕಾರ್ಮಿಕರಿಗೆ ಅವರ ಕಮಿಷನ್ ಮುರಿದುಕೊಂಡು ಹಣ ಪಾವತಿಸಲಾಗುತ್ತದೆ. ಒಂದು ವೇಳೆ ಇದನ್ನು ಪ್ರತಿಭಟಿಸಿದರೆ ಮರುದಿನದಿಂದ ಕೆಲಸ ಕಳೆದುಕೊಳ್ಳಬೇಕಾಗುತ್ತದೆ. ಇಂತಹ ಅನಿವಾರ್ಯತೆಗಳ ನಡುವೆ ಕಾರ್ಮಿಕರ ಬದುಕು ನಿರ್ಧಾರಗೊಳ್ಳುವುದರಿಂದ ಕಡಿಮೆ ಕೂಲಿಯಲ್ಲಿ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಗಣಿ ಕಾರ್ಮಿಕರಿಗೆ ವಾರಕ್ಕೆ ೭ ದಿನಗಳವರೆಗೆ ಖಾಯಂ ಆಗಿ ಕೆಲಸ ದೊರಕುತ್ತದೆಂಬ ಖಾತ್ರಿಯು ಇಲ್ಲವಾಗಿದೆ. ಕೆಲಸದ ಸಮಯದಲ್ಲಿ ಕಾರ್ಮಿಕರಿಗೆ ಮುಂಜಾಗ್ರತೆಯ ಯಾವುದೇ ಸಾಧನಗಳನ್ನು ನೀಡುವುದಿಲ್ಲ. ಇದರಿಂದ ಕಾರ್ಮಿಕರು ಅನಾರೋಗ್ಯಕ್ಕೆ ತುತ್ತಾಗುವುದು ಸಾಮಾನ್ಯವಾಗಿದೆ. ಇಂತಹ ಸಂದರ್ಭಗಳಲ್ಲಿ

ಸಂಸ್ಥೆಯು ಯಾವುದೇ ಪ್ರೋತ್ಸಾಹಕ ಹಣವನ್ನು ವಿತರಿಸುವುದಿಲ್ಲ ಹೀಗೆ ಹತ್ತಾರು ಗೊಂದಲಗಳ ನಡುವೆ ಅನಿವಾರ್ಯವಾಗಿ ಬದುಕುವ ದುರ್ಗತಿ ಗಣಿ ಕಾರ್ಮಿಕರದ್ದು. ಇಂತಹದ್ದನ್ನು ಪ್ರಶ್ನಿಸುವ, ದುಡಿಮೆಗೆ ತಕ್ಕ ಪ್ರತಿಫಲ, ನ್ಯಾಯೋಚಿತ ವಿಧಾನದಲ್ಲಿ ಸೇವೆಯನ್ನು ಗೈಯಲು ಕಾರ್ಮಿಕರು ಸಂಘಟಿತಗೊಳ್ಳಬೇಕಾಗಿದೆ. ಇದಕ್ಕಾಗಿ ಜಿಲ್ಲೆಯ ವಿವಿಧ ರಾಜಕೀಯ ಪಕ್ಷಗಳು ಸಂಘಟನೆಯ ಮುಖಂಡರೊಂದಿಗೆ ಚರ್ಚಿಸುವ ಹಾಗೂ ಸಹಕರಿಸುವ ಮನಸ್ಥಿತಿಯನ್ನು ರೂಪಿಸಿಕೊಳ್ಳಬೇಕಾಗಿದೆ. ಇದೇ ವೇಳೆ ಕಾರ್ಮಿಕ ಸಂಘಟನೆಗಳು ಸಹ ಆರಂಭದಲ್ಲಿ ಗಣಿ ಮಾಲೀಕರೊಂದಿಗೆ ಚರ್ಚಿಸಿ, ಅವರ ಸಹಾನುಭೂತಿಯನ್ನು ಗಳಿಸುವ ಕಾರ್ಯಯೋಜನೆಗಳನ್ನು ಕೈಗೊಳ್ಳುವುದು ಸೂಕ್ತ. ಇದಕ್ಕಾಗಿ ಸಂಘಟಕರು ಜಿಲ್ಲೆಯಲ್ಲಿ ಜರುಗುವ ವಿವಿಧ ಸಂಘಟನೆಯ ಕಾರ್ಯಕ್ರಮಗಳಿಗೆ ಮಾಲೀಕರನ್ನು ಆಹ್ವಾನಿಸುವ ವಿಧಿ-ವಿಧಾನಗಳನ್ನು ಪಾಲಿಸಬೇಕು. ಕಾರ್ಮಿಕ ಸಂಘಟನೆಗಳು ಆರಂಭದಲ್ಲಿ ಕಾರ್ಮಿಕರನ್ನು ಶಿಕ್ಷಿತರನ್ನಾಗಿ ಮಾಡಲು ಅಂಗನವಾಡಿ ಸಭೆ, ಸಮಾರಂಭ ಹಾಗೂ ಕಾರ್ಯಗಾರಗಳೊಂದಿಗೆ ಪ್ರಯತ್ನಿಸುವುದು. ಸರ್ಕಾರೇತರ ಸಂಸ್ಥೆಗಳು ಮತ್ತು ಜಿಲ್ಲಾಮಟ್ಟದ ಅಧಿಕಾರಿಗಳೊಂದಿಗೆ ಚರ್ಚಿಸಿ, ಕಾರ್ಮಿಕರಲ್ಲಿ ಜಾಗೃತಿಯನ್ನು ಮೂಡಿಸಿದ್ದೇ ಆದರೆ ಮುಂದೊಂದು ದಿನ ಗಣಿ ಕಾರ್ಮಿಕರು ಸಂಘಟಿತಗೊಳ್ಳಲು ಸಾಧ್ಯ.

**ಅಡಿ ಟಿಪ್ಪಣಿಗಳು**

೧. ವಂದನಾ ಶಿವ, **ಬತ್ತದ ಚಿಲುಮೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೬, ೨೦೦೫

೨. ಅದೇ, ಪು.೮

೩. Mines Rules(Amendment) 1970, Vide GSR 1786, dated 30-09-1970

೪. Mining Act-1955, Published in Gazette of India, Part II, Pp.1168, 1999

೫. ಅದೇ,

೬. ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯ ಗಣಿಗಾರಿಕೆ ಮತ್ತು ಜನಾಂದೋಲನಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮, ಪು.೨೦

೭. Subhash Kashyap, Our Constution an Introduction to India's Constution Law, National Book Trust of India, New Delhi, 1995, Pp18-25

೮. ಶ್ರೀಧರ ವಿ.ಎಸ್., ಶಿವಸುಂದರ್, ಉಳ್ಳವರ ಶಿವಾಲಯವಾಗಿರುವ ನಮ್ಮ ಶಿಕ್ಷಣ, ಲಂಕೇಶ ಪತ್ರಿಕೆ, ೨೧.೦೪.೨೦೦೪, ಪು.೨

೯. ಅದೇ,

೧೦. ಅದೇ,

೧೧. AIR-1961, Raj-189(1961)2 Cri

೧೨. Minas Rules and Regulation-1995, Published in Gazette of India, Pp.54

# ಅಧ್ಯಾಯ ೫

## ಗಣಿ ಕಾರ್ಮಿಕರ ಕಾಯ್ದೆ - ಕಾನೂನುಗಳು

೫.೧. ಗಣಿಯಲ್ಲಿನ ಆರೋಗ್ಯ - ನೈರ್ಮಲ್ಯ ವ್ಯವಸ್ಥೆ

೫.೨ ಕೆಲಸದ ಅವಧಿ ಮತ್ತು ಮಿತಿ

೫.೩ ದಾಖಲತಿಗಳು

೫.೪. ಕಾರ್ಮಿಕ ಇನ್ಸ್‌ಪೆಕ್ಟರ್ ಕರ್ತವ್ಯಗಳು

೫.೫. ೧೯೬೧ ಮತ್ತು ೧೯೬೩ರ ಮಾತೃತ್ವ ಪರಿಹಾರ ಕಾಯ್ದೆ

# ಗಣಿ ಕಾರ್ಮಿಕರ ಕಾಯ್ದೆ-ಕಾನೂನುಗಳು

ಭಾರತದ ಮೇಲಿನ ಬ್ರಿಟಿಷರ ಆಳ್ವಿಕೆಯಿಂದ ದೇಶದಲ್ಲಿ ಲಭ್ಯವಿರುವ ಗಣಿ ಸಂಪನ್ಮೂಲಗಳ ಬಳಕೆಗೆ ಹೊಸ ಆಯಾಮಗಳು ದೊರೆತವು. ಹೇಗೆಂದರೆ ತಂತ್ರಜ್ಞಾನದಲ್ಲಿ ಪರಿಣಿತಿ ಹೊಂದಿದ ಬ್ರಿಟಿಷರು ಇಲ್ಲಿರುವ ನೈಸರ್ಗಿಕ ಸಂಪನ್ಮೂಲಗಳ ಶೀಘ್ರ ವಿಲೇವಾರಿಗೆ ಅನೇಕ ಕಾರ್ಯಯೋಜನೆಗಳನ್ನು ಜಾರಿಗೊಳಿಸಿದರು. ಹೀಗಾಗಿ ಗಣಿಗಾರಿಕೆಯಲ್ಲಿ ಕಂಡುಬಂದ ಅನೇಕ ಅಪಘಾತ ಪ್ರಕರಣಗಳಿಂದಾಗಿ ಗಣಿ ಕಾಯ್ದೆ-ಕಾನೂನುಗಳ ಬದಲಾವಣೆಗೆ ವಿಶೇಷ ಆಸಕ್ತಿ ವಹಿಸಲಾಯಿತು. "ಲಾರ್ಡ್ ಕ್ರೂಸ್" ಎಂಬುವವರು ಕ್ರಿ.ಶ.೧೮೯೦ರಲ್ಲಿ ಜರುಗಿದ ಬರ್ಲಿನ್ ಸಮ್ಮೇಳನದಲ್ಲಿ"[1] ಭಾರತ ಸರ್ಕಾರವು ತನ್ನಲ್ಲಿರುವ ಗಣಿಗಾರಿಕೆಗೆ ಸಂಬಂಧಿಸಿದಂತೆ ಕೆಲವು ಕಾರ್ಯ ಯೋಜನೆಗಳನ್ನು ಕೈಗೊಳ್ಳುವಂತೆ ಸಲಹೆ ಮಾಡಿದರು. ಇದರ ಪ್ರಯುಕ್ತ ೧೮೯೪ರಲ್ಲಿ ಭಾರತ ಸರ್ಕಾರ ಮೈನ್ಸ್‌ಗಳಿಗೆ ಸಂಬಂಧಿಸಿದ ಕಾಯ್ದೆ-ಕಾನೂನು ರಚನೆಗೆ ಪರಿವೀಕ್ಷಕರನ್ನು ನೇಮಕ ಮಾಡಿತು. ಹಾಗೆಯೇ ೧೮೯೫ರಲ್ಲಿ ಮಿ. ಜೇಮ್ಸ್ ಗ್ರೋಡೇ ಎಂಬುವರನ್ನು ಗಣಿ ಚಟುವಟಿಕೆಗಳಿಗೆ ಸಂಬಂಧಿಸಿದ ಕಾನೂನುಗಳನ್ನು ರಚನೆಗೆ ಮೇಲ್ವಿಚಾರಕನನ್ನಾಗಿ ನೇಮಕ ಮಾಡಲಾಯಿತು. ಈ ಸಮಿತಿಯು ೧೮೯೧ರಲ್ಲಿ ಕೆಲವು ಶಿಫಾರಸ್ಸುಗಳೊಂದಿಗೆ ಭಾರತ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ಇಂತಹ ಸನ್ನಿವೇಶದಲ್ಲಿಯೇ "೧೮೯೭ರಲ್ಲಿ ಕರ್ನಾಟಕದ ಕೋಲಾರ ಚಿನ್ನದ ಗಣಿಯಲ್ಲಿ ಸಂಭವಿಸಿದ ಶಾಫ್ಟ್ ದುರಂತದಲ್ಲಿ ಸುಮಾರು ೫೨ ಕಾರ್ಮಿಕರು ದುರ್ಮರಣಕ್ಕೀಡಾದರು."[2] ಹಾಗೆಯೇ ೧೮೯೯ರಲ್ಲಿ ಬಲೂಚಿಸ್ಥಾನದ ಕಲ್ಲಿದ್ದಲು ಗಣಿಯಲ್ಲಿ ಆಕಸ್ಮಿಕವಾಗಿ ಕಾಣಿಸಿಕೊಂಡ ಬೆಂಕಿಯಲ್ಲಿ ಕೆಲಸ ಮಾಡುತ್ತಿರುವ ಸುಮಾರು ೪೭ ಕಾರ್ಮಿಕರು ಜೀವಂತವಾಗಿ ಸುಟ್ಟುಹೋದರು."[3] ಇಂತಹ ಹತ್ತಾರು ಅವಘಡಗಳಿಂದ ಕಾರ್ಮಿಕರನ್ನು ಸಂರಕ್ಷಿಸುವ ಹಾಗೂ ಗಣಿಗಾರಿಕೆಯು ಅಬಾಧಿತವಾಗಿ ನಡೆಯುವಂತೆ ನೋಡಿಕೊಳ್ಳಲು ಭಾರತ ಸರ್ಕಾರವು ೧೯೧೯ರಲ್ಲಾದ ಅಂತರಾಷ್ಟ್ರೀಯ ಕಾರ್ಮಿಕ ಸಮ್ಮೇಳನದಲ್ಲಿ ಗಣಿಗಾರಿಕೆಗೆ ಸಂಬಂಧಿಸಿದ ಕಾಯ್ದೆ ಕಾನೂನುಗಳಿಗೆ ಸಂಬಂಧಿಸಿದ ಸ್ಪಷ್ಟ ಸ್ವರೂಪವು ರೂಪಗೊಂಡಿತು. ಅಂದಿನಿಂದ ೧೯೨೩ರಲ್ಲಿ Indian Mines Act-1923, ಮತ್ತು Indian Mines (Amendment) Act - 1935 ಇತ್ಯಾದಿ ಗಣಿ ಸಂಬಂಧಿತ ಕಾನೂನುಗಳು ಜಾರಿಗೊಂಡವು.

ಸ್ವಾತಂತ್ರ್ಯನಂತರ ಭಾರತ ಸರ್ಕಾರವು ದೇಶದಲ್ಲಿರುವ ವಿವಿಧ ವಲಯಗಳಿಗೆ ಸಂಬಂಧಿಸಿದಂತೆ ಹತ್ತಾರು ಗಣಿಕಾಯ್ದೆ ಕಾನೂನುಗಳನ್ನು ಜಾರಿಗೊಳಿಸಿತು. ಅವುಗಳಲ್ಲಿ

1. Indian Mining Act - 1952
2. Mines Rules - 1955
3. Mines and Minerals (Regulation and Development Act 1957,)
4. Iron ore Mines Labour Welfare Act - 1961
5. Iron ore Mines Labour Welfare Cess Reules - 1963

6. Payment of Wages (Minerals) Rules - 1956 ಇತ್ಯಾದಿ ಕಾನೂನುಗಳು ಅಸ್ತಿತ್ವದಲ್ಲಿದ್ದರೂ ಗಣಿಯಲ್ಲಿ ದುಡಿಯುತ್ತಿರುವ ಕಾರ್ಮಿಕರಿಗೆ ಇದುವರೆಗೂ ಸಮಾನ ವೇತನವಾಗಲಿ, ಸಾಮಾಜಿಕ ಭದ್ರತೆಯಾಗಲಿ, ಅಥವಾ ನಿರಂತರ ದುಡಿಮೆಯಾಗಲಿ ದೊರಕದೇ, ಕಾರ್ಮಿಕರ ಬದುಕು ತುಂಬಾ ಅತಂತ್ರಸ್ಥಿತಿಗೆ ಒಳಗಾಗಿದೆ. ಭಾರತ ಸರ್ಕಾರ ಜಾರಿಗೊಳಿಸಿದ ಹತ್ತು ಹಲವಾರು ಕಾಯ್ದೆ-ಕಾನೂನುಗಳು ಜಾರಿಗೊಂಡಿದ್ದರೂ, ಗಣಿಗಳಲ್ಲಿರುವ ಉತ್ಪಾದನಾ ಸಂಬಂಧಗಳಲ್ಲಿ ಬಹಳಷ್ಟು ವ್ಯತ್ಯಾಸಗಳಾಗಿವೆ. ಜೊತೆಗೆ ಉತ್ಪಾದನೆಯ ವಲಯಗಳಲ್ಲಿ ಮಾನವೀಯ ಮೌಲ್ಯಗಳಿಗೆ ಯಾವುದೇ ರೀತಿಯ ಬೆಲೆ ಇಲ್ಲದಂತಾಗಿದೆ. ಸರ್ಕಾರದ ಎಲ್ಲಾ ಕಾಯ್ದೆ ಕಾನೂನುಗಳು ಕೇವಲ ಕಾಗದದ ಕಡತಗಳಲ್ಲಿಯೇ ಉಳಿದುಕೊಂಡಿರುವುದರಿಂದ ಅವುಗಳ ಬಗ್ಗೆ ಮಾತನಾಡುವುದಾಗಲೀ, ಇಲ್ಲವೇ ಕಾರ್ಯಚಟುವಟಿಕೆಗೆ ತರುವುದಾಗಲೀ ಒಂದು ದೊಡ್ಡ ಅಣಕದಂತೆ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಗಣಿಕಾಯಿದೆ ಕಾನೂನುಗಳು ಏನನ್ನು ಹೇಳುತ್ತವೆ? ಅವುಗಳಿಂದ ಕಾರ್ಮಿಕರಿಗೆ ರಕ್ಷಣೆ ಸಾಧ್ಯವೇ? ಕಾನೂನುಗಳ ಉಲ್ಲಂಘನೆಗೆ ಕಾರಣಗಳೇನು? ಅವುಗಳನ್ನು ಜಾರಿಗೊಳಿಸಲು ಅಡ್ಡಿಯಾಗಿರುವ ಅಂಶಗಳಾವುವು? ಎಂಬುದನ್ನು ವಿಶ್ಲೇಷಿಸುವ ಮೂಲಕ ಈಗಾಗಲೇ ಮೌಲ್ಯವನ್ನು ಕಳೆದುಕೊಂಡ ನಾಣ್ಯಗಳಂತೆ ಇರುವ ಗಣಿ ಕಾಯ್ದೆ ಕಾನೂನುಗಳಿಗೆ ಹೊಸ ಅರ್ಥವನ್ನು ಕಲ್ಪಿಸುವ ಹಾಗೂ ಗಣಿಕಾರ್ಮಿಕರು ಅವುಗಳ ಬಗ್ಗೆ ಪ್ರಜ್ಞಾವಂತರಾಗುವಂತೆ ಮಾಡುವ ಮಹತ್ವಾಕಾಂಕ್ಷೆಯಿಂದಾಗಿ ಕಾರ್ಮಿಕರಿಗೆ ಸಂಬಂಧಿಸಿದ ಕೆಲವು ಗಣಿ ಕಾಯ್ದೆಗಳನ್ನು ಚರ್ಚಿಸುವ ಜೊತೆಗೆ ಅವುಗಳ ಪಾಲನೆಯು ಗಣಿ ಸಂಸ್ಥೆಗಳಲ್ಲಿ ಇದೆಯೇ ಎಂಬುದನ್ನು ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ.

ಭಾರತ ಸರ್ಕಾರವು ೧೯೫೨ರ ಗಣಿ ಕಾನೂನನ್ನು ಪರಿಷ್ಕರಿಸುವ ಮೂಲಕ ೧೯೫೮ರಲ್ಲಿ ಅನೇಕ ತಿದ್ದುಪಡಿಗಳೊಂದಿಗೆ ಹೊಸ ಗಣಿಕಾಯ್ದೆ ಕಾನೂನುಗಳನ್ನು ಜಾರಿಗೊಳಿಸಿತು. ಅದರಲ್ಲಿ ಗಣಿ ಸಂಸ್ಥೆಗಳ ನಿರ್ವಹಣೆಯ ಬಗ್ಗೆ, ಕಾರ್ಮಿಕರ ಹಕ್ಕು ಭಾದ್ಯತೆಗಳು ಹಾಗೂ ಗಣಿ ಕಾರ್ಮಿಕ ಅಧಿಕಾರಿಗಳ ಕರ್ತವ್ಯಗಳ ಬಗ್ಗೆ ವಿಶ್ಲೇಷಣೆಯನ್ನು ಒದಗಿಸುವ ಮೂಲಕ, ಗಣಿಗಾರಿಕೆಯ ಚಟುವಟಿಕೆಗೆ

ಒಂದು ಭದ್ರವಾದ ಬುನಾದಿಯನ್ನು ಹಾಕಿತು. ಇದರಲ್ಲಿ ಪ್ರಮುಖವಾಗಿ Regulation and Wages in Mines ಎಂಬ ವಿಷಯದ ಬಗ್ಗೆ ತುಂಬಾ ವಿವರಣಾತ್ಮಕ ಮಾಹಿತಿಯನ್ನು ಒದಗಿಸುತ್ತದೆ. ಇದರಿಂದ ಗಣಿಯಲ್ಲಿ ನಿರತ ಕಾರ್ಮಿಕರ ಜೀವನ ಮಟ್ಟದ ಸುಧಾರಣೆಗೆ ಸಾಕಷ್ಟು ಅವಕಾಶಗಳು ಲಭ್ಯವಾದವು. ನಂತರ ಸರ್ಕಾರವು ೧೯೬೧ರಲ್ಲಿ ಮೆಟಾಲಿಫೆರಸ್ ಮೈನ್ಸ್ ರೆಗುಲೇಷನ್ಸ್ ಕಾಯ್ದೆಯು ಜಾರಿಗೊಳಿಸಿತು. (ಖನಿಜಯುಕ್ತ ಗಣಿಗಳ ನಿಯಮಗಳು - ೧೯೬೧) ಇದರಲ್ಲಿ ಗಣಿಗಾರಿಕೆಗೆ ಸಂಬಂಧಿಸಿದಂತೆ ವರದಿಗಳು, ನೋಟೀಸು, ದಾಖಲೆಗಳು, ಅಧಿಕಾರಿ ಹಾಗೂ ಕಾರ್ಮಿಕರ ನೇಮಕ, ನಕ್ಷೆಗಳು, ಖನಿಜ ಸಾಗಣೆ, ಉತ್ಪಾದನೆ ಮತ್ತು ಗಣಿಗಾರಿಕೆಯಿಂದ ತಲೆದೂರುವ ದುಷ್ಪಾರಿಣಾಮಗಳ ನಿವಾರಣೆಯ ಬಗ್ಗೆ ಅನೇಕ ಸ್ಪಷ್ಟನೆಗಳನ್ನು ಒದಗಿಸುತ್ತದೆ. ನಂತರ ಭಾರತ ಸರ್ಕಾರವು ಅನೇಕ ತಿದ್ದುಪಡಿಗಳೊಂದಿಗೆ ೧೯೮೬ರ ಗಣಿಕಾನೂನುಗಳ ಅಧಿನಿಯಮಗಳನ್ನು ಹೊರಡಿಸಿತು. ಅದರಲ್ಲಿ ಗಣಿಗಾರಿಕೆಯ ನಿರ್ವಹಣೆಯ ಜೊತೆಗೆ ಸುರಕ್ಷತೆ, ಭದ್ರತೆ, ಉತ್ಪಾದನಾ ತಂತ್ರಗಳು, ಗಣಿ ಉತ್ಪಾದನೆಯ ಸರ್ವೆ ಹಾಗೂ ಅಪಘಾತಗಳಿಗೆ ಪರಿಹಾರೋಪಾಯಗಳನ್ನು ಸೂಚಿಸಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಇಲ್ಲಿಯವರೆಗೆ ಜಾರಿಗೊಂಡ ಪ್ರತಿಯೊಂದು ಗಣಿಗಾರಿಕೆಯ ನಿಯಮಗಳು, ಗಣಿಗಾರಿಕೆಯ ಉತ್ಪಾದನೆಯ ಜೊತೆಗೆ ಕಾರ್ಮಿಕರ ಯೋಗಕ್ಷೇಮದ ಬಗ್ಗೆ ಅತೀವ ಕಾಳಜಿಯನ್ನು ವಹಿಸಿವೆ. ಆದರೂ ಸಹ ಗಣಿಯಲ್ಲಿರುವ ಕಾರ್ಮಿಕರ ಬದುಕು ಅತಂತ್ರತೆಗೆ ಒಳಗಾಗಿರುವುದು ಜಿಲ್ಲೆಯ ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಗಣಿಕಾನೂನುಗಳಲ್ಲಿರುವ ಕೆಲವು ಮಾನವೀಯ ಅಂಶಗಳಿಗೆ ಸಂಬಂಧಿಸಿದ ಕಾಯ್ದೆಗಳನ್ನು ಪರಿಶೀಲನೆಗೆ ಒಳಪಡಿಸುವುದು ಅವಶ್ಯಕ. ಏಕೆಂದರೆ ಯಾವುದೇ ವಸ್ತುವಿನ ಉತ್ಪಾದನೆ ತೆಗೆದುಕೊಂಡರು ಕಡ್ಡಾಯವಾಗಿ ನಾಲ್ಕು ಉತ್ಪಾದನಾಂಗಗಳು ಅತ್ಯವಶ್ಯಕವಾಗಿ ಬೇಕು. ಆದರೆ ಇಂದಿನ ಉತ್ಪಾದನೆಯ ಚಟುವಟಿಕೆಯಲ್ಲಿ ದಿನೇ ದಿನೇ ಉತ್ಪಾದನಾಂಗಗಳ ಕಾರ್ಯ ಸ್ವರೂಪ ಬದಲಾಗುತ್ತಾ ಸಾಗಿದೆ. ಯಾವುದೇ ಉತ್ಪಾದನೆಯಲ್ಲಿ "ಕಾರ್ಮಿಕ" ಮಾತ್ರ ತುಂಬಾ ನಿರ್ಲಕ್ಷ್ಯಕ್ಕೆ ಒಳಗಾಗುತ್ತಿರುವುದನ್ನು ಕಾಣಬಹುದು. ಇದಕ್ಕಾಗಿ ಗಣಿ ಕಾನೂನುಗಳಲ್ಲಿರುವ ಕಾರ್ಮಿಕರ ರಕ್ಷಣೆಯ ವಿಧಿ ವಿಧಾನಗಳನ್ನು ಅರಿತುಕೊಳ್ಳುವುದು ಅವಶ್ಯಕವಿದೆ. ಈ ಹಿನ್ನೆಲೆಯಲ್ಲಿ ಕೆಲವು ಗಣಿ ಕಾನೂನುಗಳನ್ನು ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ.

### ೫.೧. ಗಣಿಯಲ್ಲಿನ ಆರೋಗ್ಯ - ನೈರ್ಮಲ್ಯ ವ್ಯವಸ್ಥೆ

೧೯೮೬ರಲ್ಲಿ ತಿದ್ದುಪಡಿಗೊಳಿಸಲಾದ ಗಣಿ ಕಾನೂನಿನಲ್ಲಿ ಪರಿಚ್ಛೇದ ೫ರ ಪ್ರಕಾರ ಪ್ರತಿಯೊಂದು ಗಣಿ ಸಂಸ್ಥೆಯಲ್ಲಿ ಕಾರ್ಮಿಕರ ಆರೋಗ್ಯಕ್ಕೆ ಸಂಬಂಧಿಸಿದಂತೆ ಆರೋಗ್ಯ ಮತ್ತು ನೈರ್ಮಲ್ಯದ ವ್ಯವಸ್ಥೆಯನ್ನು ಮಾಡುವುದು ಕಡ್ಡಾಯವಾಗಿದೆ. ಅವುಗಳಲ್ಲಿ ಕಾನೂನು '೩೦'ರ ಪ್ರಕಾರ ಕುಡಿಯುವ ನೀರಿನ ಸ್ವರೂಪ ಹಾಗೂ ಪ್ರಮಾಣದ ಬಗ್ಗೆ ಈ ರೀತಿಯ ವಿವರಣೆ ದೊರೆಯುತ್ತದೆ.

೧. ಪ್ರತಿಯೊಂದು ಗಣಿಯಲ್ಲಿ ಕೆಲಸ ಮಾಡುವ ಪ್ರತಿ ವ್ಯಕ್ತಿಗೂ ಕುಡಿಯಲು ೩ ಲೀಟರ್ ಪ್ರಮಾಣದಲ್ಲಿ ನೀರಿನ ವ್ಯವಸ್ಥೆಯನ್ನು ಕೆಲಸ ಮಾಡುವ ಪ್ರದೇಶದ ಸಮೀಪವೇ ಶೇಖರಿಸಬೇಕು.

೨. ೧೦೦ ಅಥವಾ ಅದಕ್ಕಿಂತಲೂ ಹೆಚ್ಚು ಜನರು ಕೆಲಸ ಮಾಡುವ ಗಣಿಗಳಲ್ಲಿ ಸಂಗ್ರಹಿಸಿರುವ ಕುಡಿಯುವ ನೀರನ್ನು ಯಾಂತ್ರಿಕ ಅಥವಾ ಇತರ ಸಾಧನಗಳ ಮೂಲಕ ಸಾಕಷ್ಟು ತಂಪಾಗಿರುವ ಬಗ್ಗೆ ತಪಾಸಣಾಧಿಕಾರಿಯಿಂದ ಲಿಖಿತ ರೂಪದ ಆದೇಶ ಹೊಂದಿರಬೇಕು.

೩. ಗಣಿ ಕಂಪನಿಯು ಕುಡಿಯುವ ನೀರಿನ ವ್ಯವಸ್ಥೆಯನ್ನು ಕೈಗೊಳ್ಳುವಾಗ, ಕಂಪನಿಯಲ್ಲಿ ದುಡಿಯುವ ಕೆಲಸಗಾರರಿಂದ ಯಾವುದೇ ರೀತಿಯ ನೀರಿನ ಶುಲ್ಕವನ್ನು ಪಡೆಯಬಾರದು.

**ಕಾನೂನು '೩೦'ರ ಪ್ರಕಾರ ಕುಡಿಯುವ ನೀರಿನ ಸಂಗ್ರಹ**

೧. ಕುಡಿಯುವ ನೀರಿಗಾಗಿ ಗಣಿ ಪ್ರದೇಶದಲ್ಲಿ ಕೊಳವೆಗಳ ವ್ಯವಸ್ಥೆ ಇಲ್ಲದಿದ್ದಲ್ಲಿ ನೀರನ್ನು ತಣ್ಣಗೆ ಹಾಗೂ ಶುದ್ಧವಾಗಿಡಲು ಪಾತ್ರೆಗಳ ವ್ಯವಸ್ಥೆಯನ್ನು ಮಾಡಬೇಕು. ಮತ್ತು ಆ ಪಾತ್ರೆಗಳನ್ನು ಪ್ರತಿದಿನವು ಶುಚಿಗೊಳಿಸಿ, ನೀರನ್ನು ತುಂಬಬೇಕು ಹಾಗೂ ಸಂಗ್ರಹಿಸಿದ ನೀರು ಶುದ್ಧ ಹಾಗೂ ಆರೋಗ್ಯಕರವಾಗಿರುವಂತೆ ನೋಡಿಕೊಳ್ಳಬೇಕು."

೨. ಸಾರ್ವಜನಿಕ ಮೂಲದಿಂದ ನೀರು ಸರಾಬರಾಜು ವ್ಯವಸ್ಥೆ ಇಲ್ಲದ ಸಂದರ್ಭದಲ್ಲಿ ಕಂಪನಿಯೇ ಒದಗಿಸುವ ಕಾರ್ಮಿಕರ ನೀರಿನ ಶುಚಿತ್ವದ ಬಗ್ಗೆ ಆರೋಗ್ಯಾಧಿಕಾರಿಗಳಿಂದ ಇದು ಕುಡಿಯಲು ಅರ್ಹ ನೀರು ಎಂಬ ಪ್ರಮಾಣ ಪತ್ರವನ್ನು ಗಣಿ ವ್ಯವಸ್ಥಾಪಕರು ಪಡೆಯತಕ್ಕದ್ದು.

**"ಕಾನೂನು '೩೩'ರ ಪ್ರಕಾರ ಶೌಚಾಲಯಗಳ ನಿರ್ಮಾಣ"**

೧. ಗಣಿಯಲ್ಲಿರುವ ಸ್ತ್ರೀ ಹಾಗೂ ಪುರುಷ ಕಾರ್ಮಿಕರಿಗೆ ಪ್ರತ್ಯೇಕವಾಗಿ ಸಾಕಷ್ಟು ಸಂಖ್ಯೆಯಲ್ಲಿ ಶೌಚಾಲಯ ನಿರ್ಮಿಸಬೇಕು.

೨. ಶೌಚಾಲಯವು ಕನಿಷ್ಠ ೫೦ ಪುರುಷರಿಗೆ ಒಂದರಂತೆ ಮತ್ತು ೫೦ ಸ್ತ್ರೀಯರಿಗೆ ಒಂದರಂತೆ ನಿರ್ಮಿಸಿ, ಅವುಗಳ ನಿರ್ವಹಣೆಯು ಸ್ವಚ್ಛತೆಯಿಂದ ಕೂಡಿರುವಂತೆ ನೋಡಿಕೊಳ್ಳಬೇಕು.

ಅಲ್ಲದೆ ಎಲ್ಲಾ ಗಣಿಗಳಲ್ಲಿ 'ಕಾನೂನು ೩೪'ರ ಪ್ರಕಾರ ಶೌಚಾಲಯಗಳ ನಿರ್ಮಾಣ ಹಾಗೂ ರಚನೆಯ ಬಗ್ಗೆ ಹತ್ತಾರು ನಿರ್ಭಂಧನೆಗಳನ್ನು ವಿಧಿಸುವ ಮೂಲಕ "ಶೌಚಾಲಯಗಳ ನಾಮಫಲಕ ಪ್ರದರ್ಶನ"ವನ್ನು ಮಾಡುವುದು ಕಡ್ಡಾಯಗೊಳಿಸಿದೆ."

ಈ ಮೇಲಿನ ಅತ್ಯವಶ್ಯಕ ಸೌಲಭ್ಯಗಳ ಬಗ್ಗೆ ವಿಶ್ಲೇಷಿಸುವ ಗಣಿ ಕಾಯ್ದೆಗಳನ್ನು

ಪರಾಮರ್ಶಿಸುವುದಾದರೆ ಜಿಲ್ಲೆಯ ಗಣಿಯಲ್ಲಿ ದುಡಿಯುವ ಕಾರ್ಮಿಕರಿಗಾಗಿ, ಸರ್ಕಾರ ಜಾರಿಗೊಳಿಸಿದ ಕಾರ್ಮಿಕ ಕಾಯ್ದೆಗಳ ಪ್ರಕಾರ ಯಾವುದೇ ಗಣಿಸಂಸ್ಥೆಯು ಕುಡಿಯುವ ನೀರಿಗಾಗಿ ಕೈಗೊಳ್ಳಬೇಕಾದ ಹತ್ತಾರು ಸಲಹೆಸೂಚನೆಗಳನ್ನು ಕಾನೂನು ಸ್ಪಷ್ಟಪಡಿಸಿದ್ದರೂ, ಅವೆಲ್ಲವಗಳನ್ನು ನಿರ್ಲಕ್ಷಿಸಿವೆ. ಜಿಲ್ಲೆಯ ಯಾವುದೇ ಗಣಿಸಂಸ್ಥೆಗಳಲ್ಲಿ ಶುದ್ಧವಾದ, ತಣ್ಣನೆಯ ನೀರಿನ ಸೌಕರ್ಯವನ್ನು ಕಾರ್ಮಿಕರಿಗೆ ಒದಗಿಸಲು ಸಾಧ್ಯವಾಗಿಲ್ಲ. ಬಹಳಷ್ಟು ಗಣಿ ಸಂಸ್ಥೆಗಳಲ್ಲಿಯೇ ತನ್ನ ಕಾರ್ಮಿಕರಿಗೆ ಕೆಲಸದ ಸ್ಥಳದಲ್ಲಿ ನೀರನ್ನು ಒದಗಿಸಲು ಲಾರಿಗಳಿಗೆ ಟ್ಯಾಂಕರನ್ನು ಜೋಡಿಸಿ, ಅವುಗಳ ಮೂಲಕ ಗಣಿ ಪ್ರದೇಶಗಳಲ್ಲಿರುವ ಕಬ್ಬಿಣದ ನೀರಿನ ಟ್ಯಾಂಕ್‌ಗಳಲ್ಲಿ ಕುಡಿಯುವ ನೀರನ್ನು ಸಂಗ್ರಹಿಸಲಾಗಿದೆ. ಅಂತಹ ಟ್ಯಾಂಕ್‌ಗಳ ಶುಚಿತ್ವ ಹಾಗೂ ರಕ್ಷಣೆಯ ವಿಷಯವು ತುಂಬಾ ನಿರ್ಲಕ್ಷ್ಯಗೆ ಒಳಗಾಗಿರುವುದರಿಂದ, ಗಣಿಗಳಲ್ಲಿರುವ ಕುಡಿಯುವ ನೀರು ತುಂಬಾ ಅಶುದ್ಧ ಹಾಗೂ ಕಲಬೆರಕೆಯಿಂದ ಕೂಡಿರುತ್ತದೆ. ಜೊತೆಗೆ ಕುಡಿಯಲು ಯೋಗ್ಯವಾಗಿರುವುದಿಲ್ಲವೆಂಬುದು ಕ್ಷೇತ್ರಕಾರ್ಯದಲ್ಲಿ ಸಂದರ್ಶಿಸಿದ ಎಲ್ಲಾ ಗಣಿ ಸಂಸ್ಥೆಗಳ ಕಾರ್ಮಿಕರಿಂದ ಸಹಜವೆಂಬಂತೆ ಕೇಳಿಬರುತ್ತದೆ. ಅಲ್ಲದೆ ಕಾರ್ಮಿಕರಿಗೆ ಗಣಿ ಪ್ರದೇಶದಲ್ಲಿ ಶೌಚಾಲಯಗಳನ್ನಾಗಲೀ ಅಥವಾ ಮೂತ್ರ ದೊಡ್ಡಿಗಳನ್ನಾಗಲೀ ನಿರ್ಮಿಸಿರುವ ಪ್ರಕರಣಗಳು ತುಂಬಾ ಅಪರೂಪವೆಂದೇ ಹೇಳಬೇಕಾಗಿದೆ.

**ಪರಿಚ್ಛೇದ ೬** "ಪ್ರಥಮ ಚಿಕಿತ್ಸೆ ಹಾಗೂ ವೈದ್ಯಕೀಯ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಕಾನೂನು ೪೦"ರ ಪ್ರಕಾರ:

೧. ಗಣಿಯಲ್ಲಿರುವ ಕೆಲಸಗಾರರಿಗೆ ಪ್ರಥಮ ಚಿಕಿತ್ಸೆಯ ತರಬೇತಿಯನ್ನು ಕೊಡುವುದು ಮತ್ತು ಪ್ರಥಮ ಚಿಕಿತ್ಸಾ ಸಲಕರಣೆಗಳನ್ನು ಒದಗಿಸುವುದು, ಪ್ರತಿಯೊಬ್ಬ ಗಣಿಮಾಲೀಕರ, ಅಥವಾ ವ್ಯವಸ್ಥಾಪಕರ ಕರ್ತವ್ಯವಾಗಿದೆ.

೨. ಗಣಿಯಲ್ಲಿ ಕಂಡುಬರುವ ಆಕಸ್ಮಿಕ ಅಪಘಾತಗಳು ಸಂಭವಿಸಿದ್ದಲ್ಲಿ ಅವುಗಳ ನಿರ್ವಹಣೆಗೆ ಆಯಾ ಗಣಿ ಸಂಸ್ಥೆಗಳು ಆಂಬುಲೆನ್ಸ್ ವಾಹನದ ವ್ಯವಸ್ಥೆಯನ್ನು ಕಡ್ಡಾಯವಾಗಿ ಹೊಂದಿರಬೇಕು. ಒಂದು ವೇಳೆ ಇಲ್ಲದಿದ್ದರೆ ಗಾಯಾಳುಗಳನ್ನು ತುರ್ತಾಗಿ ಆಸ್ಪತ್ರೆಗೆ ಒಯ್ಯಲು ಅನುಕೂಲವಾಗುವಂತೆ ಸ್ಟ್ರೆಚ್ಚರ್‌ನ್ನು ಅಳವಡಿಸಿರುವ ಯಾವುದೇ ತರಹದ ಮೋಟರ್ ವಾಹನದ ಸೌಲಭ್ಯವನ್ನು ಹೊಂದಿರಬೇಕು.

೩. ಕಾನೂನು ೪೨ ಹಾಗೂ ೪೩ರ ಪ್ರಕಾರ ಪ್ರತಿಯೊಂದು ಗಣಿಸಂಸ್ಥೆಯಲ್ಲಿ ೫೦ ಮಂದಿ ಅಥವಾ ಹೆಚ್ಚಿನ ಕಾರ್ಮಿಕರು ಇದ್ದಲ್ಲಿ, ಅಂತಹ ಗಣಿಸಂಸ್ಥೆಗಳಲ್ಲಿ ಪ್ರಥಮ ಚಿಕಿತ್ಸಾ ಕೊಠಡಿ ಹಾಗೂ ಪ್ರಥಮ ಚಿಕಿತ್ಸಾ ಸಿಬ್ಬಂಧಿಯನ್ನು ಹೊಂದಿರಲೇಬೇಕು.

೪. ಕಾನೂನು ೪೪ರ ಪ್ರಕಾರ ಪ್ರತಿಯೊಂದು ಗಣಿಯಲ್ಲಿ "ಪ್ರಥಮ ಚಿಕಿತ್ಸಾ ಕೇಂದ್ರ"(First Aid Station)ಗಳನ್ನು ಕಡ್ಡಾಯವಾಗಿ ಪ್ರಾರಂಭಿಸಬೇಕು ಏಕೆಂದರೆ

೧. ಗಣಿಯಲ್ಲಿ ಕೆಲಸ ಮಾಡುವ ವ್ಯಕ್ತಿಗಳಿಗೆ ಗಾಯಕ್ಕೆ ಚಿಕಿತ್ಸೆ ನೀಡಲು ಇವುಗಳು ಅತ್ಯವಶ್ಯಕ.

೧ಎ. ಸಾಮಾನ್ಯವಾಗಿ ಕೆಲಸಗಾರರಿಗೆ ಗಾಯ ಸಂಭವಿಸಬಹುದಾದ ಜಾಗದಲ್ಲಿಯೇ ಈ ಕೇಂದ್ರಗಳು ನೆಲೆಸಿರಬೇಕು.

೨. ಪ್ರತಿಯೊಂದು ಸ್ಕ್ರೀನಿಂಗ್ ಹಾಗೂ ಲೋಡಿಂಗ್ ಜಾಗಗಳಲ್ಲಿ ಪ್ರಥಮ ಚಿಕಿತ್ಸಾ ಕೇಂದ್ರಗಳನ್ನು ಪ್ರತಿಷ್ಠಾಪಿಸಬೇಕು.

೩. ೫೦ಕ್ಕಿಂತ ಹೆಚ್ಚು ಕೆಲಸಗಾರರು ಇರುವ ಗಣಿ ಪ್ರದೇಶಗಳಲ್ಲೆಲ್ಲಾ ಒಂದೊಂದು ಪ್ರಥಮ ಚಿಕಿತ್ಸಾ ಠಾಣೆಗಳನ್ನು ಕಡ್ಡಾಯವಾಗಿ ಆರಂಭಿಸಬೇಕು.

ಹೀಗೆ ಗಣಿಯಲ್ಲಿರುವ ಕಾರ್ಮಿಕರ ಆರೋಗ್ಯ ಮತ್ತು ನೈರ್ಮಲ್ಯೀಕರಣದ ವ್ಯವಸ್ಥೆಗಾಗಿ ಇಷ್ಟೆಲ್ಲಾ ಕಾನೂನಿನ ನಿರ್ದೇಶನ ಹಾಗೂ ನಿರ್ಬಂಧನೆಗಳಿದ್ದರೂ ಜಿಲ್ಲೆಯ ಶೇಕಡ ೭೦ರಷ್ಟು ಗಣಿ ಉತ್ಪಾದನಾ ಸಂಸ್ಥೆಗಳಲ್ಲಿ ಈ ಮೇಲಿನ ಸೌಲಭ್ಯಗಳನ್ನು ನೋಡಲು ಸಾಧ್ಯವಾಗುವುದಿಲ್ಲ. ಅವುಗಳಲ್ಲಿ ಅತೀ ಮುಖ್ಯವಾಗಿ ಜಿಲ್ಲೆಯ ಕೆಲವೇ ಗಣಿ ಸಂಸ್ಥೆಗಳಲ್ಲಿ ಕಾರ್ಮಿಕ ಯೋಗಕ್ಷೇಮದ ನಿರ್ವಹಣೆಗಾಗಿ ಬೆರಳೆಣಿಕೆಯಲ್ಲಿ ವೈದ್ಯಕೀಯ ಸೇವಾ ವಾಹನಗಳ ,ಸೌಕರ್ಯ ಹೊಂದಿರುವದನ್ನು ಕಾಣಬಹುದಾಗಿದೆ. ಬಹಳಷ್ಟು ಗಣಿಸಂಸ್ಥೆಗಳಲ್ಲಿ ಅಪಘಾತ ಸಂಭವಿಸಿದ ಸಂದರ್ಭಗಳಲ್ಲಿ ಖನಿಜವನ್ನು ಸಾಗಿಸುವ ಲಾರಿಗಳನ್ನೇ ರೋಗಿಗಳ ಉಪಚಾರಕ್ಕಾಗಿ ಬಳಸಲಾಗುತ್ತದೆ. ಜೊತೆಗೆ ಯಾವುದೇ ಗಣಿಸಂಸ್ಥೆಗಳಲ್ಲಿ ಪ್ರಥಮ ಚಿಕಿತ್ಸೆಯ ಕೇಂದ್ರಗಳಾಗಲೀ ಇಲ್ಲವೇ ಸಿಬ್ಬಂದಿಯವರನ್ನು ಹೊಂದಿಲ್ಲ. ಆದರೆ ಎಲ್ಲಾ ಗಣಿ ಸಂಸ್ಥೆಗಳಲ್ಲಿ ಹೆಸರಿಗೆ ಮಾತ್ರ ಪ್ರಥಮ ಚಿಕಿತ್ಸೆಯ ಫಲಕಗಳನ್ನು ತೂಗಿ ಹಾಕಿರುವುದನ್ನು ನೋಡಬಹುದು. ಇಂತಹ ಸನ್ನಿವೇಶವು ಹಲವಾರು ಪ್ರಶ್ನೆಗಳಿಗೆ ಎಡೆಮಾಡಿಕೊಡುತ್ತದೆ. ಅವುಗಳಲ್ಲಿ ಪ್ರಚಲಿತದಲ್ಲಿರುವ ಗಣಿಕಾನೂನುಗಳಿಂದ ಏನು ಪ್ರಯೋಜನೆ? ಅವುಗಳನ್ನು ಪರಿಶೀಲಿಸಿ ಕ್ರಮಕೈಗೊಳ್ಳುವ ಅಧಿಕಾರಿಗಳು ಎಲ್ಲಿಗೆ ಹೋಗಿದ್ದಾರೆ? ಹಾಗೂ ಆ ಮೇಲಿನ ಕಾಯಿದೆ-ಕಾನೂನುಗಳನ್ನು ಮಾಲೀಕರಿಗೆ, ವ್ಯವಸ್ಥಾಪಕರಿಗೆ, ಹಾಗೂ ಕಾರ್ಮಿಕರಿಗೆ ಮನವರಿಕೆ ಮಾಡಿಕೊಡುವ ಕಾರ್ಮಿಕ ಸಂಘಟನೆಗಳು ಏನು ಮಾಡುತ್ತಿವೆ ಎಂಬ ಪ್ರಶ್ನೆಗಳು ಸಹಜವಾಗಿ ಮೂಡಿಬರುತ್ತವೆ.

**೫.೨. ಕೆಲಸದ ಅವಧಿ ಮತ್ತು ಮಿತಿ**

"೧೯೮೭ರಲ್ಲಿ ತಿದ್ದುಪಡಿಗೊಳಿಸಲಾದ ಗಣಿ ಕಾನೂನಿನ ಪ್ರಕಾರ 'ಪರಿಚ್ಛೇದ ೬'ರಲ್ಲಿ ಕೆಲಸದ ಅವಧಿ ಹಾಗೂ ಕೆಲಸದ ಮಿತಿಯ ಬಗ್ಗೆ ಅನೇಕ ಕಾನೂನುಗಳನ್ನು ಜಾರಿಗೊಳಿಸಲಾಗಿದೆ."[೬]

ಕಾಯ್ದೆ ೨೮ರ ಕಾನೂನಿನ ಪ್ರಕಾರ ಯಾವುದೇ ಕೆಲಸಗಾರನು ವಾರದಲ್ಲಿ ಆರು ದಿನಗಳಿಗಿಂತ ಹೆಚ್ಚು ಕೆಲಸವನ್ನು ಮಾಡಬಾರದು.

ಕಾನೂನು ೨೯ರ ಪ್ರಕಾರ ೧. ಯಾವುದಾದರೂ ಕೆಲಸಗಾರರಿಂದ ವಾರದ ರಜಾ ದಿನಗಳಲ್ಲಿ ಅಥವಾ ಅನಿವಾರ್ಯ ಸಂದರ್ಭಗಳಿಂದಾಗಿ ಕೆಲಸವನ್ನು ಪಡೆದುಕೊಂಡಿದ್ದಲ್ಲಿ ಆ ರಜಾದಿನದ ಬದಲು ಬೇರೆ ದಿನವನ್ನು ರಜಾದಿನವನ್ನಾಗಿ ಅವಕಾಶ ಕಲ್ಪಿಸಬೇಕು. ಹಾಗೂ ಆಯಾ ತಿಂಗಳ ಒಳಗೆಯೇ ರಜಾ ಸೌಕರ್ಯವನ್ನು ಮುಗಿಸಬೇಕು. ಅಥವಾ ಮುಂದಿನ ೨ ತಿಂಗಳೊಳಗೆ ಕಾರ್ಮಿಕನ ಒಟ್ಟು ಸಂಖ್ಯೆಯ ಪರಿಹಾರದ ರಜೆಗಳನ್ನು ಕಡ್ಡಾಯವಾಗಿ ಕೊಡಲೇಬೇಕು.

ಕಾನೂನು ೩೦ರ ಪ್ರಕಾರ ೧. ತೆರೆದ ಗಣಿಯಲ್ಲಿ ಕೆಲಸ ಮಾಡುವ ಯಾವುದೇ ಕಾರ್ಮಿಕನು ಒಂದು ವಾರದಲ್ಲಿ ೪೮ ಗಂಟೆಗಳಿಗಿಂತ ಹೆಚ್ಚಿನ ಅಥವಾ ಒಂದು ದಿನದಲ್ಲಿ ೯ ಗಂಟೆಗಳಿಗಿಂತ ಹೆಚ್ಚಿನ ಅವಧಿಯ ಕೆಲಸವನ್ನು ಕಾರ್ಮಿಕನಿಂದ ಪಡೆಯಬಾರದು.

೩. ಯಾವುದೇ ವ್ಯಕ್ತಿಯಿಂದಲೂ ಒಂದೇ ಪಾಳಿಯಲ್ಲಿ ಕೆಲಸದ ನಡುವಿನ ವಿರಾಮದ ಸಹಿತ ೧೨ ಗಂಟೆಗಳಿಗಿಂತ ಹೆಚ್ಚಿಗೆ ಕೆಲಸವನ್ನು ತೆಗೆದುಕೊಳ್ಳಬಾರದು ಮತ್ತು ಕೆಲಸದ ವೇಳೆಯಲ್ಲಿ ಒಂದೇ ಸಮನೆ ೫ ಗಂಟೆಗಳಿಗಿಂತ ಹೆಚ್ಚಿಗೆ ಕೆಲಸವನ್ನು ತೆಗೆದುಕೊಳ್ಳುವುದು ಅಪರಾಧವಾಗಿದೆ.

“ಕಾನೂನು ೩೨ರ ಪ್ರಕಾರ ಗಣಿಯಲ್ಲಿ ರಾತ್ರಿ ಕೆಲಸವನ್ನು ಪೂರೈಸಿದ ಕಾರ್ಮಿಕರಿಗೆ ಅವನ ಪಾಳಿಯು ಮುಗಿದ ನಂತರ ೨೪ ಗಂಟೆಗಳಷ್ಟು ವಿರಾಮವನ್ನು ಕೊಡಬೇಕು.”[೮]

**“ಕಾನೂನು ೩೩ರ ಪ್ರಕಾರ “ಹೆಚ್ಚುವರಿ ಅವಧಿಗೆ ಹೆಚ್ಚುವರಿ ವೇತನ”[೯]**

೧. ತೆರೆದ ಗಣಿಯಲ್ಲಿ ಕೆಲಸ ಮಾಡುವ ಯಾವುದೇ ವ್ಯಕ್ತಿಯು ದಿನಕ್ಕೆ ೬ ತಾಸಿಗಿಂತ ಹೆಚ್ಚು ಕೆಲಸ ಮಾಡಿದರೆ ಅಥವಾ ವಾರದಲ್ಲಿ ೪೮ ಗಂಟೆಗಳಿಗಿಂತ ಹೆಚ್ಚು ಕೆಲಸ ಮಾಡಿದರೆ, ಅಂತಹ ಕಾರ್ಮಿಕರಿಗೆ ಹೆಚ್ಚುವರಿ ಕೆಲಸದ ಅವಧಿಯನ್ನು ಲೆಕ್ಕ ಹಾಕಿ ಅವನ ನಿಗಧಿತ ವೇತನದ ಎರಡು ಪಟ್ಟಿನಷ್ಟು ವೇತನವನ್ನು ಪಾವತಿಸಬೇಕು.

ಕಾನೂನು ೪೬ರ ಪ್ರಕಾರ ೧. ಪೂರ್ವಾಹ್ನ ಅರು ಗಂಟೆ ಹಾಗೂ ಅಪರಾಹ್ನ ೭ ಗಂಟೆಯ ಒಳಗಿನ ಅವಧಿಯನ್ನು ಬಿಟ್ಟು, ಬೇರೆ ಸಮಯದಲ್ಲಿ ಯಾವುದೇ ಕಾರಣದಿಂದಲೂ ಸ್ತ್ರೀಯರನ್ನು ಕೆಲಸಕ್ಕೆ ನೇಮಿಸಿಕೊಳ್ಳಬಾರದು.

೨. ಪ್ರತಿ ಮಹಿಳಾ ಕೆಲಸಗಾರ್ತಿಯ ಒಂದು ದಿನದ ಕೆಲಸದ ಅಂತ್ಯದ ನಂತರ ಮುಂದಿನ ದಿನದ ಕೆಲಸದ ಆರಂಭದ ನಡುವೆ ಕನಿಷ್ಠ ೧೧ ಗಂಟೆಗಳ ಕಾಲ ವಿರಾಮ ನೀಡಬೇಕು.

ಹೀಗೆ ಗಣಿ ಕಾರ್ಮಿಕರ ದುಡಿಮೆಗೆ ಸಂಬಂಧಿಸಿದಂತೆ ಅನೇಕ ಕಾಯ್ದೆ ಕಾನೂನುಗಳು ಚಾಲ್ತಿಯಲ್ಲಿದ್ದರೂ ಜಿಲ್ಲೆಯ ಬಹಳಷ್ಟು ಗಣಿ ಸಂಸ್ಥೆಗಳಲ್ಲಿ ಕಾರ್ಮಿಕರ ಕೆಲಸದ ಅವಧಿಯ ನಿರ್ಧಿಷ್ಟತೆಯ ಬಗ್ಗೆ ಸ್ಪಷ್ಟತೆ ಇರುವುದಿಲ್ಲ. ಗಣಿಕಾರ್ಮಿಕರು ಹೆಚ್ಚಾಗಿ ಕಾಂಟ್ರಕ್ಟರ್ ಕೈಕೆಳಗೆ ಕೆಲಸ ಮಾಡುವುದರಿಂದ ಬೆಳಗ್ಗೆ ೮ ಗಂಟೆಯಿಂದ ಹಿಡಿದು ಸಾಯಂಕಾಲ ೫.೩೦ ರಿಂದ ೬.೦೦ ಗಂಟೆಯವರೆಗೆ ಕೆಲಸವನ್ನು ಮಾಡಬೇಕಾಗುತ್ತದೆ. ಅವರಿಗೆ ವಾರಕ್ಕೆ ಒಂದು ದಿನ ರಜೆಯ ಕಾರ್ಯಯೋಜನೆಯ ಸೌಲಭ್ಯದ ಯೋಜನೆಯು ಕೇವಲ ಕಾಯ್ದೆ ಕಾನೂನುಗಳ ಕಡತಗಳಲ್ಲಿ ಉಳಿದುಕೊಂಡಿದೆ ಜೊತೆಗೆ ಹೆಚ್ಚುವರಿ ಅವಧಿಯ ಕೆಲಸಕ್ಕೆ ಹೆಚ್ಚುವರಿ ವೇತನದ ನಿಯಮವಂತೂ ಜಿಲ್ಲೆಯ ಗಣಿಸಂಸ್ಥೆಗಳಲ್ಲಿ ಜಾರಿಗೊಂಡಿರುವುದು ತುಂಬಾ ಅಪರೂಪ ಎಂದೇ ಹೇಳಬಹುದು.

**೫.೩. ದಾಖಲಾತಿಗಳು**

"ಕಾನೂನು ೪೭ರ ಪ್ರಕಾರ ೧. ಪ್ರತಿ ಗಣಿಯಲ್ಲೂ ಕೆಲಸಕ್ಕಾಗಿ ಉದ್ಯೋಗ ಮಾಡುವ ವ್ಯಕ್ತಿಗಳ ಬಗ್ಗೆ ಪೂರ್ವ ವಿವರಗಳನ್ನು ನಿಗದಿತ ನಮೂನೆಯಲ್ಲಿ ದಾಖಲಿಸಬೇಕು."[೧೦] ಹಾಗೂ ಆ ದಾಖಲೆಗಳನ್ನು ಪ್ರತಿಯೊಂದು ಗಣಿ ಕಛೇರಿಗಳಲ್ಲಿ ಕಡ್ಡಾಯವಾಗಿ ಇಡತಕ್ಕದ್ದು.

೨. ದಾಖಲೆಗಳಲ್ಲಿ ಕಾರ್ಮಿಕರ ಉದ್ಯೋಗ ವಯಸ್ಸು, ಲಿಂಗ, ತಂದೆ, ಗಂಡ ಹಾಗೂ ವಿಳಾಸ ಇತ್ಯಾದಿಗಳ ವಿವರಗಳು ಒಳಗೊಂಡಿರಬೇಕು.

೩. ಇಂತಹ ದಾಖಲಾತಿಗಳಲ್ಲಿ ಎಲ್ಲಾ ಕಾರ್ಮಿಕರ ಪೂರ್ವ ವಿವರಗಳನ್ನು ದಾಖಲಿಸುವ ತನಕ, ಯಾವ ಕೆಲಸಗಾರನನ್ನೂ ಗಣಿ ಕೆಲಸದಲ್ಲಿ ತೊಡಗಿಸುವಂತಿಲ್ಲ ಮತ್ತು ಆ ದಾಖಲಾತಿ ಪುಸ್ತಕದಲ್ಲಿ ದಾಖಲಾದ ದಿನದ ನಂತರವಷ್ಟೇ ಯಾವುದೇ ಕಾರ್ಮಿಕನನ್ನು ಕೆಲಸಕ್ಕೆ ಸೇರಿಸಿಕೊಳ್ಳತಕ್ಕದ್ದು.

೪. ಯಾವುದೇ ಸ್ವರೂಪದ ಗಣಿಗಾರಿಕೆಯಲ್ಲಿ ಕೆಲಸವನ್ನು ನಿರ್ವಹಿಸುವ ಕಾರ್ಮಿಕರ ಪೂರ್ಣ ವಿವರ, ವ್ಯವಸ್ಥಾಪಕರ ವಿವರ, ಹುದ್ದೆಯ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ, ಸಂಘ-ಸಂಸ್ಥೆಗಳಿಗೆ ನೀಡಬೇಕು.

ಹೀಗೆ ಈ ಮೇಲ್ಕಾಣಿಸಿದ ಎಲ್ಲಾ ಕಾಯ್ದೆ ಕಾನೂನುಗಳು ಗಣಿಯಲ್ಲಿರುವ ಕಾರ್ಮಿಕರ ದಾಖಲೆಗಳಿಗೆ ಸಂಬಂಧಿಸಿದಂತೆ ಅನೇಕ ಸಲಹೆ ಸೂಚನೆಗಳಿದ್ದರೂ ಜಿಲ್ಲೆಯ NMDC, SMIORE, MSPL, VESCO ಗಣಿ ಸಂಸ್ಥೆಗಳನ್ನು ಬಿಟ್ಟು, ಇನ್ನುಳಿದ ಯಾವುದೇ ಗಣಿಸಂಸ್ಥೆಯಲ್ಲಿ ಮೇಲಿನ

ಯಾವುದೇ ಕಾನೂನುಗಳನ್ನು ನೋಡಲು ಸಾಧ್ಯವಾಗುವುದಿಲ್ಲ. ಬಹುಮುಖ್ಯವಾಗಿ ಕಾರ್ಮಿಕರಿಗೆ ರಜೆಯನ್ನು ಕೊಡುವುದಾಗಲೀ ಅಥವಾ ಹೆಚ್ಚುವರಿ ಕೂಲಿಯನ್ನು ಕೊಡುವುದಾಗಲೀ ಅಸಾಧ್ಯವಾದ ಸಂಗತಿಗಳೆಂದೇ ಹೇಳಬೇಕಾಗಿದೆ. ಇನ್ನು ಮಹಿಳೆಯ ದುಡಿಮೆ ಹಾಗೂ ಕೆಲಸದ ಸ್ವರೂಪಗಳು ಕೇವಲ ಕಾಗದದಲ್ಲಿಯೇ ಉಳಿದಿವೆ. ಜಿಲ್ಲೆಯ ಬಹಳಷ್ಟು ಗಣಿಸಂಸ್ಥೆಗಳಲ್ಲಿ ದುಡಿಯುವ ಕಾರ್ಮಿಕರ ಯಾವುದೇ ಪೂರ್ವಪರ ದಾಖಲಾತಿಗಳನ್ನು ನೋಡಲು ಸಾಧ್ಯವಾಗುವುದಿಲ್ಲ. ಆದರೆ ಪ್ರತಿ ವರ್ಷಕ್ಕೊಮ್ಮೆ ಗಣಿ ಇಲಾಖೆಯ ಉಪನಿರ್ದೇಶಕರ ಕಛೇರಿಗೆ (Deputy Director of Mines) ಮಾತ್ರ ಕಾರ್ಮಿಕರ ಸಂಪೂರ್ಣ ಮಾಹಿತಿಯನ್ನು ಕಳುಹಿಸುವುದು ಮಾತ್ರ ನಿರಂತರವಾಗಿ ತೆರೆಮರೆಯಲ್ಲಿ ನಡೆದಿರುತ್ತದೆ.

"೧೯೮೬ರ ತಿದ್ದುಪಡಿಗೊಳಿಸಲಾದ ಗಣಿ ಕಾನೂನಿನ ಪರಿಚ್ಛೇದ ೫ರ ಪ್ರಕಾರ ಕಾನೂನು ೨೯(B)ರ ಆದೇಶದಂತೆ ಗಣಿಕಾರ್ಮಿಕರಿಗಾಗಿ ಮೂಲ ಹಾಗೂ ನಿಯತಕಾಲಿಕ ವೈದ್ಯಕೀಯ ಪರೀಕ್ಷೆಗಳನ್ನು ಆಯಾ ಗಣಿ ಕಂಪನಿಯ ಮಾಲೀಕರು, ವ್ಯವಸ್ಥಾಪಕರು ತಪ್ಪದೆ ಈ ಕೆಳಗಿನ ವ್ಯವಸ್ಥೆಗಳನ್ನು ಮಾಡಲೇಬೇಕೆಂದು ಸೂಚಿಸುತ್ತದೆ."[೧೧]

ಅವುಗಳಲ್ಲಿ ಗಣಿಯಲ್ಲಿರುವ ಪ್ರತಿಯೊಬ್ಬ ಉದ್ಯೋಗಿಯು ಪ್ರತಿ ೫ ವರ್ಷಗಳಿಗೊಮ್ಮೆ ಮೂಲ ವೈದ್ಯಕೀಯ ಪರೀಕ್ಷೆಗೊಳಪಡತಕ್ಕದ್ದು ಮತ್ತು ಗಣಿಯ ೧/೫ ಅಂಶದಷ್ಟು ಕೆಲಸಗಾರರನ್ನು ಪ್ರತಿವರ್ಷವು ಕಡ್ಡಾಯವಾಗಿ ವೈದ್ಯಕೀಯ ಪರೀಕ್ಷೆಗೊಳಪಡಿಸಬೇಕು.

"ಕಾನೂನು ೨೯ (I)ರ ಪ್ರಕಾರ ಸ್ತ್ರೀಯರ ವೈದ್ಯಕೀಯ ಪರೀಕ್ಷೆಯ ವಿಧಾನವು ಈ ಕೆಳಗಿನಂತೆ ಕೈಗೊಳ್ಳಬೇಕು. ಯಾವುದೇ ಪುರುಷ ವೈದ್ಯರು ಮಹಿಳಾ ಕಾರ್ಮಿಕರನ್ನು ತಪಾಸಿಸುವಾಗ ಮತ್ತೊಬ್ಬ ಸ್ತ್ರೀಯ ಉಪಸ್ಥಿತಿ ಇರಲೇಬೇಕು. ಒಂದು ವೇಳೆ ಮಹಿಳಾ ಕಾರ್ಮಿಕರು ಇಲ್ಲದಿದ್ದ ಪಕ್ಷದಲ್ಲಿ ವೈದ್ಯರು ಸ್ತ್ರೀಯರನ್ನು ಪರೀಕ್ಷೆ ಮಾಡುವಂತಿಲ್ಲ".[೧೨] ಗಣಿಕಾರ್ಮಿಕರ ವೈದ್ಯಕೀಯ ಪರೀಕ್ಷಾ ಸೇವೆಗೆ ಸಂಬಂಧಿಸಿದಂತೆ ಈ ಮೇಲಿನ ನಿರ್ಭಂದನೆಗಳಿದ್ದರೂ, ಯಾವುದೇ ಗಣಿಸಂಸ್ಥೆಯು ಅವುಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿಲ್ಲ. ಗಣಿಯಲ್ಲಿ ಕೆಲಸ ಮಾಡುವ ಕಾರ್ಮಿಕ ಹಾಗೂ ಅವನ ಕುಟುಂಬವು ಅಸ್ವಸ್ಥತೆಗೆ ಒಳಗಾದರೆ ಅವರಿಗೆ ಗಣಿಸಂಸ್ಥೆಗಳು ಆರ್ಥಿಕ ಸಹಾಯವಾಗಲೀ, ವಾಹನ ಸೇವೆಯಾಗಲೀ ಯಾವುದನ್ನು ಪುಕ್ಕಟೆಯಾಗಿ ಒದಗಿಸುತ್ತಿಲ್ಲ. ಇನ್ನೂ ಮಹಿಳೆಯ ವೈದ್ಯಕೀಯ ತಪಾಸಣೆಯಂತೂ ತುಂಬಾ ನಿರ್ಲಕ್ಷ್ಯಗೆ ಒಳಗಾಗಿದೆ. ಮುಖ್ಯವಾಗಿ VESCO, VSL, MSPL, ಕಂಪನಿಗಳು ವರ್ಷಕ್ಕೊಮ್ಮೆ ವೈದ್ಯಕೀಯ ಸೇವೆಗಾಗಿ ಅಲ್ಪ ಪ್ರಮಾಣದ ಹಣವನ್ನು ಕಾರ್ಮಿಕರಿಗೆ ವಿತರಿಸುತ್ತಿವೆ. ಇನ್ನುಳಿದ ಗಣಿಸಂಸ್ಥೆಗಳಲ್ಲಿ ಇಂತಹ ಸೌಲಭ್ಯಗಳು ಕಂಡುಬರುವುದಿಲ್ಲ.

"ಪರಿಚ್ಛೇದ ೯ರ ಪ್ರಕಾರ ಕಾರ್ಮಿಕರ ಯೋಗಕ್ಷೇಮ ಸೌಲಭ್ಯಗಳು"[೧೩]

"ಕಾನೂನು ೬೨ರ ಪ್ರಕಾರ ೫೦ ಜನರಿಗಿಂತ ಹೆಚ್ಚಿನ ಸಂಖ್ಯೆಯ ಕೆಲಸಗಾರರನ್ನು ಹೊಂದಿರುವ ಗಣಿ ಸಂಸ್ಥೆಗಳಲ್ಲಿ ಅಥವಾ ವಾಹನಗಳಿಗೆ ಅದಿರು ತುಂಬುವ ಸ್ಥಳಗಳಲ್ಲಿ ಅಥವಾ ಕಾರ್ಯಗಾರಗಳಲ್ಲಿ ಅಥವಾ ೨೫ಕ್ಕಿಂತಲೂ ಹೆಚ್ಚು ಕೆಲಸಗಾರರಿರುವ ಗಣಿಸಂಸ್ಥೆಯ ದ್ವಾರಗಳಲ್ಲಿ ಸಾಕಷ್ಟು ದೊಡ್ಡದಾದ ಹಾಗೂ ಊಟ, ತಿಂಡಿ ಮತ್ತು ವಿಶ್ರಾಂತಿ ಪಡೆಯಲು ಅನುಕೂಲವಾಗುವಂತಹ ವಿಶ್ರಾಂತಿಗೃಹಗಳನ್ನು ಕಡ್ಡಾಯವಾಗಿ ರಚಿಸಬೇಕು.

೧. "ಕಾನೂನು ೬೩ರ ಪ್ರಕಾರ"[೧೪] ಪ್ರತಿ ವಿಶ್ರಾಂತಿ ಗೃಹದ ನೆಲದ ವಿಸ್ತೀರ್ಣ ೧೪ ಚದುರ ಮೀಟರ್‌ಗಿಂತ ಕಡಿಮೆ ಇರಬಾರದು.

೨. ಕಾರ್ಮಿಕರ ವಿಶ್ರಾಂತಿ ಗೃಹವು ನೆಲದಿಂದ ೨.೫ ಮೀಟರ್ ಎತ್ತರದಲ್ಲಿರಬೇಕು. ಸ್ವಚ್ಛ ಹಾಗೂ ಅಚ್ಚುಕಟ್ಟನ್ನು ಹೊಂದಿರಬೇಕು.

೩. ಕಾನೂನು ೬೪ರ ಪ್ರಕಾರ ಯಾವುದೇ ಗಣಿಸಂಸ್ಥೆಯಲ್ಲಿ ೨೫೦ ಅಥವಾ ಅದಕ್ಕಿಂತಲೂ ಹೆಚ್ಚಿನ ಕಾರ್ಮಿಕರಿರುವ ಪ್ರತಿ ಗಣಿಸಂಸ್ಥೆಯಲ್ಲಿ ಉಪಹಾರ ಗೃಹಗಳನ್ನು ಆರಂಭಿಸಬೇಕು.

೪. ಉಪಹಾರ ಗೃಹ ನಿರ್ಮಾಣದ ಬಗ್ಗೆ ಸಂಬಂಧಿಸಿದ ತಪಾಸಣಾಧಿಕಾರಿಗಳಿಂದ ಅನುಮತಿಯನ್ನು ಪಡೆದಿರಬೇಕು ಮತ್ತು ಉಪಗೃಹವನ್ನು ಆಗಾಗ ತಪಾಶಿಸುವ ಅಧಿಕಾರವನ್ನು ತಪಾಸಣಾಧಿಕಾರಿಗಳು ಪಾಲಿಸಬೇಕು.

೫. ಉಪಗೃಹದಲ್ಲಿ ಶೌಚಾಲಯವನ್ನು ವ್ಯವಸ್ಥೆ ಕಡ್ಡಾಯವಾಗಿರಬೇಕು.

೬. ಉಪಹಾರ ಗೃಹದಲ್ಲಿ ಕಸದ ತೊಟ್ಟಿ, ಚರಂಡಿ ವ್ಯವಸ್ಥೆ ಇರಬೇಕು.

೭. ಕಾನೂನು ೬೬, ೬೭, ೬೮ರ ಪ್ರಕಾರ ಉಪಹಾರ ಗೃಹದ ಪೀಠೋಪಕರಣಗಳು ಹಾಗೂ ಸಲಕರಣೆಗಳ ವಿವರ, ಶುಚಿತ್ವ ಹಾಗೂ ನಿರ್ವಹಣೆಯ ಬಗ್ಗೆ ವಿವರಣೆ ನೀಡುತ್ತದೆ.

ಕಾನೂನು ೭೦ರ ಪ್ರಕಾರ ಉಪಹಾರ ಗೃಹದಲ್ಲಿರುವ ವಸ್ತುಗಳ ದರಗಳ ನಿಗದಿ ಬಗ್ಗೆ ವಿವರ.

ಕಾರ್ಮಿಕರ ಉಪಹಾರ ಗೃಹದಲ್ಲಿರುವ ಎಲ್ಲಾ ಆಹಾರ ಪದಾರ್ಥಗಳಿಗೆ ಲಾಭದಾಯಕವಲ್ಲದ ದರಗಳನ್ನು ನಿಗದಿಗೊಳಿಸಬೇಕು. ದರದ ಪಟ್ಟಿಯನ್ನು ಇಂಗ್ಲಿಷ್, ಹಿಂದಿ ಹಾಗೂ ಆಯಾ ಪ್ರದೇಶದ ಸ್ಥಳೀಯ ಭಾಷೆಗಳಲ್ಲಿ ಬರೆದು ಪ್ರದರ್ಶಿಸಬೇಕು.

"ಕಾನೂನು ೭೨ರ ಪ್ರಕಾರ ಯಾವುದೇ ಗಣಿಸಂಸ್ಥೆಯಲ್ಲಿ ೫೦೦ ಅಥವಾ ಅದಕ್ಕಿಂತಲೂ

ಹೆಚ್ಚು ಸಂಖ್ಯೆಯ ಕೆಲಸಗಾರರನ್ನು ಹೊಂದಿರುವ ಗಣಿಸಂಸ್ಥೆಯು ಓರ್ವ ಕಾರ್ಮಿಕ ಕ್ಷೇಮಾಧಿಕಾರಿಗಳನ್ನು ನೇಮಿಸಿಕೊಳ್ಳಬೇಕು."[೧೫] ಒಂದು ವೇಳೆ ಕಾರ್ಮಿಕರ ಸಂಖ್ಯೆ ೨೫೦೦ಕ್ಕಿಂತ ಹೆಚ್ಚಿದ್ದರೆ ಮತ್ತೊಬ್ಬ ಸಹಾಯಕ ಕಾರ್ಮಿಕ ಕ್ಷೇಮಾಭಿವೃದ್ಧಿ ಅಧಿಕಾರಿಯನ್ನು ನೇಮಿಸಿಕೊಳ್ಳಬೇಕು.

ಹೀಗೆ ಭಾರತ ಸರ್ಕಾರ ಪ್ರಕಟಿಸಿದ ಗಣಿ ಕಾನೂನುಗಳಲ್ಲಿ ಕಾರ್ಮಿಕರ ಯೋಗಕ್ಷೇಮ ಸೌಲಭ್ಯಗಳಿಗಾಗಿ ಇಷ್ಟೆಲ್ಲಾ ಕಾಯ್ದೆ ಕಾನೂನುಗಳು ಲಭ್ಯವಿದ್ದರೂ ಜಿಲ್ಲೆಯ ಯಾವುದೇ ಗಣಿ ಸಂಸ್ಥೆಯಲ್ಲಿ ಕಾರ್ಮಿಕರ ವಿಶ್ರಾಂತಿ ಗೃಹಗಳನ್ನು ನೋಡಲು ಸಾಧ್ಯವಿಲ್ಲ. ಹಾಗೆಯೇ ಜಿಲ್ಲೆಯ ಕೆಲವು ಗಣಿ ಸಂಸ್ಥೆಗಳಲ್ಲಿ ಅನಧಿಕೃತ, ಪರವಾನಿಗೆ ಹೊಂದಿರದ ಖಾಸಗಿ ವ್ಯಕ್ತಿಗಳು ಗಣಿ ಸಂಸ್ಥೆಗಳಲ್ಲಿ ಉಪಹಾರ ಗೃಹಗಳನ್ನು ನಡೆಸುತ್ತಿದ್ದಾರೆ. ಅದರಲ್ಲಿ ಸುಚಿತ್ವವಾಗಲೀ, ಆಹಾರ ಪದಾರ್ಥಗಳಿಗೆ ಕಡಿಮೆ ಬೆಲೆಯಾಗಲಿ ಕಂಡುಬರುವುದಿಲ್ಲ. ಜಿಲ್ಲೆಯ ಕೆಲವು ಗಣಿ ಸಂಸ್ಥೆಗಳಲ್ಲಿ ಗಣಿ ಮಾಲೀಕರ ನಿರ್ವಹಣೆಯಲ್ಲಿ ಉಪಹಾರ ಗೃಹಗಳಿದ್ದು, ಅಲ್ಲಿರುವ ಆಹಾರ ಪದಾರ್ಥಗಳ ಬೆಲೆಯು ತುಂಬಾ ಕಡಿಮೆ ಇರುತ್ತದೆ. ಆದರೆ ಇಂತಹ ಸೌಕರ್ಯ ಬೆರಳೆಣಿಕೆಯಲ್ಲಿ ಮಾತ್ರ ಇದೆ. ಇನ್ನುಳಿದಂತೆ ಉಪಹಾರ ಗೃಹ ಹಾಗೂ ಹೋಟೆಲ್‌ಗಳನ್ನು ಬೇರೆ, ಬೇರೆ ಗಣಿಸಂಸ್ಥೆಗಳಲ್ಲಿ ನೋಡುವುದು ದುರ್ಲಭವೆಂದೇ ಹೇಳಬಹುದು.

೧೯೫೨ರ ಗಣಿಕಾಯ್ದೆಯ ಪ್ರಕಾರ ಅಧ್ಯಾಯ ೨ರಲ್ಲಿ ಕಾರ್ಮಿಕ ಪರಿವೀಕ್ಷಕರ (ಇನ್‌ಸ್ಪೆಕ್ಟರ್ಸ್) ನೇಮಕ, ಅವರ ಕಾರ್ಯಗಳು ಮತ್ತು ಅಧಿಕಾರಗಳ ಬಗ್ಗೆ ಸ್ಪಷ್ಟತೆಯನ್ನು ನೀಡುತ್ತದೆ. ಭಾರತ ಸರ್ಕಾರದ "೧೯೫೩ರ ಗೆಜೇಟಿಯರ್ ಪ್ರಕಾರ ೧೮೬೦ರ Indian Penal Codeನ ೪೫ನೇ ಸೆಕ್ಷೆನ್‌ಗೆ ಅನುಗುಣವಾಗಿ ಕೇಂದ್ರ ಸರ್ಕಾರವಾಗಲೀ ಅಥವಾ ರಾಜ್ಯ ಸರ್ಕಾರವಾಗಲಿ ತನ್ನ ಆದೀನ ಗಣಿಗಳಲ್ಲಿ ಕಾರ್ಯ ನಿರ್ವಹಿಸುವ ಸಾರ್ವಜನಿಕರ ಸೇವೆಗಾಗಿ ಕಾರ್ಮಿಕ ಪರಿವೀಕ್ಷಕರನ್ನು ನೇಮಿಸುವ ಅಧಿಕಾರವನ್ನು ಹೊಂದಿರುತ್ತದೆ."[೧೬] ಅಂತಹ ಅಧಿಕಾರಿಗಳಿಗೆ ಜಿಲ್ಲಾ ಸತ್ರಾ ನ್ಯಾಯಲಯದ ನ್ಯಾಯಾಧೀಶರಿಗೆ ಇರುವ ಅಧಿಕಾರಗಳನ್ನು ನೀಡಲಾಗಿದೆ. ಅವರು ತಮ್ಮ ವ್ಯಾಪ್ತಿಗೆ ಒಳಪಡುವ ಆಯಾ ವಿಭಾಗಗಳಲ್ಲಿರುವ ವಿವಿಧ ಗಣಿ ಚಟುವಟಿಕೆಯ (ಉತ್ಪಾದನೆ ಹಾಗೂ ವಿತರಣೆ)ಗೆ ಸಂಬಂಧಿಸಿದ ಚಟುವಟಿಕೆಗಳನ್ನು ನಿರ್ಧರಿಸುವ ಮತ್ತು ನಿಯಂತ್ರಿಸುವ ಅದಿಕಾರಗಳನ್ನು ಕೊಡಲಾಗಿದೆ.

### ೫.೪. ಕಾರ್ಮಿಕ ಇನ್‌ಸ್ಪೆಕ್ಟರ್ ಕರ್ತವ್ಯಗಳು

"೧೯೫೦ರ ಗಣಿ ಕಾಯ್ದೆಯ ೬೨ನೇ ಸೆಕ್ಷನ್ ಪ್ರಕಾರ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ನೇಮಕಗೊಂಡ ಕಾರ್ಮಿಕ ಇನ್‌ಸ್ಪೆಕ್ಟರ್‌ರು"[೧೭] ಈ ಕೆಳಗಿನ ಕಾರ್ಯಗಳ್ನು ನಿರ್ವಹಿಸಲು ಹಕ್ಕುದಾರಿಕೆಯನ್ನು ಪಡೆದಿರುತ್ತಾರೆ.

೧. ಭಾರತ ಸರ್ಕಾರ ಜಾರಿಗೊಳಿಸಿದ ಗಣಿ ಕಾಯದೆ ಕಾನೂನುಗಳ ಪ್ರಕಾರ ಉತ್ಪಾದನೆಯನ್ನು ಕೈಗೊಳ್ಳುವ ಗಣಿ ಸಂಸ್ಥೆಗಳು, ಕಾಯ್ದೆ-ಕಾನೂನುಗಳ ಅನುಸಾರ ಕಾರ್ಯವನ್ನು ನಿರ್ವಹಿಸುತ್ತಿವೆಯೋ ಅಥವಾ ಇಲ್ಲವೋ ಎಂಬುದರ ಮೇಲ್ವಿಚಾರಣೆಯನ್ನು ಮಾಡುವುದು.

೨. ಯಾವುದೇ ಗಣಿಸಂಸ್ಥೆಯು ಸರ್ಕಾರದ ಆದೇಶಗಳನ್ನು ಪಾಲಿಸದೇ ಅವುಗಳನ್ನು ಉಲ್ಲಂಘನೆ ಮಾಡಿದ ಪ್ರಕರಣಗಳು ಕಂಡುಬಂದಲ್ಲಿ ಅಂತಹ ಗಣಿಸಂಸ್ಥೆಗಳ ಪರವಾನಿಗೆಯನ್ನು ರದ್ದುಗೊಳಿಸಲು ಶಿಫಾರಸ್ಸು ಮಾಡುವುದು.

೩. ನಿರ್ಧಿಷ್ಟ ಪ್ರದೇಶಗಳಲ್ಲಿ ಬರುವ ಗಣಿಸಂಸ್ಥೆಗಳ ಉತ್ಪಾದನೆ ಹಾಗೂ ವಿತರಣೆಯ ತಂತ್ರಗಳ ಪರಿಶೀಲನೆ ಮತ್ತು ಉಸ್ತುವಾರಿ ಅಧಿಕಾರವನ್ನು ಕೈಗೊಳ್ಳುವುದು.

**ಇನ್ಸ್‌ಪೆಕ್ಟರ್‌ಗಿರುವ ಅಧಿಕಾರಗಳು**

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ನೇಮಿಸಲ್ಪಟ್ಟ ಇನ್ಸ್‌ಪೆಕ್ಟರ್‌ಗಳು ಈ ಕೆಳಗಿನ ಅಧಿಕಾರಗಳನ್ನು ಚಲಾಯಿಸಲು ಬದ್ಧರಾಗಿರುತ್ತಾರೆ.

೧. ಆಯಾ ವಿಭಾಗಗಳ ಗಣಿಗಾರಿಕೆಗೆ ಸಂಬಂಧಿಸಿದಂತೆ ಗಣಿಗಾರಿಕೆಗೆ ಪರವಾನಿಗೆಯನ್ನು ನೀಡುವ, ಅವುಗಳ ಚಟುವಟಿಕೆಗಳನ್ನು ನಿಯಂತ್ರಿಸುವ ಮತ್ತು ಸರ್ಕಾರ ಜಾರಿಗೊಳಿಸದ ಕಾಯ್ದೆ ಕಾನೂನುಗಳನ್ನು ಪಾಲಿಸುವಂತೆ ಕ್ರಮ ಕೈಗೊಳ್ಳುವುದು.

೨. ಭಾರತ ಸರ್ಕಾರದ ಗಣಿ ಕಾಯ್ದೆ-ಕಾನೂನುಗಳನ್ನು ಪಾಲಿಸದ ಗಣಿ ಸಂಸ್ಥೆಗಳಿಗೆ ಶಿಕ್ಷೆ ವಿಧಿಸುವುದು ಮತ್ತು ದಂಡ ವಸೂಲಿ ಮಾಡುವ ಅಧಿಕಾರವನ್ನು ಕೊಡಲಾಗಿದೆ.

೩. "ಗಣಿ ಪ್ರದೇಶಗಳಲ್ಲಿರುವ ಕೆಲಸದ ಸ್ವರೂಪ, ಪರಿಸರ, ಕಾರ್ಮಿಕರ ಕೂಲಿ ವೈದ್ಯಕೀಯ ಸೌಲಭ್ಯ ಮತ್ತು ಕಾರ್ಮಿಕರ ಭದ್ರತೆಯ ಕ್ರಮಗಳನ್ನು ಪರಿಶೀಲಿಸುವುದು."[೧೬]

೪. ಉತ್ಪಾದನೆ ಕೈಗೊಂಡಿರುವ ವಿವಿಧ ಗಣಿ ಸಂಸ್ಥೆಗಳು, ಗಣಿ ಕಾಯ್ದೆ ಕಾನೂನುಗಳನ್ನು ಕಟ್ಟು ನಿಟ್ಟಾಗಿ ಪಾಲಿಸುವಂತೆ ಆದೇಶ ಹೊರಡಿಸುವುದು ಪರಿಶೀಲಿಸುವುದು, ಒಂದು ವೇಳೆ ತಪ್ಪಿದಲ್ಲಿ ಕಾನೂನು ಕ್ರಮವನ್ನು ಜರುಗಿಸುವುದು.

೫. ೧೯೭೩ರ Code of Criminal Procedure ಅನುಸಾರ ಗಣಿಸಂಸ್ಥೆಗಳ ಉತ್ಪಾದನೆಯ ತಂತ್ರಗಳನ್ನು ಪರೀಕ್ಷಿಸುವ, ಪರಿಶೀಲಿಸುವ ಮತ್ತು ನಿಯಂತ್ರಿಸುವ ಅಧಿಕಾರಗಳನ್ನು ಚಲಾಯಿಸುವುದು.

೬. "೧೯೫೭ರ ಗಣಿ ಕಾಯ್ದೆಯ ಸೆಕ್ಷನ್ ೪೨ರ ಪ್ರಕಾರ ವಿವಿಧ ಗಣಿಸಂಸ್ಥೆಗಳ ಉತ್ಪಾದನೆಯ ಪ್ರಮಾಣವನ್ನು ನಿರ್ಧರಿಸುವ ಮತ್ತು ನಿರ್ದೇಶಿಸುವ ಅಧಿಕಾರ."[೧೮]

೭. ಗಣಿಯಲ್ಲಿನ ಕೆಲಸದ ಅವಧಿ, ಸಾಮಾಜಿಕ ಭದ್ರತೆ, ಗಣಿಸಂಸ್ಥೆಗಳ ಸಮೀಕ್ಷೆ ಸಾರಿಗೆ ವ್ಯವಸ್ಥೆ, ಆರೋಗ್ಯ, ಕಾರ್ಮಿಕರ ರಜೆಗಳ ಬಗ್ಗೆ ಕಾನೂನು ರೂಪಿಸುವುದು ಮತ್ತು ಆದೇಶಗಳನ್ನು ಹೊರಡಿಸುವುದು.

೮. ೧೯೫೭ರ ಗಣಿ ಕಾಯ್ದೆಯ ಸೆಕ್ಷನ್ ೪೨ರ ಪ್ರಕಾರ ಗಣಿಯಾಧಾರಿತ ವೃತ್ತಿಯಲ್ಲಿ ಕಡ್ಡಾಯವಾಗಿ ವೈದ್ಯಕೀಯ ಸೇವಾ ಸೌಲಭ್ಯಗಳನ್ನು ಪಾಲಿಸುವಂತೆ ಕ್ರಮ ಕೈಗೊಳ್ಳುವುದು.

೯. ಕಾರ್ಮಿಕರ ಕೂಲಿ, ಭದ್ರತೆ, ಕೆಲಸದ ಸುರಕ್ಷತೆ, ಆರೋಗ್ಯ ಮತ್ತು ಆಡಳಿತ ಮಂಡಳಿಯ ಕಾರ್ಯ ವೈಖರಿಯ ಬಗ್ಗೆ ಗೌಪ್ಯವಾಗಿ ಮಾಹಿತಿಗಳನ್ನು ಸಂಗ್ರಹಿಸುವುದು.

೧೦. ಗಣಿ ಕಾರ್ಯಚಟುವಟಿಕೆಗಳ ಬಗ್ಗೆ ಅಧ್ಯಯನ ಮಾಡಲು ಸತ್ಯ ಶೋಧನಾ ಸಮಿತಿಗಳ ನೇಮಕ ಹಾಗೂ ಕಾರ್ಮಿಕ ಸಂಘಟನೆಗಳಿಗೆ ಪ್ರೋತ್ಸಾಹಿಸುವುದು.

೧೧. ಗಣಿ ಕಾಯ್ದೆ ಕಾನೂನುಗಳ ಬಗ್ಗೆ ಕಾರ್ಮಿಕರಿಗೆ ತರಬೇತಿ, ವಿಶೇಷ ಉಪನ್ಯಾಸ ಹಾಗೂ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

೧೨. ವಿವಿಧ ಗಣಿ ಕಾರ್ಮಿಕರೊಂದಿಗೆ ಪ್ರತಿ ೬ ತಿಂಗಳಿಗೊಮ್ಮೆ ಕಡ್ಡಾಯವಾಗಿ ಸಂಪರ್ಕವನ್ನು ಹೊಂದುವುದು ಅವರ ಸಮಸ್ಯೆಗಳನ್ನು ಕೂಲಕುಂಶವಾಗಿ ಪರಿಶೀಲಿಸಿ ಅವುಗಳ ಪರಿಹಾರಕ್ಕೆ ಪ್ರಯತ್ನಿಸುವುದು.

ಹೀಗೆ ಗಣಿಯಲ್ಲಿ ದುಡಿಯುವ ಕಾರ್ಮಿಕರ ಹಕ್ಕು ಭಾದ್ಯತೆಗಳನ್ನು ರಕ್ಷಿಸಲು ಭಾರತ ಸರ್ಕಾರವು ಗಣಿ ಕಾಯ್ದೆ ಕಾನೂನುಗಳ ಉಸ್ತುವಾರಿಗಾಗಿ ರಾಜ್ಯ, ವಿಭಾಗೀಯ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟಗಳಲ್ಲಿ ಇನ್ಸ್‌ಪೆಕ್ಟರ್‌ಗಳನ್ನು ನೇಮಕ ಮಾಡಿದೆ. ಆ ವಲಯದ ಅಧಿಕಾರಿಗಳು ತಮ್ಮ ಅಧೀನಕ್ಕೊಳಪಡುವ ಪ್ರದೇಶಗಳಲ್ಲಿನ ಗಣಿಗಾರಿಕೆಯ ಚಟುವಟಿಕೆಗಳೊಂದಿಗೆ ನಿರಂತರವಾದ ಸಂಪರ್ಕವನ್ನು ಇಟ್ಟುಕೊಳ್ಳುವುದು ಅತ್ಯವಶ್ಯಕ. ಜೊತೆಗೆ ಪ್ರತಿ ೬ ತಿಂಗಳಿಗೊಮ್ಮೆ ಸಂದರ್ಶನವನ್ನು ಪ್ರತಿಯೊಂದು ಗಣಿಸಂಸ್ಥೆಗಳಿಗೆ ನೀಡಿ ಕಾರ್ಮಿಕರೊಂದಿಗೆ ಚರ್ಚಿಸುವ ಹಾಗೂ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು. ಆಯಾ ಸಂಸ್ಥೆಗಳಲ್ಲಿರುವ ಕಾರ್ಮಿಕರ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಕಂಡುಹಿಡಿಯಲು ಗಣಿ ಮಾಲೀಕರೊಂದಿಗೆ ಚರ್ಚಿಸಿ, ಸೂಕ್ತ ಕ್ರಮಗಳನ್ನು ಕೈಗೊಳ್ಳುವುದು ಅವಶ್ಯಕವಾಗಿದೆ. ಆದರೆ ಜಿಲ್ಲೆಯ ಗಣಿಗಾರಿಕೆಗೆ ಸಂದರ್ಶನವನ್ನು ನೀಡಿರುವ,

ಇನ್ಸ್‌ಪೆಕ್ಟರ್‌ಗಳ ಕಾರ್ಯವೈಖರಿಯ ಬಗ್ಗೆ ಕಾರ್ಮಿಕರೊಂದಿಗೆ ಚರ್ಚಿಸಿದಾಗ ತಿಳಿದು ಬಂದ ಅಂಶವೇನೆಂದರೆ, ಸರ್ಕಾರದಿಂದ ನಿಯೋಜಿತ ಯಾವುದೇ ಅಧಿಕಾರಿಗಳನ್ನು ನೋಡಿರುವುದಾಗಲೀ ಅಥವಾ ಅವರೊಂದಿಗೆ ಚರ್ಚಿಸುವ ಸದಾವಕಾಶಗಳು ಇಲ್ಲಿಯವರೆಗೆ ಒದಗಿಬಂದಿಲ್ಲವೆಂದೂ ಹೇಳುತ್ತಾರೆ. ಹಾಗಾದರೆ ಗಣಿ ಕಾರ್ಮಿಕರ ಹಕ್ಕುಗಳ ಬಗ್ಗೆ ತಿಳಿಸಿಕೊಡುವವರು ಯಾರು ಎಂಬ ಪ್ರಶ್ನೆ ಮೆಲ್ನೋಟಕ್ಕೆ ಸಹಜವಾಗಿ ಮೂಡಿಬರುತ್ತದೆ. ಈ ಹಿನ್ನೆಲೆಯಲ್ಲಿ ಗಣಿ ಕಾರ್ಮಿಕರ ಸಮಸ್ಯೆಗಳನ್ನು ಜಿಲ್ಲೆಯ ಸಂಬಂಧಿತ ಅಧಿಕಾರಿಗಳೊಂದಿಗೆ ಚರ್ಚಿಸಿದಾಗ ಕಂಡುಬಂದು ಅಂಶಗಳೆಂದರೆ

೧. ಜಿಲ್ಲೆಯಲ್ಲಿರುವ ಎಲ್ಲಾ ಗಣಿ ಸಂಸ್ಥೆಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿರುವುದಾಗಿ ಇನ್ಸ್‌ಪೆಕ್ಟರ್‌ಗಳು ಹೇಳುತಾರೆ.

೨. ಗಣಿ ಸಂಸ್ಥೆಗಳಲ್ಲಿ ನಡೆದಿರುವ ಎಲ್ಲಾ ಕಾರ್ಯಯೋಜನೆಗಳ ಬಗ್ಗೆ ತಪಾಸಣೆ, ಪರಿಶೀಲನೆಗಳನ್ನು ಕೈಗೊಳ್ಳಲಾಗಿದೆ.

೩. ಜಿಲ್ಲೆಯ ಗಣಿ ಸಂಸ್ಥೆಗಳಿಗೆ ಚಾಚೂತಪ್ಪದೇ ಸಂದರ್ಶನ ನೀಡಲಾಗುತ್ತಿದೆ.

೪. ಕೆಲಸದ ಒತ್ತಡಗಳಲ್ಲಿ ಕಾರ್ಮಿಕರೊಂದಿಗೆ ಚರ್ಚಿಸುವ ಇಲ್ಲವೇ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಷ್ಟು ಸಮಯವಕಾಶ ಇಲ್ಲದಿರುವುದು.

೫. ತಮ್ಮ ಕರ್ತವ್ಯಗಳಿಗೆ ಹೆಚ್ಚುವರಿಯಾಗಿ ಬೇರೆ, ಬೇರೆ ಕೆಲಸದ ಒತ್ತಡಗಳು ಅಧಿಕವಾಗಿರುವುದು.

೬. ಜಿಲ್ಲೆಯ ಗಣಿ ಕಾರ್ಮಿಕರಿಂದ ಈವರೆಗೆ ಯಾವುದೇ ದೂರುಗಳು ದಾಖಲೆಯ ರೂಪದದಲ್ಲಿ ತಮ್ಮ ಗಮನಕ್ಕೆ ಬಂದಿಲ್ಲವೆಂದೂ ಹೇಳುತ್ತಾರೆ.

೭. ಕಾರ್ಮಿಕರ ಹಕ್ಕು ಬಾಧ್ಯತೆಗಳ ಬಗ್ಗೆ ಜಾಗೃತಿ ಮೂಡಿಸುವ ಕಾರ್ಯಕ್ರಮಗಳು ಕಾರ್ಮಿಕ ಸಂಘಟನೆಗೆ ಹಾಗೂ ಖಾಸಗಿ ಸಂಘ-ಸಂಸ್ಥೆಗಳಿಗೆ ಸೇರಿದ್ದಾಗಿದೆ.

೮. ಕಾರ್ಮಿಕ ಸಂಘಟನೆಗಳ ಸ್ಥಾಪನೆಗಾಗಿ ಪ್ರಯತ್ನಿಸುವುದು. ಅಥವಾ ಸಹಕರಿಸುವುದು.

೯. ಗಣಿಗಾರಿಕೆಯಿಂದ ಉಂಟಾದ ಸಮಸ್ಯೆಗಳು ಪರಿಹಾರಕ್ಕಾಗಿ ಸರ್ಕಾರದ ಗಮನಕ್ಕೆ ತರಲು ಅನೇಕ ಸಾಕ್ಷಾಧಾರಗಳನ್ನು ಗೌಪ್ಯವಾಗಿ ನೀಡಲಾಗುತ್ತಿದೆ ಎಂದೂ ಸರ್ಕಾರಿ ಅಧಿಕಾರಿಗಳು ತಮ್ಮ ಕರ್ತವ್ಯಪ್ರಜ್ಞೆಗೆ ಈ ಮೇಲಿನ ಹೇಳಿಕೆಗಳನ್ನು ಸಾಕ್ಷಿಗಾಗಿ ನೀಡುತ್ತಾರೆ. ಆದರೆ ಜಿಲ್ಲೆಯ ಗಣಿಗಾರಿಕೆಯಲ್ಲಿರುವ ಕಾರ್ಮಿಕರು ನೂರಾರು ಸಮಸ್ಯೆಗಳನ್ನು ಎದುರಿಸುತ್ತಿರುವಾಗ ಅಧಿಕಾರಿಗಳ ಹೇಳಿಕೆಗಳು ಉತ್ಪ್ರೇಕ್ಷೆಗೆ ಒಳಗಾಗುವುದು ಸಹಜ. ಏಕೆಂದರೆ ಒಬ್ಬ ಸರ್ಕಾರಿ

ನಿಯೋಜಿತ ಅಧಿಕಾರಿಗಳಿಗಿರುವ ಅಧಿಕಾರಗಳನ್ನು ತಿಳಿದಾಗ ಕನಿಷ್ಠ ಪಕ್ಷ ಅವುಗಳಲ್ಲಿನ ಶೇಕಡ ೧೦ರಷ್ಟು ಕರ್ತವ್ಯ ಪ್ರಜ್ಞೆಯನ್ನು ಜಿಲ್ಲೆಯಲ್ಲಿ ಕೆಲಸ ಮಾಡುವ ಅಧಿಕಾರಿಗಳು ಮೈಗೂಡಿಸಿಕೊಂಡರೆ ಸಾಕು ಕಾರ್ಮಿಕರ ಬಹಳಷ್ಟು ಸಮಸ್ಯೆಗಳು ಕಡಿಮೆಯಾಗಲು ಸಾಧ್ಯ. ಇಂತಹ ಸಂದರ್ಭದಲ್ಲಿ ಜಿಲ್ಲೆಯ ಗಣಿಸಂಸ್ಥೆಗಳು ನೀಡುವ ವಿಶೇಷ ಕಪ್ಪ ಕಾಣಿಕೆಗಳಿಗೆ ಒಳಗಾಗಿ ತಮ್ಮ ಕರ್ತವ್ಯಗಳನ್ನು ಮರೆತಿರುವ ಅಧಿಕಾರಿಗಳ ನಡುವಳಿಕೆಗಳನ್ನು ಸರ್ಕಾರ ಅಥವಾ ಸಂಬಂಧಿಸಿದ ಇಲಾಖೆಗಳು ಗಂಭೀರವಾಗಿ ಪರಿಗಣಿಸಬೇಕಾಗಿದೆ.

### ೫.೫. ೧೯೬೧ ಮತ್ತು ೧೯೬೩ರ ಮಾತೃತ್ವ ಪರಿಹಾರ ಕಾಯ್ದೆ (Matrenity Benifit Act 1961 & 1963)

ಈ ಮೇಲಿನ ಕಾಯ್ದೆಯ ಪ್ರಕಾರ ಪ್ರತಿಯೊಂದು ಗಣಿಸಂಸ್ಥೆಗಳಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಗೆ ಅವರ ಮಾತೃತ್ವ ಸಮಯದಲ್ಲಿ ನೀಡಬೇಕಾಗಿರುವ ಸೌಲಭ್ಯಗಳ ಬಗ್ಗೆ ವಿಶ್ಲೇಷಿಸಲಾಗಿದೆ ಅವುಗಳಲ್ಲಿ "ಕಾಯ್ದೆ ೪ರ ಪ್ರಕಾರ ಯಾವುದೇ ಗಣಿಯಲ್ಲಿರುವ ಮಹಿಳೆಯ ಹೆರಿಗೆ ಅಥವಾ ಗರ್ಭಸ್ರಾವದ ಸಂದರ್ಭಗಳಲ್ಲಿ ಅವಳಿಂದ ಕನಿಷ್ಠ ೬ ವಾರಗಳ ತನಕ ಯಾವುದೇ ರೀತಿಯ ದೈಹಿಕ ಮತ್ತು ಮಾನಸಿಕ ಕೆಲಸ, ದುಡಿಮೆ ಅಥವಾ ಶ್ರಮವನ್ನು ಪಡೆಯಬಾರದು".[೧೮]

"ಕಾಯ್ದೆ ೫ರ ಪ್ರಕಾರ ಮಾತೃತ್ವ ಪರಿಹಾರ ನಿಧಿಯ ಹಕ್ಕಿನ ಪ್ರಕಾರ ಯಾವುದೇ ಮಹಿಳಾ ಕಾರ್ಮಿಕಳು ಅವಳ ಸರಾಸರಿ ವೇತನಕ್ಕನುಗುಣವಾಗಿ ಅವಳ ಹೆರಿಗೆಯ ಪೂರ್ವ ಹಾಗೂ ನಂತರದ ರಜಾದಿನಗಳಲ್ಲಿ ವೇತನ ಸಹಿತ ಪರಿಹಾರವನ್ನು ಪಡೆದುಕೊಳ್ಳುವ ಹಕ್ಕು ನೀಡಲಾಗಿದೆ".[೧೯]

"ಕಾಯ್ದೆ ೫A ಪ್ರಕಾರ ನಿರಂತರವಾಗಿ ಮಾತೃತ್ವ ಪರಿಹಾರ ಸೌಲಭ್ಯವನ್ನು ಒದಗಿಸಲು ರಾಜ್ಯ ಉದ್ಯೋಗಿಗಳ ವಿಮಾಕಾಯ್ದೆ ೧೯೪೮ (೩೪ ಪುಟ)ರಲ್ಲಿ"[೨೦] ಯಾವುದೇ ಗಣಿಯಲ್ಲಿರುವ ಮಹಿಳೆಯು ಹೆರಿಗೆಯ ಸಂದರ್ಭದಲ್ಲಿ ಅಥವಾ ಹೆಚ್ಚು ಅನಾರೋಗ್ಯಕ್ಕೆ ಒಳಗಾದ ಸಂದರ್ಭದಲ್ಲಿ ಇಲ್ಲವೇ ಅವಳ ಜೀವಕ್ಕೆ ಅಪಾಯವಿರುವುದು ಕಂಡುಬಂದಲ್ಲಿ, ಈಗಾಗಲೇ ಅವಳು ಪರಿಹಾರದ ಹಣವನ್ನು ಪಡೆದುಕೊಂಡಿದ್ದರೂ ಪುನಃ ಅದನ್ನು ಅವಳ ಆರೋಗ್ಯ ಸುಧಾರಿಸುವ ತನಕ ವಿಸ್ತರಿಸಬೇಕೆಂದು ಆದೇಶ ನೀಡಲಾಗಿದೆ".[೨೧]

ಕಾಯ್ದೆ ೯ರ ಪ್ರಕಾರ ಗಣಿಯಲ್ಲಿ ಕೆಲಸ ಮಾಡುವ ಮಹಿಳೆಯು ಆಕಸ್ಮಿಕ ಗರ್ಭಸ್ರಾವಕ್ಕೆ ಈಡಾದರೆ ಅವಳಿಗೆ ಅಂದಿನಿಂದಲೇ '೬' ವಾರಗಳ ತನಕ ರಜೆ ಸಹಿತ ವೇತನವನ್ನು ಕಡ್ಡಾಯವಾಗಿ ನೀಡಬೇಕು.

"ಕಾಯ್ದೆ ೮ರ ಪ್ರಕಾರ ಗಣಿಯಲ್ಲಿರುವ ಪ್ರತಿಯೊಬ್ಬ ಮಹಿಳೆಗೆ ಗಣಿ ಮಾಲೀಕರು ಅವಳ ಮಾತೃತ್ವದ ಆರಂಭಿಕ ದಿನಗಳಿಂದ ಪ್ರತಿ ತಿಂಗಳು ಕನಿಷ್ಠ ೨೫ ರೂ.ಗಳ ವೈದ್ಯಕೀಯ ಬೋನಸ್ ಮಾದರಿಯಲ್ಲಿ ಪರಿಹಾರದ ಹಣವನ್ನು ನೀಡಬೇಕು."[೨೨] ಹಾಗೂ ಅವಳಿಗೆ ಉಚಿತ ವೈದ್ಯಕೀಯ ಸೇವೆಯ ವ್ಯವಸ್ಥೆಯನ್ನು ಕೈಗೊಳ್ಳಬೇಕು.

"ಕಾಯ್ದೆ ೮೩ರ ಪ್ರಕಾರ:- ಪ್ರತಿ ಗಣಿ ಸಂಸ್ಥೆಯಲ್ಲಿ ಕೆಲಸ ಮಾಡುವ ಮಹಿಳೆಯರ ಹೆರಿಗೆಯ ಪೂರ್ವ ೬ ವಾರಗಳು ಹೆರಿಗೆಯ ನಂತರ ೬ ವಾರಗಳ ಮತ್ತು ಸಂಬಳ ಸಹಿತ ರಜಾದಿನಗಳನ್ನು ನೀಡಬೇಕು. ಒಂದು ವೇಳೆ ಮಗು ತೀರಿಕೊಂಡ ಸಮಯದಲ್ಲೂ ಈ ಕಾನೂನು ಅನ್ವಯಿಸುತ್ತದೆ".[೨೩] ಹೀಗೆ ಗಣಿಯಲ್ಲಿರುವ ಪ್ರತಿಯೊಬ್ಬ ಮಹಿಳೆಗೆ

1. Payment of Medical Bonus
2. Payment of Matrenity Benefit in care of death of women
3. Continuance of Payment of matrimity benefit in certain casus
5. Leave for miscarrige
6. Nursing Breares

ಇತ್ಯಾದಿ ಸೌಲಭ್ಯಗಳನ್ನು ಮಹಿಳಾ ಕಾರ್ಮಿಕರಿಗೆ ಪ್ರತಿಯೊಂದು ಗಣಿಸಂಸ್ಥೆಯ ಒದಗಿಸಬೇಕೆಂದು ಆದೇಶಿಸಲಾಗಿದೆ.

ಆದರೆ ಜಿಲ್ಲೆಯ ಗಣಿಗಾರಿಕೆಯಲ್ಲಿ ಮಹಿಳೆಯನ್ನು ಗಣಿಕಾರ್ಮಿಕಳೆಂದು ಪರಿಭಾವಿಸುವಂತಹ ಗಂಭೀರ ಮನಸ್ಥಿತಿಯನ್ನು ಹೊಂದಿಲ್ಲದ ಅನೇಕ ಗಣಿಸಂಸ್ಥೆಗಳು ಹಾಗೂ ವ್ಯವಸ್ಥಾಪಕರನ್ನು ಕಾಣಬಹುದಾಗಿದೆ. ಇಂತಹ ಮನೋಧರ್ಮದಿಂದಾಗಿ ಗಣಿಯಲ್ಲಿ ಮಹಿಳಾ ಕಾರ್ಮಿಕರನ್ನು ಎರಡನೇ ದರ್ಜೆಯ ಪ್ರಜೆಯನ್ನಾಗಿಯೇ ಪರಿಗಣಿಸಲಾಗುತ್ತದೆ. ಹೇಗೆಂದರೆ ಗಣಿಯಲ್ಲಿ ಕೆಲಸ ಮಾಡುವ ಪುರುಷರಿಗೆ ಹೆಚ್ಚು ಕೂಲಿ ಮತ್ತು ಮಹಿಳೆಯರಿಗೆ ಕಡಿಮೆ ಕೂಲಿಯನ್ನು ನೀಡಲಾಗುತ್ತದೆ. ಗಣಿಸಂಸ್ಥೆಗಳಲ್ಲಿ ಪುರುಷ ಕಾರ್ಮಿಕರಿಗೆ ಸಿಗುವ ದುಡಿಮೆ, ಕೂಲಿ, ಗೌರವ, ಮಹಿಳಾ ಕಾರ್ಮಿಕರಿಗೆ ಸಿಗುತ್ತಿಲ್ಲ. ಈ ಮೇಲಿನ ಯಾವುದೇ ಸೌಲಭ್ಯಗಳನ್ನು ಮಹಿಳೆಯು ಪಡೆದುಕೊಂಡ ಉದಾಹರಣೆಗಳು ಜಿಲ್ಲೆಯಲ್ಲಿ ತುಂಬಾ ವಿರಳವೆಂದೇ ಹೇಳಬಹುದು. ಕೆಲವು ಮಹಿಳೆಯರು MML ಹಾಗೂ NMDC ಗಣಿ ಸಂಸ್ಥೆಯಲ್ಲಿ ಈ ಮೇಲಿನ ಸೌಲಭ್ಯಗಳನ್ನು ಪಡೆದುಕೊಂಡಿರುವ ನಿದರ್ಶನಗಳು ದೊರೆಯುತ್ತವೆ.

"Mines Creche Rules- 1966 ಕಾಯ್ದೆಗಳ" ಪ್ರಕಾರ ಪ್ರತಿಯೊಂದು ಗಣಿಸಂಸ್ಥೆಯ ವ್ಯಾಪ್ತಿ ಪ್ರದೇಶದಲ್ಲಿ ಬರುವ ಗಣಿಕಾರ್ಮಿಕರ ಮಕ್ಕಳ ಶಿಕ್ಷಣ, ಆರೋಗ್ಯದ ಪಾಲನೆ, ಪೋಷಣೆ ಮತ್ತು

ಪೌಷ್ಠಿಕತೆಯನ್ನು ಒದಗಿಸುವುದಕ್ಕಾಗಿ ೧೯೬೬ರ ಗಣಿ ಮಕ್ಕಳ ರಕ್ಷಣಾ ನಿಯಮಗಳು ಜಾರಿಗೆ ಬಂದವು. "ಈ ಕಾನೂನಿನ ಪ್ರಕಾರ ಪ್ರತಿಯೊಬ್ಬ ಗಣಿ ಸಂಸ್ಥೆಯ ಮಾಲೀಕರು ತಮ್ಮ ಸಂಸ್ಥೆಗಳಲ್ಲಿ ದೈನಂದಿನ ಕೆಲಸ ಮಾಡುವ ಕಾರ್ಮಿಕರ ಚಿಕ್ಕ ಪುಟ್ಟ ಮಕ್ಕಳಿಗೆ ಕಡ್ಡಾಯವಾಗಿ ಬಾಲ ಗೃಹಗಳನ್ನು ಪ್ರಾರಂಭಿಸಬೇಕು. ಇಂತಹ ಕ್ರಷ್‌ಗಳಲ್ಲಿ ಕಾರ್ಮಿಕರ ಮಕ್ಕಳು ಸುಮಾರು ೬ ವರ್ಷದ ತನಕ ಅವರ ರಕ್ಷಣೆ, ಪೋಷಣೆ ಹಾಗೂ ಬೆಳವಣಿಗೆಗೆ ಪೂರಕವಾಗಿ ಬಾಲಗೃಹಗಳ ಮಾದರಿಯ ಶಾಲೆಗಳನ್ನು ಕಡ್ಡಾಯವಾಗಿ ಆರಂಭಿಸಬೇಕು".[೨೪]

"ಗಣಿಗಳಲ್ಲಿ ಕ್ರಷ್‌ಗಳ ರಚನೆ, ನಿರ್ವಹಣೆ ಮತ್ತು ಕಾರ್ಯಚರಣೆಯ ಬಗ್ಗೆ ಅನೇಕ ಕಾನೂನುಗಳನ್ನು ಮಾಡಲಾಗಿದೆ." ಪ್ರತಿಯೊಂದು ಕ್ರಷ್‌ಗಳಲ್ಲಿ ಮಕ್ಕಳಿಗಾಗಿ ವಿಶೇಷ ಶೌಚಾಲಯದ ವ್ಯವಸ್ಥೆ, ಸ್ನಾನ ಗೃಹದ ವ್ಯವಸ್ಥೆ, ವೈದ್ಯರ ಸೌಲಭ್ಯ, ಉಪಗೃಹದ ಸೌಲಭ್ಯ, ದಾದಿಯರ ಸೌಲಭ್ಯಗಳನ್ನು ಒದಗಿಸಬೇಕು. ಈ ಗೃಹಗಳಲ್ಲಿರುವ ಮಕ್ಕಳ ಮಾನಸಿಕ ಹಾಗೂ ದೈಹಿಕ ಬೆಳವಣಿಗೆಗೆ ಪೂರಕವಾಗಿ ಆಟ ಪಾಠದ ವ್ಯವಸ್ಥೆಯನ್ನು ಕೈಗೊಳ್ಳಬೇಕು. ಇಂತಹ ಅನೇಕ ನಿರ್ಭಂದನೆಗಳನ್ನು ಗಣಿ ಮಕ್ಕಳ ಅಧಿನಿಯಮಗಳು ವಿವರಿಸುತ್ತವೆ.

ಈ ಮೇಲಿನ ಇಂತಹ ವ್ಯವಸ್ಥೆಯು ಭಾರತ ಸರ್ಕಾರದ ಅಧೀನ ಗಣಿ ಉದ್ಯಮ ಸಂಸ್ಥೆಯಾದ NMDC ಯಲ್ಲಿ ಕ್ರಷ್‌ಗಳ ಸೌಕರ್ಯವನ್ನು ಇರುವುದನ್ನು ಕಾಣಬಹುದಾಗಿದೆ. ಜಿಲ್ಲೆಯ ಇನ್ನಾವುದೇ ಗಣಿ ಸಂಸ್ಥೆಯಲ್ಲಿ ನೋಡುವುದು ಅಪರೂಪವೆಂದು ಹೇಳಬಹುದು.

ಮುಖ್ಯವಾಗಿ ಈ ಮೇಲಿನ ಎಲ್ಲಾ ಗಣಿಕಾಯ್ದೆ ಕಾನೂನುಗಳು ಕಾರ್ಮಿಕರ ಹಿತರಕ್ಷಣೆಗೆ ಕಟಿಬದ್ಧವಾಗಿದ್ದರೂ ಸಹ ವಾಸ್ತವಿಕತೆಯಲ್ಲಿ ಏಕೆ ಕಂಡುಬರುತ್ತಿಲ್ಲವೆಂಬುದನ್ನು ಚರ್ಚೆಗೊಳಪಡಿಸಿದಾಗ ನಮಗೆ ಸಹಜವಾಗಿ ಕಾಡುವ ಪ್ರಶ್ನೆಗಳೆಂದರೆ ೧. ಗಣಿ ಮಾಲೀಕರು ಗಣಿಗೆ ಸಂಬಂಧಿಸಿದ ಕಾಯ್ದೆ ಕಾನೂನುಗಳನ್ನು ಪಾಲಿಸುವಂಥ ಮನೋಧರ್ಮವನ್ನು ಹೊಂದಿಲ್ಲ.

೨. ಗಣಿಯಲ್ಲಿರುವ ಶೇಕಡ ೮೦ರಷ್ಟು ಕಾರ್ಮಿಕರು ಅನಕ್ಷರಸ್ಥರಾಗಿದ್ದಾರೆ. ಇನ್ನು ಅಕ್ಷರಸ್ಥರೆಂದೂ ಗುರುತಿಸಿಕೊಳ್ಳುವವರು ಸಹ ಕೇವಲ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಶಿಕ್ಷಣ ಮಾತ್ರ ಹೊಂದಿರುವುದರಿಂದ ಅವರಿಗೆ ಗಣಿಕಾಯಿದೆಗಳ ಬಗ್ಗೆ ಅರಿವು ಅಥವಾ ಪರಿಜ್ಞಾನವಿಲ್ಲದೇ ಇರುವುದರಿಂದ ಗಣಿ ಕಾನೂನುಗಳು ನಿಷ್ಪ್ರಯೋಜಕವಾಗಿವೆ ಎನ್ನಬಹುದು.

೩. ಕಾರ್ಮಿಕರಿಗೆ ಗಣಿ ಕಾನೂನುಗಳ ಬಗ್ಗೆ ತಿಳಿಹೇಳುವ, ಅವುಗಳನ್ನು ಜಾರಿಗೊಳಿಸುವಂತೆ ಮಾಲೀಕರ ಮೇಲೆ ಒತ್ತಡ ಹೇರಲು, ಪ್ರತಿಭಟಿಸಲು, ಸರ್ಕಾರಕ್ಕೆ ದೂರು ಸಲ್ಲಿಸಲು ಜಿಲ್ಲೆಯ ಗಣಿ ಸಂಸ್ಥೆಗಳಲ್ಲಿ ಕಾರ್ಮಿಕ ಸಂಘಟನೆಗಳಿಲ್ಲದೇ ಇರುವುದು.

೪. ಗಣಿ ಕಾನೂನುಗಳ ಪ್ರಕಾರ ಗಣಿಸಂಸ್ಥೆಯು ಕಾರ್ಯನಿರ್ವಹಿಸುತ್ತಿದೆಯೋ ಇಲ್ಲವೋ ಎಂಬುದನ್ನು ಪತ್ತೆಹಚ್ಚುವ ಅಥವಾ ಅವುಗಳನ್ನು ಪಾಲಿಸದಿರುವ ಕಂಪನಿಗಳ ಮೇಲೆ ತಮ್ಮ ಕಾನೂನು ಕ್ರಮ ಕೈಗೊಳ್ಳುವ ಸರ್ಕಾರಿ ಅಧಿಕಾರಿಗಳಲ್ಲಿರುವ ನಿರ್ಲಿಪ್ತತೆಯ ಗುಣ ಇತ್ಯಾದಿಗಳಿಗಾಗಿ.

ಜಿಲ್ಲೆಯಲ್ಲಿ ಗಣಿಕಾರ್ಮಿಕರ ಬಗ್ಗೆ ಅಧ್ಯಯನ ಮಾಡುವ ಅವರ ಹಕ್ಕು ಬಾಧ್ಯತೆಗಳನ್ನು ತಿಳಿಸುವ, ಅವರ ಕಷ್ಟಸುಖಗಳಲ್ಲಿ ಭಾಗಿಯಾಗಿ ಅವರೊಂದಿಗೆ ಬೆರೆತು, ಬೌದ್ಧಿಕ ಪ್ರೌಢಿಮೆಯನ್ನು ಬೆಳೆಸುವಂತಹ ಸಾಮಾಜಿಕ ಕಾರ್ಯಕರ್ತರು ಅಥವಾ ಖಾಸಗಿ ಸಾಮಾಜಿಕ ಸೇವಾ ಸಂಸ್ಥೆಗಳು ಗಣಿಸಂಸ್ಥೆಗಳ ಸಮೀಪವಾಗಲೀ ಇಲ್ಲವೇ ಕಾರ್ಮಿಕರ ವಸತಿಗೃಹಗಳ ಹತ್ತಿರವಾಗಲೀ ಕಾರ್ಯನಿರ್ವಹಿಸುತ್ತಿಲ್ಲ. ಈ ಮೇಲಿನ ಎಲ್ಲಾ ಕಾಯ್ದೆ ಕಾನೂನುಗಳ ಉಲ್ಲಂಘನೆಗೆ ಕಾರಣವೆಂದೂ ಹೇಳಬಹುದು.

ಗಣಿ ಕಾರ್ಮಿಕರ ಸಮಸ್ಯೆಗಳನ್ನು ಕುರಿತು ಚರ್ಚಿಸುವ, ಕಾನೂನಿನ ರಕ್ಷಣೆಗೆ, ಹೋರಾಡುವ, ಕಾರ್ಮಿಕರ ಸಮಸ್ಯೆಗಳಿಗೆ ಸ್ಪಂದಿಸುವ ರಾಜಕೀಯ ಆರ್ಥಿಕ ಮತ್ತು ಸಾಮಾಜಿಕ ಇಚ್ಛಾಸಕ್ತಿಯು ಜಿಲ್ಲೆಯಲ್ಲಿ ಹಿಂದೆ ಬಿದ್ದಿರುವುದರಿಂದ ಗಣಿಕಾರ್ಮಿಕರ ಸಮಸ್ಯೆಗಳು ಹೆಚ್ಚಾಗಲು ಕಾರಣವಾಗಿವೆ.

**ಅಡಿ ಟಿಪ್ಪಣಿಗಳು**

1. Code of Mining Legislation - Sudhesh Kumar, CURRENT LAW publishers-1975- Dhelhi- page 5 and 6
2. subs for the words half a gallon by GSR.no.31, dt.29.12.1960.
3. Code of Mines Legislation - Sudir Kumar- CURRENT LAW, Publishars, 1975, Delhi, P:120
4. Mines rules (Amendment) 1970, vide GSR 1786 dt. 30.9.1970.
5. The mines rules 1955- Published in gezatte of India, part 2nd P. 1172 dt. 2.7.55
6. Ibid., P:1172
7. The mines rules 1955- Published in gezatto of India, part 2nd P. 1172 dt. 2.7.55
8. Published in the Indian gazatte, dt. 13.11.1965. part 2nd, sectoin (3)(1) at, P:3675

9. ಗಣಿ ಸ್ಪರ್ಧೆ ಪರೀಕ್ಷೆಯ ಮಾರ್ಗದರ್ಶಿಕೆ, ಎಸ್.ಕೆ.ಪ್ರಭಾಕರ ಸಂಪಿಗೆ, ಮೈನ್ಸ್ ಸೆಫ್ಟಿ ಅಸೋಶಿಯೆಸನ್ ಕರ್ನಾಟಕ ಬಳ್ಳಾರಿ, ೧೯೮೯, ಪು.೩೦-೩೩

10. Substituted for the rule 62 by rule 17 of the mines rule's 1965 vide GSR 1886 dt. 14.12.1965.

11. Ibid.,

12. Ibid.,

13. Mines Rules 1970- (Amendment) vide GSR 1786 dt. 30.9.70.

14. Ibid.,

15. Indian gaz- 1953, pt.11, 3-3, P:1530.

16. 1983 Rules s-4 (w.e.f. : 13.5.1984), 1983 Rules, Section 42, 5-4, (W.E.F 13-5-84)

17. 1959 Rules, s-5 (w.e.f. : 16.1.1960)., 1959 Rules, Section 62; s-5, (w.e.f.)

18. 1983 42, 1983 Rules, Section 42, 5-6 (w.e.f.) s-6 (w.o.f. : 31.5.1984).

19. Matrernity Benifit (Amendment) ACT 1972-p.28, 1972, 3, 21.

20. Matrernity benifit (Amendment) ACT 1972-p.28, 1972, 3, 21.

21. AIR 1961, Raj 189 : (1961) 2 Cri, L.J. 286.

22. AIR 1954 pat 371 : 1954, Cri. L.J. 834, Reaference may also be made to AIR-1954 : pat : 371 (F.B.) (code of mining legeilation Ammendment Sudir kumar- jain- current law publishers delhi- 1975- page- 540-43.

23 Matrenity Benifit (Amendment) Act-1972, P 29-1972 3-21

24 Mines Creche Rules, 1966, Pp.280

# ಸಮಾರೋಪ

ಜಾಗತೀಕರಣದ ಪರಿಣಾಮದಿಂದಾಗಿ ಉದಾರೀಕರಣ ಹಾಗೂ ಖಾಸಗೀಕರಣದ ಪ್ರಕ್ರಿಯೆಗಳು ಇಡೀ ಆರ್ಥಿಕತೆಯ ಸ್ವರೂಪವನ್ನೇ ಬದಲಾಯಿಸಿದೆ. ಪ್ರತಿಯೊಂದು ಉತ್ಪಾದನಾ ವಲಯವು ಉನ್ನತ ತಂತ್ರಜ್ಞಾನಕ್ಕೆ ಒಳಗಾಗಿ ಈ ಹಿಂದಿನ ಎಲ್ಲಾ ಉತ್ಪಾದನಾ ಸಂಬಂಧಗಳನ್ನು ತಿರುವು ಮುರುವುಗೊಳಿಸಿದೆ. ಯಾವುದೇ ವಸ್ತುವಿನ ಉತ್ಪಾದನೆ ಹಾಗೂ ವಿತರಣೆಯ ಮಧ್ಯೆ ಇರಬೇಕಾದ ಅಂತರವು ಮಾನವೀಯ ಮೌಲ್ಯಗಳಿಂದ ಕೂಡಿರದೇ, ವ್ಯಾಪಾರೀಕರಣದ ನೆಲೆಯಲ್ಲಿ ಉತ್ಪಾದನೆಯ ಪ್ರತಿ ಹಂತದ ಕಾರ್ಯಚಟುವಟಿಕೆಗಳು ನಿರ್ಧಾರಗೊಳ್ಳುತ್ತಿವೆ. ಇಂತಹ ತಾಂತ್ರಿಕ ಸ್ವರೂಪದ ಬೆಳವಣಿಗೆಯು ಕೇವಲ ಉತ್ಪಾದನಾ ಚಟುವಟಿಕೆಗೆ ಸೀಮಿತವಾಗಿರದೆ, ಮಾನವನ ಮಾನಸಿಕ ಹಾಗೂ ಬೌದ್ಧಿಕ ನಡೆ ನುಡಿಗಳ ಮೇಲೆ ಹತ್ತಾರು ಪರಿಣಾಮಗಳನ್ನುಂಟು ಮಾಡಿದೆ. ಇಂತಹ ಕಾರ್ಯಾನುಗುಣ ಸಂಬಂಧವು ನಮ್ಮ ಸುತ್ತಲಿನ ಸಮಾಜದ ಮೇಲೆ ವೈಜ್ಞಾನಿಕ ಹಾಗೂ ತಾಂತ್ರಿಕ ಪರಿಣಾಮವನ್ನುಂಟು ಮಾಡಿದೆ. ಅಲ್ಲದೇ ಜನರ ಹಾಗೂ ಸಮುದಾಯಗಳ ಆಲೋಚನಾ ಕ್ರಮವನ್ನೇ ಬದಲಾಯಿಸಿದೆ. ಅವರ ಪ್ರತಿಯೊಂದು ನಡೆ-ನುಡಿಯಲ್ಲಿ ವೈಜ್ಞಾನಿಕತೆಯ ಯಾವುದಾದರೂ ಕುರುಹುಗಳು ಹಾಸು ಹೊಕ್ಕಾಗಿರುವುದು ಸಹಜವೆಂಬಂತೆ ಕಂಡುಬರುತ್ತಿವೆ. ಇಂತಹ ಅಭಿವೃದ್ಧಿ ಪ್ರಕ್ರಿಯೆ ಸಾರ್ವತ್ರಿಕವಾಗಿರದೆ ಪಾರ್ಶ್ವಮುಖಿಯಾಗಿದ್ದೂ, ಇಡೀ ಸಮಾಜದ ಸರ್ವತೋಮುಖ ಬೆಳವಣಿಗೆಗೆ ಅದು ಪೂರಕವಾಗಿಲ್ಲ. ಹೀಗಾಗಿ ವಾಸ್ತವಿಕತೆಯಲ್ಲಿ ನಿರುದ್ಯೋಗ, ಬಡತನ, ಅನಾರೋಗ್ಯ, ಅಜ್ಞಾನ, ಅಂಧಾನುಕರಣೆ, ಭ್ರಷ್ಟಾಚಾರ, ದಬ್ಬಾಳಿಕೆ ಹಾಗೂ ದೌರ್ಜನ್ಯದ ಸಂಗತಿಗಳು ದಿನೇ ದಿನೇ ವೃದ್ಧಿಗೊಳ್ಳುತ್ತಾ, ಜನ ಸಮುದಾಯಗಳ ಸಾಂಸ್ಕೃತಿಕ ಬದುಕಿನ ಗ್ರಹಿಕೆಯನ್ನೇ ಬದಲಾಯಿಸಿದೆ.

ಪ್ರಸ್ತುತ ಸಮಾಜದಲ್ಲಿ ಭ್ರಷ್ಟಾಚಾರದ ಪ್ರಕರಣಗಳನ್ನಾಗಲೀ ಅಥವಾ ಅನೈತಿಕ ನಡತೆಯಾನ್ನಾಗಲೀ ಇಲ್ಲವೇ ಕೊಲೆ ಸುಲಿಗೆಯಂತಹ ಕ್ರೌರ್ಯಗಳನ್ನು ಜನಸಮುದಾಯಗಳು ಅಪರಾಧವೆಂದು ಪರಿಗಣಿಸುವಂಥ ಆಲೋಚನಾ ಕ್ರಮವನ್ನು ಈಗಾಗಲೇ ಬದಲಾಯಿಸಿಕೊಂಡಿದ್ದಾರೆ. ಅದ್ದರಿಂದಲೇ ಅನೇಕ ದೊಡ್ಡ ದೊಡ್ಡ ಭ್ರಷ್ಟಾಚಾರಗಳಲ್ಲಿ ಭಾಗಿಯಾದ ಹಾಗೂ ನೈತಿಕತೆ ಇಲ್ಲದ ವ್ಯಕ್ತಿಗಳನ್ನು ಗೌರವಿಸುವ ಇಲ್ಲವೆ ಸನ್ಮಾನಿಸುವ ಕಾರ್ಯಕ್ರಮಗಳಿಗೆ ಇಂದು ಸಾಮಾಜಿಕ ಮನ್ನಣೆ ದೊರೆಯುತ್ತಿದೆ. ಯಾವುದೇ

ಬದ್ಧತೆಯಿಲ್ಲದ ವ್ಯಕ್ತಿಗಳ ಸುತ್ತ ಅನೇಕ ಅಧಿಕಾರಗಳು ಹಾಗೂ ಅವಕಾಶಗಳು ಗಿರಕಿ ಹೊಡೆಯುತ್ತಿವೆ. ಶ್ರೀಮಂತಿಕೆ, ಸಂಪತ್ತಿನ ಸಂಗ್ರಹ ಮತ್ತು ಸುಖ ಲೋಲುಪತೆಯಲ್ಲಿ ತೇಲಾಡುತ್ತಿರುವ ವರ್ಗಗಳು ಒಂದು ಕಡೆ ಇದ್ದರೆ, ನಿರುದ್ಯೋಗ, ಬಡತನ, ಅನಾರೋಗ್ಯ ಹಾಗೂ ಅಸಹಾಯಕತೆಯಲ್ಲಿ ತುತ್ತುಕೂಳಿಗಾಗಿ ಮತ್ತು ಕಣ್ಣುಮುಚ್ಚಿ ಮಲಗಲು ಗೇಣು ಜಾಗಕ್ಕಾಗಿ ಪ್ರತಿನಿತ್ಯ ಹಾಗೂ ಪ್ರತಿಗಂಟೆ ಸಂಘರ್ಷವನ್ನು ಮಾಡುತ್ತಾ ಕಾಲ ಕಳೆಯಬೇಕಾಗಿರುವ ಬಹುಜನಸಮುದಾಯಗಳು ಮತ್ತೊಂದು ಕಡೆ ಕಂಡುಬರುತ್ತವೆ.

ಈ ಹಿನ್ನೆಲೆಯಲ್ಲಿ ಒಂದು ಸುವ್ಯವಸ್ಥಿತ ಸ್ವರೂಪವುಳ್ಳ ಮಾನವ ನಿರ್ಮಿತ ಸಮಾಜವು ಸಮಸ್ತ ಜೀವರಾಶಿಗಳ ಸ್ವತ್ತು. ಅದು ಸರ್ವ ಜೀವರಾಶಿಗಳ ದೈನಂದಿನ ನಡತೆಯ ಮೇಲೆ ನಿಯಂತ್ರಣ ಹೊಂದಿರುವಂತೆ, ಪ್ರತಿಯೊಂದು ಜೀವಿಗಳ ಬದುಕಿಗೆ ಆಸರೆಯಾಗುವಂತಿದ್ದರೆ ಮಾತ್ರ ಎಲ್ಲಾ ಜೀವಿಗಳ ಸರ್ವತೋಮುಖ ಬೆಳವಣಿಗೆಯು ಪರಿಪೂರ್ಣಗೊಳ್ಳಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮ ಮಹಾ ಪ್ರಬಂಧದ ಅಧ್ಯಯನಕ್ಕೆ ಸೀಮಿತವಾದ ಕ್ಷೇತ್ರದಲ್ಲಿರುವ ನೈಸರ್ಗಿಕ ಹಾಗೂ ಮಾನವ ನಿರ್ಮಿತ ಸಂಪತ್ತುಗಳನ್ನು ಸಮಾಜದಲ್ಲಿರುವ ಎಲ್ಲಾ ಜನ ಸಮುದಾಯಗಳಲ್ಲಿ ಸಮಾನವಾಗಿ ವಿತರಿಸಲ್ಪಟ್ಟಿದೆಯೇ ಇಲ್ಲವೇ ಎಂಬುದನ್ನು ಅವಲೋಕಿಸಿದಾಗ ಸಂಪತ್ತಿನ ಒಡೆತನದಲ್ಲಿ ಹಾಗೂ ಸಂಪತ್ತಿನ ಹಂಚಿಕೆಯಲ್ಲಿ ಬಹಳಷ್ಟು ಅಸಮಾನತೆಗಳಿರುವುದು ಪ್ರಸ್ತುತ ಅಧ್ಯಯನದಿಂದ ತಿಳಿದು ಬರುತ್ತದೆ.

ಪ್ರಸ್ತುತ ಮಹಾ ಪ್ರಬಂಧವು ಬಳ್ಳಾರಿ ಜಿಲ್ಲಾ ಗಣಿಗಾರಿಕೆಯಲ್ಲಿರುವ ಕಾರ್ಮಿಕರ ಸಮಾಜೋ-ಆರ್ಥಿಕ ಅಧ್ಯಯನ ಎಂಬ ಶೀರ್ಷಿಕೆಯನ್ನು ಹೊಂದಿದ್ದೂ, ಅದು ಇತ್ತೀಚೆಗೆ ಶ್ರೀಮಂತಿಕೆಯ ವಲಯವೆಂದೂ ಗುರುತಿಸಲಾಗುವ ಕಬ್ಬಿಣ ಮತ್ತು ಮ್ಯಾಂಗನೀಜ್ ವಲಯದಲ್ಲಿ ತೊಡಗಿರುವ ಬುಡಕಟ್ಟು ಗಣಿಕಾರ್ಮಿಕ ಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಾನ ಮಾನಗಳನ್ನು ಕೂಲಂಕುಶವಾಗಿ ಅರಿಯಲು ಪ್ರಯತ್ನಿಸಿದೆ. ಇದರೊಂದಿಗೆ ಬುಡಕಟ್ಟು ಗಣಿಕಾರ್ಮಿಕರು ಎದುರಿಸ ಬೇಕಾಗಿರುವ ಸವಾಲುಗಳಾವುವು? ಅವುಗಳ ಸ್ವರೂಪ ಹೇಗಿದೆ? ಮತ್ತು ಅವುಗಳ ನಿವಾರಣೆಗೆ, ಕೈಗೊಳ್ಳಬೇಕಾದ ಪರಿಹಾರೋಪಾಗಳನ್ನು ಕೂಲಂಕುಶವಾಗಿ ಚರ್ಚಿಸಲಾಗಿದೆ.

ಪ್ರಸ್ತಾವನೆಯ ರೂಪದಲ್ಲಿರುವ ನಮ್ಮ ಅಧ್ಯಯನದ ಮೊದಲನೆ ಭಾಗವು ಜಾಗತೀಕರಣದ ಸನ್ನಿವೇಶದಲ್ಲಾದ ಉತ್ಪಾದನೆಯ ಸಂಬಂಧಗಳ ನಿರ್ಧಾರದಲ್ಲಿ ಉತ್ಪಾದನಾಂಗಗಳ ಸ್ಥಾನಮಾನವು ಹೇಗೆ ಸ್ಥಿತ್ಯಂತರಕ್ಕೆ ಒಳಗಾಗಿದೆ ಎಂಬುದನ್ನು ಪರಿಶೀಲಿಸುತ್ತದೆ. ಇದಕ್ಕಾಗಿ ಗಣಿ ಉದ್ಯಮವನ್ನು ಅವಲಂಬಿಸಿರುವ ಕಾರ್ಮಿಕರ ಪರಿಸ್ಥಿತಿ ಹೇಗಿದೆ? ಅವರ ಜೀವನಮಟ್ಟದ ಆಗುಹೋಗುಗಳನ್ನು

ನಿರ್ಧರಿಸುವಲ್ಲಿ ಗಣಿಗಾರಿಕೆ ಹೇಗೆ ಕಾರಣವಾಗಿದೆ? ಎಂಬುದನ್ನು ಪತ್ತೆಹಚ್ಚಲು ಕೆಲವು ಉದ್ದೇಶಗಳನ್ನು ಹೊಂದಿದೆ. ಅವುಗಳ ಚೌಕಟ್ಟಿನ ಅಡಿಯಲ್ಲಿ ಅಧ್ಯಯನ ಕ್ಷೇತ್ರ ಹಾಗೂ ಅಧ್ಯಯನ ವಿಷಯಗಳಲ್ಲಿರುವ ಭಿನ್ನಾಂಶಗಳನ್ನು ಚರ್ಚಿಸುವ ಸಂಕಲ್ಪವನ್ನು ಮಾಡಿದೆ. ಇದರ ಜೊತೆಗೆ ಅಧ್ಯಯನ ವಿಷಯವನ್ನು ಕೂಲಂಕುಶ ವಿಶ್ಲೇಷಣೆಗಾಗಿ ಸರಳ ಮತ್ತು ವ್ಯವಸ್ಥಿತವಾದ ಅಧ್ಯಯನದ ಮಾದರಿಗಳನ್ನು ಅನುಸರಿಸಿ, ಅಧ್ಯಯನದ ವಿಷಯವನ್ನು ಚರ್ಚಿಸಲಾಗಿದೆ. ಇದಕ್ಕಾಗಿ ಒಂದು ನಿರ್ದಿಷ್ಟ ಕ್ಷೇತ್ರ ಹಾಗೂ ವೃತ್ತಿಯನ್ನು ಆಯ್ಕೆ ಮಾಡಲಾಗಿದ್ದು, ಆ ಪ್ರದೇಶವು ನಮ್ಮ ಅಧ್ಯಯನ ಕ್ಷೇತ್ರದ ವ್ಯಾಪ್ತಿಯನ್ನು ಸ್ಪಷ್ಟಪಡಿಸುತ್ತದೆ.

ಅಧ್ಯಯದ ಎರಡನೆಯ ಭಾಗವು ಅಧ್ಯಯನದ ಸರಳತೆಗಾಗಿ ವಿಷಯದ ಮಂಡನೆಯನ್ನು ೩ ಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳಲ್ಲಿ ಮಹಾಪ್ರಬಂಧದ ಸಂಶೋಧನಾ ಕ್ಷೇತ್ರ ಕಾರ್ಯಕ್ಕೆ ಆಯ್ದುಕೊಂಡ ಪ್ರದೇಶದ ಬಗ್ಗೆ ಅದು ಹೊಂದಿರುವ ನೈಸರ್ಗಿಕ, ಮಾನವ ನಿರ್ಮಿತ ಹಾಗೂ ಮಾನವ ಸಂಪನ್ಮೂಲದ ಬಗ್ಗೆ ಸಂಕ್ಷಿಪ್ತವಾದ ವಿವರಗಳನ್ನು ನೀಡಲು ಪ್ರಯತ್ನಿಸಿದೆ. ಜೊತೆಗೆ ರಾಜ್ಯದ ಒಟ್ಟು ಸಂಪನ್ಮೂಲಗಳೊಂದಿಗೆ ಅವುಗಳನ್ನು ತೌಲನಿಕವಾಗಿ ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಇದಕ್ಕಾಗಿ ಜಿಲ್ಲೆ, ರಾಜ್ಯ ಮಟ್ಟಗಳಲ್ಲಿರುವ ವಿವಿಧ ವಲಯಗಳಿಂದ ದೊರೆತ ಅಂಕಿ ಅಂಶಗಳನ್ನು ಬಳ್ಳಾರಿ ಜಿಲ್ಲೆಯ ಅನುಷಾಂಗಿಕ (Secondary Sources) ಮಾಹಿತಿಗಳೊಂದಿಗೆ ಸಮೀಕರಿಸಲಾಗಿದೆ. ಏಕೆಂದರೆ ಬಳ್ಳಾರಿ ಜಿಲ್ಲೆಯು ಕರ್ನಾಟಕದ ಎಲ್ಲಾ ಜಿಲ್ಲೆಗಳಿಗಿಂತ ವ್ಯಾಪಾರ, ವಾಣಿಜ್ಯ, ಕೈಗಾರಿಕೆ, ಕೃಷಿ, ನೀರಾವರಿ, ಶಿಕ್ಷಣ ಮತ್ತು ಬ್ಯಾಂಕಿಂಗ್ ಚಟುವಟಿಕೆಯಲ್ಲಿ ವಿಶಿಷ್ಟವಾದ ಸ್ಥಾನಮಾನಗಳನ್ನು ಹೊಂದಿದೆ. ಆದರೆ ಜಿಲ್ಲೆಯಲ್ಲಿ ನೆಲೆಗೊಂಡಿರುವ ಜನಸಂಖ್ಯೆಗೆ ಹೋಲಿಸಿಕೊಂಡಾಗ ಜಿಲ್ಲೆಯಲ್ಲಿರುವ ಮೂಲಭೂತ ಸೌಕರ್ಯಗಳು ತುಂಬಾ ಕೊರತೆಯಲ್ಲಿರುವುದು ಕಂಡುಬರುತ್ತದೆ. ಇಂತಹ ಮೂಲಸೌಕರ್ಯಗಳು ನಮ್ಮ ಅಧ್ಯಯನಕ್ಕೊಳಪಟ್ಟ ಬುಡಕಟ್ಟು ಗಣಿಕಾರ್ಮಿಕ ಸಮುದಾಯಗಳ ಜೀವನ ಮಟ್ಟವನ್ನು ಸುಧಾರಿಸಲು ಯಾವುದೇ ರೀತಿಯಲ್ಲಿ ಸಹಕಾರಿಯಾಗಿಲ್ಲವೆಂದೂ ಹೇಳಬಹುದು. ಆದರೆ ಅವೆಲ್ಲವುಗಳು ಗಣಿ ಕಾರ್ಮಿಕ ಸಮುದಾಯಗಳ ಕನಿಷ್ಟ ಸೇವಾ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿವೆ. ಎಂಬುದನ್ನು ತಳ್ಳಿಹಾಕುವಂತಿಲ್ಲ ಈ ಹಿನ್ನೆಲೆಯಲ್ಲಿ ಆಲೋಚಿಸುವುದಾದರೆ, ಬಳ್ಳಾರಿ ಜಿಲ್ಲೆಯು ಹೊಂದಿರುವ ನೈಸರ್ಗಿಕ ಹಾಗೂ ಮಾನವ ನಿರ್ಮಿತ ಸೌಕರ್ಯಗಳು ಸಮಸ್ತ ಜಿಲ್ಲೆಗೆ ಹೋಲಿಕೆ ಮಾಡಿದಾಗ ತುಂಬಾ ಕಡಿಮೆಯೆಂದೇ ಹೇಳಬಹುದು. ಏಕೆಂದರೆ ಬೆಳೆಯುತ್ತಿರುವ ಜನಸಂಖ್ಯೆ ಹಾಗೂ ಹೆಚ್ಚುತ್ತಿರುವ ವಲಸಿಗರ ಪ್ರಮಾಣಗಳಿಂದ ಅಧಿಕಗೊಳ್ಳುತ್ತಿರುವ ಜನರ ಬೇಡಿಕೆಗಳನ್ನು ಪೂರೈಸುವ ಸಾಮರ್ಥ್ಯತೆ ಈ ಜಿಲ್ಲೆಗೆ ಇನ್ನು ಹೆಚ್ಚಾಗಬೇಕಾಗಿದೆ. ಜಿಲ್ಲೆಯಲ್ಲಿ ಕಂಡುಬರುವ ವಿವಿಧ ಉತ್ಪಾದನಾ ಚಟುವಟಿಕೆಗಳಿಂದ ರಾಜ್ಯದ ರಾಜಸ್ವಕ್ಕೆ ಬಹಳಷ್ಟು ಕಂದಾಯ ಸಂದಾಯವಾದರೂ, ಈವರೆಗೆ

ಸರ್ಕಾರದಿಂದ ಕೈಗೊಂಡಿರುವ ಅಭಿವೃದ್ಧಿಯ ಕಾರ್ಯಯೋಜನೆಗಳು ತುಂಬಾ ವಿರಳವೆಂದೇ ಹೇಳಬೇಕಾಗುತ್ತದೆ. ಇದಕ್ಕೆ ಜಿಲ್ಲೆಯಲ್ಲಿರುವ ರಸ್ತೆಗಳ ಸ್ವರೂಪ, ಶಿಕ್ಷಣದ ಸೌಕರ್ಯಗಳು, ಉದ್ಯೋಗದ ಸ್ವರೂಪ ಮತ್ತು ಆರೋಗ್ಯದ ಸೌಲಭ್ಯಗಳನ್ನು ಪರಿಶೀಲಿಸಿದರೆ ಜಿಲ್ಲೆಯ ವಾಸ್ತವಿಕ ಸ್ವರೂಪವು ಅರ್ಥವಾಗುತ್ತದೆ. ಈ ಕಾರಣಕ್ಕಾಗಿ ಅಧ್ಯಯನದಿಂದ ಕಂಡುಬಂದ ವಿಶೇಷ ಅಂಶಗಳೆಂದರೆ

- ಜಿಲ್ಲೆಯಲ್ಲಿ ಅವಿರತವಾಗಿ ನಡೆದಿರುವ ಕೈಗಾರಿಕೀಕರಣದಿಂದ ಉದ್ಯೋಗದ ಮೆಲಾಗಿರುವ ವ್ಯತ್ಯಾಸವನ್ನು ನಿಯಂತ್ರಿಸಲು ಹತ್ತಾರು ಬೇರೆ ಬೇರೆ ಯೋಜನೆಗಳನ್ನು ಸರ್ಕಾರ ಜಾರಿಗೊಳಿಸಬೇಕು.
- ನಿರಂತರವಾಗಿ ಹೆಚ್ಚುತ್ತಿರುವ ಜನಸಂಖ್ಯೆಗೆ ಪೂರಕವಾಗಿ ಮೂಲಭೂತ ಸೌಕರ್ಯಗಳನ್ನು ಹೆಚ್ಚಿಸಬೇಕು. ವಿಪರೀತ ಗಣಿಗಾರಿಕೆಯಿಂದ ಉಂಟಾಗಿರುವ ಮಾಲಿನ್ಯದ ನಿರ್ಮೂಲನೆಗೆ ಜಿಲ್ಲಾ ಆಡಳಿತ ವ್ಯವಸ್ಥೆಯು ಅಗತ್ಯ ಕಾರ್ಯಯೋಜನೆಗಳನ್ನು ಕೈಗೊಂಡು ನಿಯಂತ್ರಿಸಲು ಕಠಿಣ ಕ್ರಮಗಳನ್ನು ಅನುಸರಿಸುವುದು ಸೂಕ್ತ.
- ಜಿಲ್ಲೆಯಲ್ಲಿರುವ ಬ್ಯಾಂಕಿಂಗ್ ಸೌಲಭ್ಯಗಳು ಜನಸಂಖ್ಯೆಗೆ ಹೋಲಿಸಿಕೊಂಡರೆ ತುಂಬಾ ಕಡಿಮೆ ಇವೆ. ಇದರಿಂದ ಇವುಗಳ ಸೇವೆ, ಸಹಾಯ ಮತ್ತು ಸಹಕಾರಗಳು ಕೆಲವೇ ವರ್ಗಗಳಿಗೆ ಸೀಮಿತವಾಗಿವೆ. ಹೀಗಾಗಿ ಎಲ್ಲಾ ವರ್ಗಗಳಿಗೆ ಬ್ಯಾಂಕಿಂಗ್ ಸೌಲಭ್ಯ ಸಿಗಲು ಬ್ಯಾಕಿಂಗ್ ಸೇವೆ ವಿಸ್ತಾರಗೊಳ್ಳಬೇಕಾಗಿದೆ. ಬುಡಕಟ್ಟು ಗಣಿಕಾರ್ಮಿಕರಿಗೆ ಸಾಲದ ಸೌಲಭ್ಯಗಳು ಕನಸೆಂದೇ ಹೇಳಬೇಕಾಗಿದೆ.

ಇತ್ತೀಚಿನ ದಿನಗಳಲ್ಲಿ ಬಳ್ಳಾರಿಯ ಐತಿಹಾಸಿಕ ಸ್ಥಳವಾದ ಹಂಪೆ, ತುಂಗಾಭದ್ರ ಮತ್ತು ಕಬ್ಬಿಣ ಮತ್ತು ಮ್ಯಾಂಗನೀಜ್ ಗಣಿಗಾರಿಕೆಗಳಿಂದಾಗಿ ವಿಪರೀತವಾದ ಸಾರಿಗೆ ಸಂಚಾರ, ದಿನೇ ದಿನೇ ಹೆಚ್ಚುತ್ತಿರುವ ವಲಸಿಗರ ಪ್ರಮಾಣ ಹಾಗೂ ಆಮದು ಮತ್ತು ರಫ್ತು ವ್ಯಾಪಾರ ಚಟುವಟಿಕೆಗಳಿಂದ ಈ ಭಾಗದ ಮಾಲಿನ್ಯದ ಪ್ರಮಾಣ ನಿರಂತರವಾಗಿ ಹೆಚ್ಚಾಗುತ್ತದೆ. ಅದರ ನಿಯಂತ್ರಣ ಹಾಗೂ ಜಿಲ್ಲೆಯ ಸರ್ವಾಂಗೀಣ ಅಭಿವೃದ್ಧಿಗೆ ಅಗತ್ಯವಾದ ಕಾರ್ಯಯೋಜನೆಗಳು ಜಿಲ್ಲೆಯಲ್ಲಿ ರೂಪಗೊಳ್ಳವುದು ಸೂಕ್ತ.

ಮಹಾಪ್ರಬಂಧದ ಕೇಂದ್ರಬಿಂದುಗಳಾದ ಬುಡಕಟ್ಟು ಗಣಿಕಾರ್ಮಿಕರು ತಮ್ಮ ಜೀವನಕ್ಕೆ ಪ್ರಮುಖ ಆಧಾರವಾಗಿ ನಂಬಿಕೊಂಡ ಗಣಿಕೈಗಾರಿಕೆಯ ಆರಂಭ ಮತ್ತು ಬೆಳವಣಿಗೆಯ ರೂಪುರೇಷಗಳ ಜೊತೆಗೆ ಕಬ್ಬಿಣ ಹಾಗೂ ಮ್ಯಾಂಗನೀಸ್ ಅದಿರಿನ ಉತ್ಪಾದನೆ ಮತ್ತು ವಿತರಣೆಯ ಚಟುವಟಿಕೆಗಳನ್ನು ಜಾಗತೀಕ ಮಟ್ಟದಲ್ಲಿ ಹೋಲಿಕೆ ಮಾಡಲಾಗಿದೆ, ಇಂತಹ ಕ್ರಮವು ಗಣಿಗಾರಿಕೆಯು ರಾಜ್ಯ, ರಾಷ್ಟ್ರ

ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಜಿಲ್ಲೆಯು ಹೇಗೆ ಸ್ಪರ್ಧೆಗೆ ಇಳಿದಿದೆ ಎಂಬುದನ್ನು ಮನವರಿಕೆ ಮಾಡಿಕೊಡಲು ಸಹಾಯಕವಾಗಬಹುದು. ಅದರಲ್ಲೂ ಮುಖ್ಯವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಕಬ್ಬಿಣ ಹಾಗೂ ಮ್ಯಾಂಗನೀಸ್ ಇನ್ನಿತರ ಖನಿಜ ಸಂಪನ್ಮೂಲಗಳು ಯಾವ, ಯಾವ ಪ್ರದೇಶಗಳಲ್ಲಿ ದೊರೆಯುತ್ತದೆ. ಅಂತಹ ಸಂಪನ್ಮೂಲಗಳಿಂದ ಸರ್ಕಾರಕ್ಕೆ ಬರುವ ಆದಾಯವೆಷ್ಟು? ಅವುಗಳ ಉತ್ಪಾದನೆಯ ಪ್ರಮಾಣವನ್ನು ಪತ್ತೆಹಚ್ಚಲಾಗಿದೆ. ಜೊತೆಗೆ ಜಿಲ್ಲೆಯಲ್ಲಿ ಅತ್ಯಧಿಕ ಪ್ರಮಾಣದಲ್ಲಿ ದೊರೆಯುವ ಕಬ್ಬಿಣ ಹಾಗೂ ಮ್ಯಾಂಗನೀಸ್ ಅದಿರುಗಳ ಉತ್ಪಾದಕ ಸಂಸ್ಥೆಗಳೆಷ್ಟು, ಉತ್ಪಾದಕರ ಹೆಸರು ಹಾಗೂ ಅವುಗಳನ್ನು ಕೊಳ್ಳುವ ಸಂಸ್ಥೆಗಳ ವಿವರಗಳನ್ನು ನೀಡಲಾಗಿದೆ. ಅವೆಲ್ಲವುಗಳನ್ನು ಕೂಲಂಕುಶವಾಗಿ ಪರಿಶೀಲಿಸಿದಾಗ ಕಂಡುಬರುವ ಅಂಶವೇನೆಂದರೆ ಜಾಗತೀಕ ಮಟ್ಟದಲ್ಲಿ ಕಬ್ಬಿಣ ಹಾಗೂ ಮ್ಯಾಂಗನೀಸ್ ಅದಿರುಗಳ ಉತ್ಪಾದನೆ ಪ್ರಮಾಣ ಮುಂದುವರೆದ ರಾಷ್ಟ್ರಗಳಲ್ಲಿ ಕಡಿಮೆಯಾಗಿದೆ. ಆದರೆ ಅಭಿವೃದ್ಧಿ ಹೊಂದುತ್ತಿರುವ ಭಾರತದಲ್ಲಿ ಮಾತ್ರ ನಿರಂತರವಾಗಿ ಹೆಚ್ಚುತ್ತಾ ಸಾಗಿರುವುದನ್ನು ಕಾಣಬಹುದು.

ಇನ್ನೂ ಕರ್ನಾಟಕ ರಾಜ್ಯಾದ್ಯಾಂತ ಇತರ ಪ್ರದೇಶಗಳಲ್ಲಿ ನಡೆಯುತ್ತಿರುವ ಗಣಿ ಸಂಪನ್ಮೂಲದ ಉತ್ಪಾದನೆಯ ಪ್ರಮಾಣವು ಬಳ್ಳಾರಿ ಜಿಲ್ಲೆಯಲ್ಲಿ ತುಂಬಾ ಹೆಚ್ಚಾಗಿರುತ್ತದೆ. ಅದರಲ್ಲೂ ಜಿಲ್ಲೆಯ ಸಂಡೂರು ತಾಲ್ಲೂಕು ಪ್ರಥಮಸ್ಥಾನದಲ್ಲಿ ಕಂಡುಬಂದರೆ ಹೊಸಪೇಟೆ ಹಾಗೂ ಬಳ್ಳಾರಿ ತಾಲ್ಲೂಕುಗಳು ನಂತರದ ಸ್ಥಾನಗಳನ್ನು ಪಡೆದುಕೊಂಡಿರುವುದನ್ನು ಗಮನಿಸಬಹುದು.

ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕಾರ್ಮಿಕರ ಜೀವನಮಟ್ಟ, ಕೂಲಿಯದರ, ದುಡಿಮೆಯ ಸ್ವರೂಪವನ್ನೊಳಗೊಂಡಂತೆ ರಾಜ್ಯ, ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟಗಳಲ್ಲಿ ಕಾರ್ಮಿಕರ ಯೋಗಕ್ಷೇಮಕ್ಕೆ ಸಂಬಂಧಿಸಿದಂತೆ ಜರುಗಿದ ವಿವಿಧ ಸಂಶೋಧಕರ ಅಧ್ಯಯನಗಳನ್ನು ಪರಿಶೀಲಿಸುವ ಮೂಲಕ ನಮ್ಮ ಮಹಾ ಪ್ರಬಂಧದ ಅಧ್ಯಯನದ ಕೇಂದ್ರಬಿಂದುಗಳಾದ ಬುಡಕಟ್ಟು ಗಣಿಕಾರ್ಮಿಕರ ಬಗ್ಗೆ ನಡೆದಿರುವ ವಿವಿಧ ಅಧ್ಯಯನಗಳನ್ನು ವಿಶೇಷವಾಗಿ ಪರಿಗಣಿಸಲಾಗಿದೆ.

ಜಿಲ್ಲೆಯ ಗಣಿಗಾರಿಕೆಯಲ್ಲಿ ತೊಡಗಿರುವ ಬುಡಕಟ್ಟು ಸಮುದಾಯಗಳ ಸಾಮಾಜಿಕ ಹಾಗೂ ಆರ್ಥಿಕ ಸ್ಥಾನಮಾನಗಳನ್ನು ಕ್ಷೇತ್ರಕಾರ್ಯದಲ್ಲಿ ದೊರೆತ ಅಂಕಿ ಅಂಶಗಳ ಆಧಾರದ ಮೇಲೆ ಕಂಡುಹಿಡಿಯಲಾಗಿದೆ. ಆರಂಭದಲ್ಲಿ ಬುಡಕಟ್ಟು ಸಮುದಾಯಗಳ ಹುಟ್ಟು, ಸಂಪ್ರದಾಯ ಹಾಗೂ ಸಂಸ್ಕೃತಿಗಳ ಬೆಳವಣಿಗೆಯ ಬಗ್ಗೆ ವಿವೇಚಿಸಿಲ್ಲ. ಏಕೆಂದರೆ ಅವುಗಳ ಬಗ್ಗೆ ಸಮಾಜ ಶಾಸ್ತ್ರೀಯ ಅಧ್ಯಯನಗಳು ಕೂಲಂಕುಶವಾಗಿ ಪರಿಶೀಲಿಸುವ ಸಾಧ್ಯತೆ ಹೆಚ್ಚಾಗಿ ಇರುವುದರಿಂದ. ಕೇವಲ ಆರ್ಥಿಕ ದೃಷ್ಟಿಕೋನದ ಹಿನ್ನಲೆಯಲ್ಲಿ ಬುಡಕಟ್ಟು ಗಣಿಕಾರ್ಮಿಕರ ಸಾಮಾಜಿಕ ಅಂಶಗಳನ್ನು ಸಂಕ್ಷಿಪ್ತವಾಗಿ

ಚರ್ಚಿಸಲಾಗಿದೆ. ಜಿಲ್ಲೆಯ ಬುಡಕಟ್ಟು ಗಣಿಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗಳ ಕುರಿತು ಸುದೀರ್ಘ ಚರ್ಚೆಗೆ ಒಳಪಡಿಸಲಾಗಿದ್ದು, ಅವುಗಳ ನಿಯಂತ್ರಣಕ್ಕೆ ಸರ್ಕಾರ, ಸಂಘ-ಸಂಸ್ಥೆಗಳ ಕಾರ್ಯವೈಖರಿಯನ್ನು ಚರ್ಚಿಸಲಾಗಿದೆ. ಗಣಿ ವೃತ್ತಿಗೆ ಸಂಬಂಧಿಸಿದಂತೆ ಸರ್ಕಾರ ಜಾರಿಗೊಳಿಸಿರುವ ಕಾಯ್ದೆ ಕಾನೂನುಗಳ ಬಗ್ಗೆ ಚರ್ಚಿಸುವ ಮೂಲಕ, ಗಣಿ ಸಂಸ್ಥೆಗಳಲ್ಲಿರುವ ವಾಸ್ತವಿಕ ಪರಿಸ್ಥಿತಿಗಳೊಂದಿಗೆ ಪರಸ್ಪರ ತುಲನೆ ಮಾಡಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ಕಾರ್ಮಿಕರ ಅತ್ಯಗತ್ಯ ಅವಶ್ಯಕತೆಗಳಾದ ಕುಡಿಯುವ ನೀರು, ಉಪಹಾರ ಗೃಹ, ಆರೋಗ್ಯದ ಸೌಕರ್ಯಗಳು, ಸಾರಿಗೆ ವ್ಯವಸ್ಥೆ ಮತ್ತು ಕಾರ್ಮಿಕರ ಕೂಲಿ, ಇತ್ಯಾದಿ ಅಂಶಗಳನ್ನು ಸಂಕ್ಷಿಪ್ತವಾಗಿ ಪರಾಮರ್ಶಿಸಲಾಗಿದೆ.

**೬.೧. ಫಲಿತಗಳು**

ಮಹಾಪ್ರಬಂಧದ ಅಧ್ಯಯನದ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಬುಡಕಟ್ಟು ಗಣಿಕಾರ್ಮಿಕರ ವಿವಿಧ ಆಯಾಮಗಳನ್ನು ಪರಿಶೀಲಿಸಿದಾಗ ಕಂಡುಬಂದ ಫಲಿತಗಳ ವಿವರಗಳು ಈ ಕೆಳಗಿನಂತಿವೆ.

- ಬುಡಕಟ್ಟು ಗಣಿಕಾರ್ಮಿಕ ಕುಟುಂಬಗಳಲ್ಲಿ ಕೂಡುಕುಟುಂಬಗಳಿಗಿಂತಲೂ ಹೆಚ್ಚಾಗಿ ವ್ಯಕ್ತಿಗತ ಚಿಕ್ಕ ಚಿಕ್ಕ ಕುಟುಂಬಗಳ ಸ್ವರೂಪದಲ್ಲಿ ಕಂಡುಬರುತ್ತದೆ.
- ಅವರ ಕುಟುಂಬಗಳಲ್ಲಿನ ಸದಸ್ಯರ ಪ್ರಮಾಣ ಅಧಿಕವಾಗಿರುವುದರಿಂದ, ಅವರ ಕುಟುಂಬವನ್ನು ಬಡತನ, ಅನಾರೋಗ್ಯ, ಅನಕ್ಷರತೆ ಮತ್ತು ನಿರುದ್ಯೋಗಗಳು ಸಹಜವಾಗಿ ಕಾಡುತ್ತಿವೆ.
- ಈಗಾಗಲೇ ದೇಶ ವಿದೇಶಗಳಲ್ಲಿ ಬಹುಚರ್ಚಿತ ವಿಷಯವಾದ ಲಿಂಗಾನುಪಾತದ ಪ್ರಮಾಣವು ಬುಡಕಟ್ಟು ಸಮುದಾಯಗಳಲ್ಲಿಯು ಕಂಡುಬರುತ್ತಿದ್ದು, ಅದರ ಸರಾಸರಿ ಪ್ರಮಾಣ ೯೮೮ ಆಗಿರುತ್ತದೆ.
- ಕುಟುಂಬದ ನಿರ್ವಹಣೆಗೆ ದುಡಿಮೆಯು ಗಂಡಿನಷ್ಟೇ ಹೆಣ್ಣನ್ನು ಸಮಾನವಾಗಿ ಅವಲಂಬಿಸಿದೆ.
- ಬುಡಕಟ್ಟು ಗಣಿ ಕುಟುಂಬಗಳಲ್ಲಿ ಕಡಿಮೆ ಪ್ರಮಾಣದ ಕುಟುಂಬ ಯೋಜನೆಯ ಫಲಾನುಭವಿಗಳಿದ್ದಾರೆ.
- ಬುಡಕಟ್ಟು ಗಣಿಕಾರ್ಮಿಕರಲ್ಲಿ ಆಧುನಿಕತೆಯ ಬಗ್ಗೆ ಪ್ರಶಂಸೆ ಹಾಗೂ ಮೆಚ್ಚುಗೆ ವ್ಯಕ್ತವಾದರೂ, ತಮ್ಮ ವೃತ್ತಿಯಲ್ಲಿನ ಅಸ್ಥಿರತೆಯಿಂದ ಅವರ ಅಂತರಾಳದಲ್ಲಿ ಜಾಗತೀಕರಣದ ಬಗ್ಗೆ ಆತಂಕ, ಭಯ ಆವರಿಸಿದೆ.
- ಗಣಿ ಕಾರ್ಮಿಕರಲ್ಲಿ ಕೇವಲ ಶೇಕಡ ೨೯.೫೮ರಷ್ಟು ಮಾತ್ರ ಸರಾಸರಿ ಶಿಕ್ಷಣದ ಪ್ರಮಾಣವು

ಕಂಡುಬರುತ್ತದೆ. ಅವರಲ್ಲಿ ಬುಡಕಟ್ಟು ಪುರುಷ ಗಣಿ ಕಾರ್ಮಿಕರಿಗಿಂತ ಮಹಿಳೆಯರ ಸಾಕ್ಷರತೆಯ ಪ್ರಮಾಣ ಕೇವಲ ಶೇಕಡ ೧೦ರಷ್ಟು ಇರುತ್ತದೆ.

- ಜಿಲ್ಲೆಯ ಗಣಿ ಕಾರ್ಮಿಕರು ನೆಲೆಸಿರುವ ಪ್ರದೇಶಗಳಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಸೌಲಭ್ಯಗಳು ತುಂಬಾ ವಿರಳವಾಗಿವೆ.
- ಕಾರ್ಮಿಕರಲ್ಲಿ ಸಾಕ್ಷರತೆಯ ಬಗ್ಗೆ ತುಂಬಾ ಆಸಕ್ತಿ ಇದೆ. ಜೊತೆಗೆ ತಮ್ಮ ಇಂದಿನ ಅತಂತ್ರ ಬದುಕಿಗೆ ಅನಕ್ಷರತೆಯೇ ಕಾರಣವೆಂಬುದನ್ನು ಅರಿತಿದ್ದಾರೆ.
- ಕೆಲವು ಬುಡಕಟ್ಟು ಗಣಿ ಕಾರ್ಮಿಕರಲ್ಲಿ ತಮ್ಮ ಮಕ್ಕಳ ಇಂದಿನ ಶಿಕ್ಷಣಕ್ಕೆ ಅವಶ್ಯಕವಾದ ಹಣಕಾಸಿನ ಸಂಪನ್ಮೂಲಗಳ ಬಗ್ಗೆ ಆತಂಕವಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.
- ಗಣಿಕಾರ್ಮಿಕರ ಯುವಕ-ಯುವತಿಯರು ತಮ್ಮ ಮಧ್ಯಂತರ ಶಿಕ್ಷಣದ ಸ್ಥಗಿತಕ್ಕೆ ತಮ್ಮ ಕುಟುಂಬಗಳ ಬಡತನ, ಕಲಹ, ಆರ್ಥಿಕ ಸಂಪನ್ಮೂಲಗಳ ಕೊರತೆಯೇ ಕಾರಣವೆಂಬುದನ್ನು ಅರಿತಿದ್ದಾರೆ.
- ಬುಡಕಟ್ಟು ಸಮುದಾಯಗಳಿಗೆ ಸರ್ಕಾರದ ಜಾರಿಗೊಳಿಸಿರುವ ವಿಶೇಷ ಶಿಕ್ಷಣದ ಸೌಲಭ್ಯಗಳ ಬಗ್ಗೆ ಸರಿಯಾದ ಮಾಹಿತಿ ಇರುವುದಿಲ್ಲ.
- ಶುದ್ಧವಾದ ಕುಡಿಯುವ ನೀರು, ಬಡತನ, ಅಪೌಷ್ಠಿಕ ಆಹಾರ, ಮಾಲಿನ್ಯದೊಂದಿಗೆ ದಿನನಿತ್ಯದ ಕೆಲಸದಿಂದಾಗಿ ತಾಯಿ ಹಾಗೂ ಮಗುವಿನ ಮರಣ ಹಾಗೂ ಗರ್ಭಪಾತದ ಪ್ರಕರಣಗಳು ಹೆಚ್ಚಾಗಿವೆ.
- ಗಣಿಕ್ಯಾಂಪಿನಲ್ಲಿರುವ ಸ್ತ್ರೀಯರ ಹೆರಿಗೆಯ ಸಮಯದಲ್ಲಿ ಅಗತ್ಯವಾದ ವೈದ್ಯಕೀಯ ಸೌಕರ್ಯಗಳ ಕೊರತೆಯಿದೆ. ಹೆರಿಗೆಯ ಸಮಯದಲ್ಲಿ ಸ್ತ್ರೀಯರನ್ನು ಆಸ್ಪತ್ರೆಗಳಿಗೆ ಕರೆದೊಯ್ಯಲು ಗಣಿಸಂಸ್ಥೆಯು ಕಡ್ಡಾಯವಾಗಿ ಯಾವುದೇ ವೈದ್ಯಕೀಯ ವಾಹನದ ಸೌಕರ್ಯವನ್ನು ನಿಗದಿಪಡಿಸಿಲ್ಲ.
- ಕುಟುಂಬದಲ್ಲಿನ ಮಕ್ಕಳ ಹುಟ್ಟು ಹಾಗೂ ತಾಯಿಯ ಮರಣದ ಪ್ರಕರಣಗಳು ದೈವಿಚ್ಛೆಯೆಂಬ ನಂಬಿಕೆ ಕೆಲವು ಕಾರ್ಮಿಕರಲ್ಲಿದೆ.
- ಮಹಿಳೆಯ ಹೆರಿಗೆಯ ಸಮಯಕ್ಕೆ ಅವಳ ಆರೋಗ್ಯ ಮತ್ತು ಆರೈಕೆಗಾಗಿ ಪ್ರೋತ್ಸಾಹಕ ಹಣವನ್ನು ಪಾವತಿಸುವ ಗಣಿಸಂಸ್ಥೆಗಳು ತುಂಬಾ ವಿರಳವಾಗಿವೆ.
- ಗಣಿ ಕಾರ್ಮಿಕಳ ಹೆರಿಗೆಯ ಕಾರ್ಯವನ್ನು ಹೆಚ್ಚಾಗಿ ಗಣಿ ಕ್ಯಾಂಪುಗಳಲ್ಲಿರುವ ಹಿರಿಯ ಮಹಿಳೆಯರೇ ಸೂಲಗಿತ್ತಿಯ ಕಾರ್ಯವನ್ನು ಮಾಡುತ್ತಾರೆ.

- ಹಿರಿಯ ತಲೆಮಾರಿನ ಕಾರ್ಮಿಕರು ಮಾತ್ರ ದೇವರು, ದೆವ್ವ, ಕರ್ಮ, ಮೂಢನಂಬಿಕೆಗಳ ಬಗ್ಗೆ ವಿಶ್ವಾಸವನ್ನು ಹೊಂದಿದ್ದರೂ, ಅವುಗಳು ಇತ್ತೀಚಿನ ದಿನಗಳಲ್ಲಿ ಸಾಮರ್ಥ್ಯವನ್ನು ಕಳೆದುಕೊಂಡಿವೆ ಎನ್ನುವ ಪರಿಜ್ಞಾನ ಹೊಂದಿದ್ದಾರೆ.
- ಬುಡಕಟ್ಟು ಯುವ ಜನಾಂಗದಲ್ಲಿ ತಮ್ಮ ಹಿರಿಯರ ಹಿಂದಿನ ಸಂಪ್ರದಾಯಗಳ ಬಗ್ಗೆಯಾಗಲೀ ಅವುಗಳ ಮೇಲೆ ನಂಬಿಕೆಯಾಗಲಿ ಇಲ್ಲವೇ ಅವುಗಳ ಅನುಕರಣೆಯ ಬಗ್ಗೆ ಯುವ ಪೀಳಿಗೆಯಲ್ಲಿ ವಿಶ್ವಾಸವಿಲ್ಲ.
- ಕುಟುಂಬಗಳಲ್ಲಿ ಜರುಗುವ ಸಾವು-ನೋವುಗಳಿಗೆ ತಮ್ಮ ಆರ್ಥಿಕ, ಸಾಮಾಜಿಕ ಹಾಗೂ ಭೌಗೋಳಿಕ ಕಾರಣಗಳನ್ನು ಅನ್ವಯಿಸಿ ನೋಡುವ ಮನಸ್ಥಿತಿಯನ್ನು ಬೆಳೆಸಿಕೊಂಡಿದ್ದಾರೆ.
- ಕೆಲವು ಬುಡಕಟ್ಟು ಕುಟುಂಬಗಳು ವರ್ಷಕ್ಕೊಮ್ಮೆ ತಮ್ಮ ಕುಲದೇವರ ಮತ್ತು ಹಿರಿಯರ ಹಬ್ಬ, ಉತ್ಸವಗಳನ್ನು ಆಚರಿಸುವ ಮೂಲಕ ಸಂತೃಪ್ತಿಯನ್ನು ಹೊಂದುತ್ತಾರೆ.
- ಗಣಿಕಾರ್ಮಿಕರಿಗೆ ವಾರದಲ್ಲಿ ಸರಾಸರಿ ೫ ದಿನಗಳವರೆಗೆ ಮಾತ್ರ ಕೆಲಸ ದೊರೆಯುತ್ತದೆ. ಗಣಿಕಾರ್ಮಿಕರ ದುಡಿಮೆಗೆ ಅವಶ್ಯಕವಾದ ಭದ್ರತೆಯ ಸೌಕರ್ಯಗಳಿರುವುದಿಲ್ಲ.
- ಮಹಿಳೆಯರು ತಮ್ಮ ಅತಂತ್ರ ದುಡಿಮೆಯಿಂದಾಗಿ ಕುಟುಂಬದ ರಕ್ಷಣೆ ಹಾಗೂ ಪಾಲನೆಗಾಗಿ ಅನೈತಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತೆ, ಅವರ ವೃತ್ತಿ ಜೀವನದ ವಾತಾವರಣವು ಪ್ರೇರೇಪಿಸುತ್ತಿದೆ.
- ಅತಂತ್ರ ದುಡಿಮೆಯ ಅಭಾವದಿಂದಾಗಿ ಬುಡಕಟ್ಟು ಗಣಿ ಕಾರ್ಮಿಕರಲ್ಲಿ ನಿರುದ್ಯೋಗ ಹಾಗೂ ಬಡತನಗಳು ಹೆಚ್ಚಾಗಿವೆ.
- ದುಡಿಮೆಯ ಸ್ಥಾನಮಾನ ಹಾಗೂ ಸ್ವರೂಪ ಹಾಗೂ ಕೂಲಿ ವಿತರಣೆಯಲ್ಲಿ ಪುರುಷ ಮತ್ತು ಮಹಿಳಾ ಕಾರ್ಮಿಕರಲ್ಲಿ ಬೇರೆ, ಬೇರೆಯಾಗಿದೆ.
- ಮಹಿಳೆಯು ತನ್ನ ದೈನಂದಿನ ದುಡಿಮೆಯಲ್ಲಿ ಲೈಂಗಿಕ ದೌರ್ಜನಕ್ಕೆ ಬಲಿಯಾಗುವ ಸಾಧ್ಯತೆಗಳು ಹೆಚ್ಚಾಗಿವೆ.
- ಮಹಿಳೆಯ ದುಡಿಮೆಯು ಹೆಚ್ಚಾಗಿ ಕುಟುಂಬದ ನಿರ್ವಹಣೆಗೆ ವೆಚ್ಚವಾದರೆ, ಪುರುಷನ ದುಡಿಮೆಯು ಹೆಚ್ಚಾಗಿ ಅವನ ವೈಯಕ್ತಿಕ ಖರ್ಚುಗಳಿಗೆ ವೆಚ್ಚವಾಗುತ್ತದೆ.
- ಕಾರ್ಮಿಕ ಕುಟುಂಬವು ಹೆಚ್ಚಾಗಿ ಮಹಿಳಾ ದುಡಿಮೆಯನ್ನೇ ಅವಲಂಬಿಸಿದೆ.

- ಗಣಿ ಕಾರ್ಮಿಕರು ಪಡೆಯುವ ಕೂಲಿಯ ಪ್ರಮಾಣವು ಕನಿಷ್ಠ ಕೂಲಿ ನಿಯಮಕ್ಕಿಂತ ತುಂಬಾ ಕಡಿಮೆ ಇದೆ.
- ಗಣಿ ಕಾರ್ಮಿಕರ ಕೂಲಿ ನಿರ್ಧಾರದಲ್ಲಿ ಯಾವುದೇ ನಿರ್ಧಿಷ್ಠವಾದ ಮಾನದಂಡಗಳ ಬಳಕೆ ಇಲ್ಲವಾಗಿದೆ.
- ಗಣಿಕಾರ್ಮಿಕರ ಕೂಲಿ ನಿರ್ಧಾರಕ್ಕೆ ಸಂಬಂಧಿಸಿದಂತೆ ಆಯಾ ಕೆಲಸ, ಸಮಯ ಹಾಗೂ ಸಂದರ್ಭಕ್ಕನ್ನುಗುಣವಾಗಿ ಕಾರ್ಮಿಕರ ಕೂಲಿಯು ಬದಲಾಗುತ್ತದೆ.
- ಗಣಿ ಸಂಸ್ಥೆಯ ಮಾಲೀಕ ಹಾಗೂ ವ್ಯವಸ್ಥಾಪಕರ ಹಿತಾಸಕ್ತಿಗನುಗುಣವಾಗಿ ಕಾರ್ಮಿಕರ ಕೂಲಿಯು ನಿರ್ಧಾರವಾಗುತ್ತದೆ.
- ಗಣಿಸಂಸ್ಥೆಯು ನೀಡುವ ಕೂಲಿಯು ಕಾಂಟ್ರಾಕ್ಟರ್ ಮೂಲಕ ಕಾರ್ಮಿಕರಿಗೆ ಸಂದಾಯವಾಗುತ್ತದೆ. ಇದರಿಂದಾಗಿ ಸರ್ಕಾರದ ಕೂಲಿ ನೀತಿಗೆ ಸಂಬಂಧಿಸಿದ ನೀತಿ ನಿಯಮಗಳು ಗಣಿ ಸಂಸ್ಥೆಗಳಲ್ಲಿ ತಮ್ಮ ಅರ್ಥವನ್ನು ಕಳೆದುಕೊಂಡಿವೆ.
- ಕಡಿಮೆ ಕೂಲಿ ಹಾಗೂ ಅತಂತ್ರ ದುಡಿಮೆಯಿಂದ ಗಣಿಕಾರ್ಮಿಕರ ಆದಾಯವು ನಿಶ್ಚಿತ ಹಾಗೂ ನಿರಂತರವಾಗಿ ಕಂಡುಬರುವುದಿಲ್ಲ. ಹೀಗಾಗಿ ಅತ್ಯಂತ ಕಡಿಮೆ ಆದಾಯದಲ್ಲಿ ಕಾರ್ಮಿಕರು ತಮ್ಮ ಜೀವನವನ್ನು ರೂಪಿಸಿಕೊಳ್ಳಬೇಕಾಗಿದೆ.
- ಪುರುಷ ಗಣಿಕಾರ್ಮಿಕನಿಗೆ ತನ್ನ ಆದಾಯದಲ್ಲಿ ವೆಚ್ಚಮಾಡುವ ಅಧಿಕಾರ ಹೆಚ್ಚಾಗಿದ್ದರೆ, ಮಹಿಳಾ ಕಾರ್ಮಿಕರಿಗೆ ಇಂಥ ಅವಕಾಶಗಳು ಕಡಿಮೆಯಾಗಿವೆ. ಪುರುಷ ಕಾರ್ಮಿಕನ ವೆಚ್ಚ ವ್ಯಕ್ತಿಗತವಾಗಿದ್ದರೆ, ಮಹಿಳಾ ಕಾರ್ಮಿಕಳ ವೆಚ್ಚ ಕುಟುಂಬಕ್ಕೆ ಅನ್ವಯಿಸುತ್ತದೆ.
- ಆದಾಯ ಮತ್ತು ವೆಚ್ಚವು ಬೇರೆ, ಬೇರೆಯಾಗಿ ಕಂಡುಬಂದರೂ ಕಾರ್ಮಿಕರ ಆದಾಯವು ಅವರ ವೆಚ್ಚವನ್ನು ನಿರ್ಧರಿಸುತ್ತದೆ. ಹಾಗೆಯೇ ಕುಟುಂಬದ ವೆಚ್ಚವು ಕುಟುಂಬದಲ್ಲಿರುವ ಎಲ್ಲಾ ಸದಸ್ಯರ ದುಡಿಮೆಯ ಅರ್ಹತೆಯನ್ನು ನಿರ್ಧರಿಸುತ್ತದೆ.
- ಗಣಿಯಲ್ಲಿರುವ ಬಹುಸಂಖ್ಯಾತ ವಲಸಿಗರ ಮಾತೃಭಾಷೆ ತೆಲುಗು ಭಾಷೆಯಾಗಿದೆ.
- ಬಹಳಷ್ಟು ವಲಸೆ ಕಾರ್ಮಿಕರಿಗೆ ಸ್ಥಿರ ಹಾಗೂ ಚರ ಸ್ವರೂಪಗಳಲ್ಲಿ ಯಾವುದೇ ನಿಶ್ಚಿತವಾದ ಆದಾಯದ ಮೂಲಗಳು ವಿರಳವಾಗಿದೆ.
- ಈ ಭಾಗದಲ್ಲಿ ಕಾರ್ಮಿಕ ಸಂಘಟನೆಯು ವಿಫಲವಾಗಲು ಗಣಿಗಾರಿಕೆಯಲ್ಲಿರುವ ಹೆಚ್ಚು ವಲಸಿಗರ ಪ್ರಮಾಣವು ಒಂದು ಕಾರಣವಾಗಿ ಕಂಡುಬರುತ್ತದೆ.

- ಗಣಿ ಕಾರ್ಮಿಕರಲ್ಲಿರುವ ವಲಸೆಯ ಪ್ರವೃತ್ತಿಯಿಂದಾಗಿ ಸ್ಥಳೀಯ ಸಂಘಸಂಸ್ಥೆಗಳಾಗಲೀ ಅಥವಾ ರಾಜಕೀಯ ಹಿತಾಸಕ್ತಿಗಳಾಗಲೀ ಕಾರ್ಮಿಕರನ್ನು ಗಂಭೀರವಾಗಿ ಪರಿಗಣಿಸಿಲ್ಲ.
- ಸ್ಥಳೀಯರೊಂದಿಗೆ ಬೆರೆತು, ಅವರ ಭಾಷೆ, ಸಂಸ್ಕೃತಿಗಳನ್ನು ರೂಡಿಸಿಕೊಳ್ಳುವ ಮೂಲಕ ಈ ಭಾಗದಲ್ಲಿ ರಕ್ತ ಸಂಬಂಧಗಳನ್ನು ಹೊಂದಿದ್ದಾರೆ.
- ಸಾಮಾಜಿಕವಾಗಿ ದೊಡ್ಡ ರೋಗವೆಂದು ಕರೆಯಲ್ಪಡುವ ಏಡ್ಸ್ ರೋಗವು ಜಿಲ್ಲೆಯಲ್ಲಿ ಪ್ರತಿವರ್ಷವೂ ಹೆಚ್ಚಾಗಲು ಕಾರ್ಮಿಕರಲ್ಲಿರುವ ವಲಸೆಯ ಪ್ರವೃತ್ತಿಯು ಒಂದು ಕಾರಣವಾಗಿದೆ. ಎಂದು ನಂಬಲಾಗಿದೆ.
- ಶೇಕಡ ಅಂಕ್ಕಿಂತಲೂ ಹೆಚ್ಚೂ ಗಣಿಕಾರ್ಮಿಕರಿಗೆ ಯಾವುದೇ ರೀತಿಯ ವ್ಯವಸ್ಥಿತವಾದ ವಸತಿಯ ಸೌಕರ್ಯವಿರುವುದಿಲ್ಲ.
- ಕಾರ್ಮಿಕರ ವಸತಿಗಳೆಲ್ಲವೂ ಹೆಚ್ಚಾಗಿ ರಸ್ತೆಯ ಇಕ್ಕೆಲಗಳಲ್ಲಿ ಅಥವಾ ಗಣಿ ಸಂಸ್ಥೆಯು ಉತ್ಪದನಾ ಯಂತ್ರಾಗಾರದ ಸಮೀಪವೇ ಕೇಂದ್ರೀಕೃತಗೊಂಡಿವೆ.
- ಕಾರ್ಮಿಕರ ವಸತಿಗಳ ಸುತ್ತಮುತ್ತ ಶೌಚಾಲಯವಾಗಲೀ ಅಥವಾ ಕುಡಿಯುವ ನೀರಿನ ವ್ಯವಸ್ಥೆಯಾಗಲೀ ಪರಿಪೂರ್ಣವಾಗಿಲ್ಲ.
- ಗಣಿಕಾರ್ಮಿಕರ ವಸತಿಗಳು ಹೆಚ್ಚಾಗಿ ಒಪ್ಪಂದದ ಆಧಾರದ ಮೇಲೆ ಇರುವಂತಹವುಗಳಾಗಿವೆ. ಅವುಗಳ ರಚನೆ ಹಾಗೂ ಒಡೆತನ ಗಣಿ ಸಂಸ್ಥೆಗೆ ಸೇರಿರುತ್ತದೆ.
- ಕಾರ್ಮಿಕರ ಗುಡಿಸಲುಗಳಲ್ಲಿ ಶಾಶ್ವತ ವಿದ್ಯುಚ್ಛಕ್ತಿಯಾಗಲೀ ಅಥವಾ ಪ್ರತ್ಯೇಕ ಕೋಣೆಗಳ ವ್ಯವಸ್ಥೆ ಇರುವುದಿಲ್ಲ.
- ಕಾರ್ಮಿಕರ ವಸತಿಗಳೆಲ್ಲವೂ ಹೆಚ್ಚಾಗಿ ತಗಡು, ಬಿದುರಿನ ತಟ್ಟಿಗಳಿಂದ ಇಲ್ಲವೇ ಹುಲ್ಲಿನಿಂದ ತಯಾರಿಸಿದವುಗಳಾಗಿವೆ.
- ಕಾರ್ಮಿಕರ ವಸತಿಯಲ್ಲಿ ಗಾಳಿ, ಮಳೆ, ಧೂಳಿಗೆ ಮುಕ್ತ ಅವಕಾಶ ಇರುವುದರಿಂದ ಅವರ ಹಾಸಿಗೆ, ಊಟ, ಕಾರ್ಮಿಕರ ಉಡುಪು, ಗೋಡೆಯ ಚಹರೆಗಳೆಲ್ಲವೂ ಕೆಂಪು ಬಣ್ಣಗಳಿಂದ ಕೂಡಿದೆ.
- ಕಾರ್ಮಿಕರಿಗೆ ಖಾಯಂ ವಸತಿಯಿಲ್ಲದ್ದರಿಂದ ಅವರಿಗೆ ಮತಾಧಿಕಾರದ ಹಕ್ಕು, ಆಸ್ತಿಯ ಹಕ್ಕು ಮತ್ತು ಇನ್ನಿತರ ಸೌಲಭ್ಯಗಳಿಗಾಗಿ ಸ್ಥಳೀಯ ಆಡಳಿತವನ್ನು ಒತ್ತಾಯಿಸುವ ಹಕ್ಕುಗಳನ್ನು ಕಳೆದುಕೊಂಡಿದ್ದಾರೆ.

- ಕಾರ್ಮಿಕ ಸಂಘಟನೆಗಳ ಹಿನ್ನೆಡೆಗೆ ಖಾಯಂ ವಸತಿಯ ಕೊರತೆಯು ಒಂದಾಗಿದೆ.
- ಗಣಿ ಕಾರ್ಮಿಕ ವಾಸಸ್ಥಳದ ಸುತ್ತಸುತ್ತ ಶಿಕ್ಷಣಕ್ಕೆ ಸಂಬಂಧಿಸಿದ ಸೌಕರ್ಯಗಳು ತುಂಬಾ ಕಡಿಮೆ ಇವೆ.
- ಸಂಡೂರು ತಾಲ್ಲೂಕಿನ ದೇವಗಿರಿ ಮತ್ತು ದೋಣಿಮಲೈಗಳನ್ನು ಹೊರತುಪಡಿಸಿ ಗಣಿ ಮಾಲೀಕರು ಕಾರ್ಮಿಕರಿಗಾಗಿ, ಅವರ ಮಕ್ಕಳಿಗಾಗಿ ಎಲ್ಲಿಯೂ ಶಿಕ್ಷಣಸಂಸ್ಥೆಗಳನ್ನು ಪ್ರಾರಂಭಿಸಿಲ್ಲ.
- ಗಣಿ ಸಂಸ್ಥೆಗಳು ಕಾರ್ಮಿಕರ ಮಕ್ಕಳಿಗಾಗಿ ಶಾಲಾಶುಲ್ಕ, ಬಟ್ಟೆ, ಪುಸ್ತಕಗಳನ್ನು ಪ್ರೋತ್ಸಾಹಕವಾಗಿ ಕೊಡುತ್ತಿರುವುದು ತುಂಬಾ ಕಡಿಮೆಯೆಂದೇ ಹೇಳಬಹುದು. ಇತ್ತೀಚಿನ ದಿನಗಳಲ್ಲಿ ರಾಜಕೀಯ ಅಧಿಕಾರವನ್ನು ಪಡೆದುಕೊಂಡ ಕೆಲವು ಗಣಿ ಮಾಲೀಕರು ಪ್ರಚಾರಕ್ಕಾಗಿ ವಿದ್ಯಾರ್ಥಿಗಳಿಗೆ ಶಾಲಾಶುಲ್ಕವನ್ನು ತುಂಬುವುದು, ಪುಸ್ತಕಗಳನ್ನು ಪೂರೈಸುತ್ತಿರುವುದು ಕಂಡುಬಂದರೂ ವಿಶೇಷವಾಗಿ ಕಾರ್ಮಿಕ ಕುಟುಂಬಗಳಿಗೆ ಕಡ್ಡಾಯವಾಗಿ ದೊರೆಯುತ್ತಿಲ್ಲ.
- ಶಿಕ್ಷಣಕ್ಕೆ ಪ್ರೋತ್ಸಾಹಿಸಲು ಕಾರ್ಮಿಕರ ಮಕ್ಕಳಿಗಾಗಿ ಶಾಲಾ-ಕಾಲೇಜ್‌ಗಳಿಗೆ ಹೊತ್ತೊಯ್ಯಲು ಗಣಸಂಸ್ಥೆಗಳ ವಾಹನದ ಸೌಕರ್ಯವು ತುಂಬಾ ಕಡಿಮೆ.
- ಗಣಿಯಲ್ಲಿ ದುಡಿಯುವ ಕಾರ್ಮಿಕರ ಮಕ್ಕಳ ಪಾಲನೆ ಹಾಗೂ ಪೋಷಣೆಗಾಗಿ ಕ್ರಷ್‌ಗಳಾಗಲೀ, ಬಾಲಮಂದಿರಗಳನ್ನು ಗಣಿಗಳಲ್ಲಿ ಕಾಣುವುದು ಅಸಾಧ್ಯವಾಗಿದೆ.
- ಗಣಿ ಸಂಸ್ಥೆಯ ವ್ಯವಸ್ಥಾಪಕ ವರ್ಗ ಅಥವಾ ಮಾಲೀಕ ವರ್ಗಗಳ ಮನೋಭಾವನೆಯು ಶಿಕ್ಷಣದ ಸೌಲಭ್ಯಗಳಿಗೆ ಪೂರಕವಾಗಿಲ್ಲ.
- ಗಣಿ ಕಾರ್ಮಿಕರಲ್ಲಿರುವ ಅನಕ್ಷರತೆಯಿಂದಾಗಿ ಜಿಲ್ಲೆಯಲ್ಲಿ ಕಾರ್ಮಿಕ ಸಂಘಟನೆಯ ರಚನೆ, ಬೆಳವಣಿಗೆ ಹಾಗೂ ಮಹತ್ವದ ಬಗ್ಗೆ ಹಿನ್ನೆಡೆ ಉಂಟಾಗಿದೆ.
- ಗಣಿಕಾರ್ಮಿಕರಿಗೆ ನಿಶ್ಚಿತ ಹಾಗೂ ನಿರಂತರವಾದ ದುಡಿಮೆಯ ಸಮಸ್ಯೆ ಕಾರ್ಮಿಕರನ್ನು ಬೃಹದಾಕಾರವಾಗಿ ಕಾಡುತ್ತಿದೆ.
- ಕಾರ್ಮಿಕರ ಶ್ರಮಕ್ಕೆ ತಕ್ಕಂತೆ ಕೂಲಿಯು ದೊರೆಯುತ್ತಿಲ್ಲ ಹಾಗೂ ಅಭದ್ರತೆ ಕಾಡುತ್ತಿದೆ.
- ಕಾರ್ಮಿಕರ ದುಡಿಮೆಯ ಸಂದರ್ಭಗಳಲ್ಲಿ ಗಣಿಗಳಲ್ಲಿ ಕಂಡುಬರುವ ಅಪಘಾತ ಪ್ರಕರಣಗಳು ಸಹಜ ಹಾಗೂ ಸಾಮಾನ್ಯವಾಗಿವೆಂಬುದಾಗಿ ಪರಿಗಣಿಸಲಾಗುತ್ತದೆ.
- ಗಣಿಕಾರ್ಮಿಕರ ದೈನಂದಿಕ ದುಡಿಮೆಗೆ ನಿರ್ದಿಷ್ಟವಾದ ಸಮಯದ ಗಣನೆಯಾಗಲೀ, ದುಡಿಮೆಯಾಗಲೀ ಅಥವಾ ಕೂಲಿಯಾಗಲೀ ಕಾಣುವುದು ಅಸಾಧ್ಯ.

- ಗಣಿ ಸಂಸ್ಥೆಯ ವ್ಯವಸ್ಥಾಪಕ ವರ್ಗವು ಕಾರ್ಮಿಕರ ಯೋಗಕ್ಷೇಮಕ್ಕಿಂತಲೂ ಹೆಚ್ಚಾಗಿ ಲಾಭವನ್ನೇ ನಿರೀಕ್ಷಿಸುವ ಮನೋಭಾವ ಉಳ್ಳವರಾಗಿದ್ದಾರೆ.
- ದುಡಿಮೆಯ ಅತಂತ್ರತೆ ಬಡತನ ಹಾಗೂ ನಿರುದ್ಯೋಗಗಳಿಂದಾಗಿ ಕಾರ್ಮಿಕರ ಕುಟುಂಬದ ಶೈಕ್ಷಣಿಕ ಮಟ್ಟ ತುಂಬಾ ಕೆಳಮಟ್ಟದಲ್ಲಿದೆ.
- ದುಡಿಮೆಯಿಂದ ಆದಾಯ, ಆದಾಯದಿಂದ ಆರೋಗ್ಯ ನಿರ್ಧಾರಗೊಳ್ಳುವುದರಿಂದ ಇಡೀ ಕಾರ್ಮಿಕ ವರ್ಗ ನಿರುದ್ಯೋಗ ಹಾಗೂ ಬಡತನದಿಂದ ಅನಾರೋಗ್ಯಕ್ಕೆ ಒಳಗಾಗಿದೆ.
- ಕಾರ್ಮಿಕರ ದುಡಿಮೆಗೆ ಸಂಬಂಧಿಸಿದಂತೆ ಜಿಲ್ಲೆಯಲ್ಲಿರುವ ಗಣಿ ಮಾಲೀಕರಿಂದ ಈವರೆಗೂ ಯಾವುದೇ ನಿರ್ದಿಷ್ಟವಾದ ಯೋಜನೆಗಳು ಜಾರಿಯಾಗಿಲ್ಲ.
- ಗಣಿಗಾರಿಕೆಯಲ್ಲಿ ಉನ್ನತ ತಂತ್ರಜ್ಞಾನದ ಬಳಕೆ ಅವ್ಯಾಹತವಾಗಿ ಕೈಗೊಳ್ಳಲಾಗಿದೆ.
- ಜಿಲ್ಲೆಯಲ್ಲಿರುವ ಎಲ್ಲಾ ಗಣಿ ಮಾಲೀಕರು ಸಂಘಟನೆಯ ರೂಪ-ರೇಷಗಳನ್ನು ವಿರೋಧಿಸುವವರಾಗಿದ್ದಾರೆ.
- ಗಣಿಗಾರಿಕೆಯಲ್ಲಿ ಹೆಚ್ಚಾಗಿ ಕೆಳಜಾತಿಯ ಜನರು ಹೆಚ್ಚಾಗಿರುವುದರಿಂದ ಅವರ ಜೀವನಕ್ಕೆ ಪರ್ಯಾಯ ವೃತ್ತಿ ಹಾಗೂ ಉದ್ಯೋಗಗಳ ಕೊರತೆ ನಿರಂತರವಾಗಿ ಕಾಡುತ್ತಿದೆ.
- ಸಂಘಟನೆಯ ಬಗ್ಗೆ ಒಳ್ಳೆಯ ಅಭಿಮಾನ, ಗೌರವ ಹಾಗೂ ಸದಾಭಿರುಚಿಯ ಪ್ರಜ್ಞೆ ಪ್ರತಿಯೊಬ್ಬ ಗಣಿ ಕಾರ್ಮಿಕರಲ್ಲಿ ಕಾಣಬಹುದು.
- ಕಾರ್ಮಿಕರ ಅತಂತ್ರ ದುಡಿಮೆ, ಕಡಿಮೆ ಆದಾಯ, ಶಿಕ್ಷಣದ ಕೊರತೆ ಹಾಗೂ ಮಾಲೀಕರ ವಿರೋಧಿತನ ನೀತಿಯು ಸಂಘಟನಾ ಪ್ರಕ್ರಿಯೆಗೆ ದೊಡ್ಡ ಅಡಚಣೆಯಾಗಿದೆ.
- ಈ ಭಾಗದಲ್ಲಿ ಸಂಘಟನೆಯ ಬಗ್ಗೆ ಶಿಕ್ಷಣ ನೀಡುವ ಹಾಗೂ ಕಾರ್ಮಿಕರಲ್ಲಿ ಜಾಗೃತಿ ಮೂಡಿಸುವ ಸಾಮಾಜಿಕ ನಿಯೋಗಗಳು ತುಂಬಾ ಕಡಿಮೆ ಸಂಖ್ಯೆಯಲ್ಲಿವೆ.
- ಸಂಘಟನೆಯ ಬಲವರ್ಧನೆಗೆ ಕಾರ್ಮಿಕರಲ್ಲಿರುವ ವಲಸೆಯ ಪ್ರವೃತ್ತಿಯು ದೊಡ್ಡ ಕಂಟಕವಾಗಿ ಪರಿಣಮಿಸಿದೆ.
- ಕಾರ್ಮಿಕರಲ್ಲಿನ ಅನಕ್ಷರತೆಯು ಸಂಘಟನೆಗೆ ದೊಡ್ಡ ತೊಡಕಾಗಿದೆ.
- ಜಿಲ್ಲೆಯ ಕೆಲವೇ ಗಣಿ ಪ್ರದೇಶಗಳಲ್ಲಿ ಕೆಲವು ಕಾರ್ಮಿಕ ಸಂಘಟನೆಯು ಅಸ್ತಿತ್ವಕ್ಕೆ ಬಂದಿವೆ.

- ಗಣಿಗಾರಿಕೆಯಲ್ಲಿ ಯಂತ್ರಗಳ ಬಳಕೆ ಹೆಚ್ಚುತ್ತಿರುವುದರಿಂದ ಕಾರ್ಮಿಕರ ಬಳಕೆ ಕಡಿಮೆಯಾಗಿ ಸಂಘಟನೆ ಎಂಬುದು ಮರೀಚಿಕೆಯಾಗುತ್ತಿದೆ.
- ಬಹು ಸಂಖ್ಯಾತ ಗಣಿ ಕಾರ್ಮಿಕರು ತೆಲುಗು ಮೂಲದವರಾಗಿದ್ದಾರೆ.
- ಗಣಿ ಸಂಸ್ಥೆಯ ಆಡಳಿತ ವ್ಯವಹಾರವೆಲ್ಲವೂ ಇಂಗ್ಲೀಷ್ ಭಾಷೆಯಿಂದ ಕೂಡಿದೆ.
- ಜಿಲ್ಲೆಯ ಗಣಿಯಲ್ಲಿ ಬಹುಭಾಷಿಗರಿಗೆ ಉದ್ಯೋಗವಕಾಶಗಳು ಹೆಚ್ಚು ಇರುತ್ತವೆ.
- ಅಧಿಕಾರ ಹಾಗೂ ಅಂತಸ್ತುಗಳ ಮಾನದಂಡವಾಗಿ ಭಾಷೆಯು ಪ್ರಮುಖವೆನಿಸುತ್ತದೆ.
- ಕಾರ್ಮಿಕರಲ್ಲಿನ ಭಾಷೆಗೆ ಸಂಬಂಧಿಸಿದಂತೆ ಅಕ್ಷರ ಜ್ಞಾನ ಕಡಿಮೆ ಎಂದೇ ಹೇಳಬಹುದು.
- ಗಣಿ ಸಂಸ್ಥೆಯ ವ್ಯವಸ್ಥಾಪಕ ಹಾಗೂ ಮಾಲೀಕರಲ್ಲಿ ಇಂಗ್ಲೀಷ್ ಹಾಗೂ ಹಿಂದಿ ಭಾಷೆಯು ಪ್ರಧಾನವಾಗಿ ಕಂಡುಬರುತ್ತದೆ.

- ಕಾರ್ಮಿಕರ ಕೂಲಿ, ದುಡಿಮೆ, ಆಹಾರ, ವಸತಿ ಇತ್ಯಾದಿಗಳು ಅವರ ಆರೋಗ್ಯವನ್ನು ಪ್ರತಿನಿಧಿಸುತ್ತವೆ.
- ಈ ಭಾಗದ ಸರ್ಕಾರಿ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಗಣಿಕಾರ್ಮಿಕರ ಆರೋಗ್ಯದ ಪಾಲನೆ ಪೋಷಣೆಯಲ್ಲಿ ತುಂಬಾ ನಿರಾಸಕ್ತಿಯನ್ನು ಹೊಂದಿವೆ.
- ಗಣಿಯಲ್ಲಿನ ಕಾರ್ಮಿಕರಿಗೆ ಆರೋಗ್ಯದ ಬಗ್ಗೆ ತಿಳುವಳಿಕೆ ಹಾಗೂ ಸಂರಕ್ಷಣೆಯ ಸಾಧನಗಳು ತುಂಬಾ ವಿರಳವಾಗಿವೆ.
- ಗಣಿಯಲ್ಲಿ ಹೆಚ್ಚಾಗಿ ಕ್ಷಯ, ಅಸ್ತಮ, ಕ್ಯಾನ್ಸರ್ ಮತ್ತು ಹೃದಯ ಸಂಬಂಧಿ ಕಾಯಿಲೆಗಳು ಸಹಜವೆಂಬಂತೆ ಕಂಡುಬರುತ್ತವೆ.
- ಅರಣ್ಯದ ನಾಶ ಮತ್ತು ಯಂತ್ರೋಪಕರಣಗಳ ಆರ್ಭಟವು ಸಮಾಜ ಹಾಗೂ ಕಾರ್ಮಿಕರ ಆರೋಗ್ಯದ ಮೇಲೆ ತುಂಬಾ ಪರಿಣಾಮವನ್ನುಂಟು ಮಾಡಿದೆ.
- ಗಣಿಯಲ್ಲಿ ದೊರೆಯುವ ಶೇಕಡ ೬೦ಕ್ಕಿಂತಲೂ ಹೆಚ್ಚು ಕುಡಿಯುವ ನೀರಿನ ಪೂರೈಕೆಯು ಅಶುದ್ಧವಾಗಿರುತ್ತದೆ.
- ಜಿಲ್ಲೆಯ ಯಾವುದೇ ಗಣಿಸಂಸ್ಥೆಯಲ್ಲಿ ಕಾರ್ಮಿಕರಿಗಾಗಿ ಕಟ್ಟಲ್ಪಟ್ಟಿರುವ ವಿಶ್ರಾಂತಿ ಗೃಹಗಳು ತುಂಬಾ ಅಪರೂಪವೆಂದೇ ಹೇಳಬಹುದು.

- ಗಣಿ ಸಂಸ್ಥೆಗಳಲ್ಲಿ ಪ್ರಥಮ ಚಿಕಿತ್ಸೆ ಸೌಲಭ್ಯಗಳು ಹೆಸರಿಗೆ ಮಾತ್ರ ಕಂಡುಬರುತ್ತದೆ.
- ಗಣಿ ಕಾರ್ಮಿಕರ ವಸತಿ ಪ್ರದೇಶದ ಸುತ್ತಮುತ್ತ ಆರೋಗ್ಯದ ಸೌಕರ್ಯಗಳನ್ನು ಯಾವುದೇ ಸ್ವರೂಪದಲ್ಲಿ ಕಾಣುವುದು ಅಸಾಧ್ಯ.
- ಕಾರ್ಮಿಕರ ಆರೋಗ್ಯದ ಪರೀಕ್ಷೆಗಾಗಿ ಅಥವಾ ಅನಾರೋಗ್ಯದ ಚಿಕಿತ್ಸೆಗಾಗಿ ಗಣಿಸಂಸ್ಥೆಗಳು ಕೈಗೊಂಡಿರುವ ಪರಿಹಾರದ ಕ್ರಮಗಳು ಅತೀ ವಿರಳವಾಗಿವೆ.
- ವ್ಯವಸ್ಥಿತವಾದ ಸಾರಿಗೆ ಹಾಗೂ ಉಪಹಾರ ಗೃಹಗಳ ಸೌಲಭ್ಯಗಳನ್ನು ಗಣಿ ಸಂಸ್ಥೆಗಳಲ್ಲಿ ಕಾಣುವುದು ಅಪರೂಪವಾಗಿದೆ.
- ಜಿಲ್ಲೆಯಲ್ಲಿರುವ ಅಧಿಕೃತ ಗಣಿ ವೈದ್ಯಕೀಯ ಸೇವಾ ಸಂಸ್ಥೆಗಳು ಗಣಿ ಕಾರ್ಮಿಕರ ಆರೋಗ್ಯಕ್ಕೆ ಸಂಬಂಧಿಸಿದಂತೆ ನಿರ್ಲಕ್ಷತೆಯ ಭಾವನೆಯನ್ನು ತಳೆದಿವೆ.
- ಜಿಲ್ಲೆಯ ಗಣಿ ಉದ್ಯಮದ ಬೆಳವಣಿಗೆಯೊಂದಿಗೆ ಸುತ್ತಲಿನ ಸಮಾಜವು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗಿದೆ.
- ಜಿಲ್ಲೆಯ ಗಣಿಸಂಸ್ಥೆಗಳಲ್ಲಿ ಮಾತ್ರ ಕಾರ್ಮಿಕರಿಗಾಗಿ ಶೌಚಾಲಯದ ಸೌಲಭ್ಯವನ್ನು ಕಾಣುವುದು ಅಪರೂಪವಾಗಿದೆ.
- ಕಾರ್ಮಿಕರಿಗೆ ತಮ್ಮ ದೈನಂದಿನ ಉತ್ಪಾದನಾ ಚಟುವಟಿಕೆಯಲ್ಲಿ ಅಗತ್ಯವಾದ ಸಂರಕ್ಷಣ ಸಾಧನಗಳ ಪೂರೈಕೆಯನ್ನು ಗಣಿಸಂಸ್ಥೆಗಳು ಕಡ್ಡಾಯವಾಗಿ ಪಾಲಿಸುತ್ತಿಲ್ಲ.
- ಗಣಿಸಂಸ್ಥೆಗಳಲ್ಲಿರುವ ಯಾವುದೇ ಪ್ರಥಮ ಚಿಕಿತ್ಸಾ ಘಟಕವು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸದೇ ನಿರ್ಲಿಪ್ತವಾಗಿವೆ.
- ಗಣಿ ಕಾರ್ಮಿಕರಿಗೆ ನೀಡುವ ಕೂಲಿಯ ದರವು ಕಾರ್ಮಿಕ ಕಾಯ್ದೆ ಕಾನೂನುಗಳಿಗೆ ಒಳಪಟ್ಟಿಲ್ಲ. ಗಣಿಯಲ್ಲಿರುವ ಮಹಿಳಾ ಹಾಗೂ ಪುರುಷ ಕಾರ್ಮಿಕರಿಗೆ ನೀಡುವ ವೇತನದಲ್ಲಿ ಬಹಳಷ್ಟು ವ್ಯತ್ಯಾಸಗಳಿವೆ.
- ಕಾರ್ಮಿಕರ ಕೆಲಸಕ್ಕೆ ಸಂಬಂಧಿಸಿದಂತೆ ನಿರ್ಧಿಷ್ಟವಾದ ಸಮಯದ ನಿರ್ಧಾರವನ್ನು ಗಣಿ ಸಂಸ್ಥೆಗಳು ಕಟ್ಟುನಿಟ್ಟಾಗಿ ಪಾಲಿಸುತ್ತಿಲ್ಲ.
- ಜಿಲ್ಲೆಯ ಗಣಿಯಲ್ಲಿ ದುಡಿಯುವ ಕಾರ್ಮಿಕರ ಬಗ್ಗೆ ಸಂಪೂರ್ಣವಾದ ಮಾಹಿತಿಯುಳ್ಳ ದಾಖಲೆಗಳನ್ನು ನೋಡುವುದು ಕಷ್ಟಕರವಾಗಿದೆ.

- ಗಣಿಯಲ್ಲಿರುವ ಕಾರ್ಮಿಕರಿಗಾಗಿ ದುಡಿಯುವವರಿಗಾಗಿ ಆರೋಗ್ಯ ತಪಾಸಣೆ ಕೈಗೊಳ್ಳಲು ಗಣಿ ಮಾಲೀಕರು ಯಾವುದೇ ವಿಶೇಷ ತಪಾಸಣಾ ವ್ಯವಸ್ಥೆಯನ್ನು ಕೈಗೊಂಡಿಲ್ಲ.
- ಕೆಲವೇ ಗಣಿಸಂಸ್ಥೆಗಳಲ್ಲಿ ಕಾರ್ಮಿಕರ ಕ್ಷೇಮಾಭಿವೃದ್ಧಿ ಅಧಿಕಾರಿಗಳನ್ನು ಕಾಣಬಹುದು. ಆದರೆ ಇನ್ನೂಳಿದ ಗಣಿಸಂಸ್ಥೆಗಳು ಈ ಕಾನೂನನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿಲ್ಲ.
- ಮಹಿಳಾ ಗಣಿಕಾರ್ಮಿಕರಿಗಾಗಿ ವಿಶೇಷವಾದ ಚಿಕಿತ್ಸಾ ವ್ಯವಸ್ಥೆಯ ಸೌಲಭ್ಯವು ಜಿಲ್ಲೆಯಾದ್ಯಂತ ಕಾಣುವುದು ಅಪರೂಪವಾಗಿದೆ.
- ಗಣಿಯಲ್ಲಿರುವ ಮಹಿಳೆಯ ಹೆರಿಗೆಯ ಸಂದರ್ಭದಲ್ಲಿರುವ ವಿಶೇಷ ಸೌಕರ್ಯಗಳನ್ನು ಯಾವುದೇ ಗಣಿಸಂಸ್ಥೆ ಕಡ್ಡಾಯವಾಗಿ ಪಾಲಿಸುತ್ತಿಲ್ಲ.
- ಜಿಲ್ಲೆಯಲ್ಲಿ ಕಾರ್ಮಿಕರ ಮಕ್ಕಳಿಗಾಗಿ ಕ್ರಷ್‌ಗಳ ಸೌಲಭ್ಯವು ಇಲ್ಲವಾಗಿದೆ.
- ಸರ್ಕಾರದ ಯಾವುದೇ ಅಧಿಕಾರಿವರ್ಗವು ಕಾರ್ಮಿಕರನ್ನು ಮನುಷ್ಯರಂತೆ ಪರಿಗಣಿಸುವ ಮನಸ್ಥಿತಿಯನ್ನು ಕಳೆದುಕೊಂಡಿದ್ದಾರೆ.

**೬.೨. ಸಲಹೆಗಳು**

ಇತ್ತೀಚಿನ ದಿನಗಳಲ್ಲಿ ವಿದೇಶಗಳಿಂದ ಕಬ್ಬಿಣ ಮತ್ತು ಮ್ಯಾಂಗನೀಜ್ ಅದಿರಿಗೆ ಅತೀ ಹೆಚ್ಚು ಬೇಡಿಕೆ ಬಂದ ಪರಿಣಾಮವಾಗಿ, ಅದರ ವ್ಯಾಪಾರ ಮತ್ತು ವ್ಯವಹಾರಗಳಿಂದ ಈ ಉದ್ದಿಮೆಯನ್ನು ಶ್ರೀಮಂತಿಕೆಯ ಉದ್ಯಮವೆಂದೂ ಕರೆಯಲಾಗುತ್ತಿದೆ. ಅತ್ಯಧಿಕ ಲಾಭಕ್ಕಾಗಿ ಉತ್ಪಾದನೆಯ ಎಲ್ಲಾ ಹಂತಗಳು ಈಗಾಗಲೇ ಯಾಂತ್ರಿಕೃತಗೊಂಡಿವೆ. ಇಂತಹ ತಾಂತ್ರಿಕ ಬದಲಾವಣೆಯಿಂದಾಗಿ ಗಣಿಕೈಗಾರಿಕೆಯಲ್ಲಿರುವ ಬುಡಕಟ್ಟು ಕಾರ್ಮಿಕರು ಅನೇಕ ತೊಂದರೆಗಳನ್ನು ಎದುರಿಸುತ್ತಿರುವುದು ಕ್ಷೇತ್ರಕಾರ್ಯದ ಅಧ್ಯಯನದಿಂದ ತಿಳಿದುಬರುತ್ತದೆ. ಅಂತಹ ಎಲ್ಲಾ ಸಮಸ್ಯೆಗಳನ್ನು ತಕ್ಷಣವೇ ಪರಿಹರಿಸಲು ಸಾಧ್ಯವಿಲ್ಲದಿದ್ದರೂ, ಕನಿಷ್ಠ ಪ್ರಮಾಣದ ಪ್ರಯತ್ನಗಳಿಂದಾಗಿ ಅವುಗಳ ತೀವ್ರತೆಯನ್ನು ಕಡಿಮೆ ಮಾಡಬಹುದು ಎಂಬೀ ಆಶಯಗಳೊಂದಿಗೆ ಈ ಕೆಳಗಿನ ಸಲಹೆಗಳನ್ನು ನೀಡಲಾಗಿದೆ.

- ಗಣಿಕಾರ್ಮಿಕ ಕುಟುಂಬಗಳಲ್ಲಿನ ಹಿರಿಯ ಸದಸ್ಯರ ಪಾಲನೆ ಹಾಗೂ ಪೋಷಣೆಯಲ್ಲಿ ಅನಾಧರಣೆಯ ನಡುವಳಿಕೆಗಳು ಹೆಚ್ಚುತ್ತಿರುವುದರಿಂದ ಗಣಿ ಸಂಸ್ಥೆಗಳು ಹಿರಿಯರಿಗಾಗಿ ವೃದ್ಧಾಶ್ರಮಗಳನ್ನು ಆರಂಭಿಸುವುದು ಸೂಕ್ತ.
- ನಗರೀಕರಣದಲ್ಲಿನ ಬೌದ್ಧಿಕ ಚಿಂತನೆಯು ಗಣಿ ಕಾರ್ಮಿಕರಲ್ಲೂ ಕಂಡುಬರುತ್ತಿರುವುದರಿಂದ

ಹೆಣ್ಣು ಶಿಶುಗಳ ಬಗ್ಗೆ ತಿರಸ್ಕಾರವಿದೆ. ಇಂತಹ ಚಟುವಟಿಕೆಗಳಿಂದ ಲಿಂಗಾನುಪಾತದ ಅಂತರವು ಹೆಚ್ಚುತ್ತಿರುವುದನ್ನು ತಡೆಯಲು ಜನಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಅವಶ್ಯಕ.

- ಬುಡಕಟ್ಟು ಗಣಿ ಕಾರ್ಮಿಕರಲ್ಲಿ ಕುಟುಂಬ ಯೋಜನೆಗಳ ಆಚರಣೆಯ ಬಗ್ಗೆ ತಪ್ಪು ಕಲ್ಪನೆಗಳಿರುವುದರಿಂದ ಸರ್ಕಾರ ಮತ್ತು ಖಾಸಗಿ ಸಂಘ-ಸಂಸ್ಥೆಗಳು ಅದರ ಉಪಯೋಗ ಮತ್ತು ಪ್ರಯೋಜನೆಗಳನ್ನು ಮನವರಿಕೆ ಮಾಡಿಕೊಡುವ ಕಾರ್ಯತಂತ್ರಗಳನ್ನು ಕೈಗೊಳ್ಳುವುದರ ಮೂಲಕ ಏಡ್ಸ್‌ನಂತಹ ಮಾರಕ ರೋಗಗಳಿಂದ ಕಾರ್ಮಿಕರನ್ನು ರಕ್ಷಿಸಬಹುದಾಗಿದೆ.
- ಗಣಿ ಕಾರ್ಮಿಕರು ನೆಲೆಸಿರುವ ವಸತಿ ಪ್ರದೇಶಗಳ ಸುತ್ತ ಮುತ್ತ ಸರ್ಕಾರ, ಖಾಸಗಿ ಸಂಘ ಸಂಸ್ಥೆಗಳು ಹಾಗೂ ಗಣಿ ಮಾಲೀಕರು ವಿವಿಧ ಶಿಕ್ಷಣದ ಸೌಕರ್ಯಗಳನ್ನು ಆರಂಭಿಸಬೇಕು.
- ಕಾರ್ಮಿಕರ ಮಕ್ಕಳ ಶಿಕ್ಷಣ ಪ್ರೋತ್ಸಾಹಕ ರೂಪದಲ್ಲಿ ಬಟ್ಟೆ, ಶಾಲಾಶುಲ್ಕ, ಪಠ್ಯ-ಪುಸ್ತಕ ಹಾಗೂ ವಾಹನ ಸೌಕರ್ಯ ಇತ್ಯಾದಿಗಳನ್ನು ಗಣಿ ಮಾಲೀಕರು ಹೆಚ್ಚೂ ಹೆಚ್ಚೂ ಒದಗಿಸಬೇಕು.
- ಕಾರ್ಮಿಕರಿಗೆ ಪ್ರತ್ಯೇಕವಾಗಿ ಶಿಕ್ಷಣದಿಂಧಾಗುವ ಪ್ರಯೋಜನಗಳನ್ನು ತಿಳಿಸುವ ಹಾಗೂ ಅವರು ಪಾಲ್ಗೊಳ್ಳುವಂತೆ ಮಾಡುವ ಹಲವಾರು ಕಾರ್ಯಕ್ರಮಗಳನ್ನು ಸರ್ಕಾರ ಹಾಗೂ ಸ್ಥಳೀಯ ಸಂಘ-ಸಂಸ್ಥೆಗಳು ಹಮ್ಮಿಕೊಳ್ಳವುದು ಅವಶ್ಯಕ.
- ಗಣಿ ಮಾಲೀಕರು ತಮ್ಮ ಸಂಸ್ಥೆಗಳಲ್ಲಿನ ವಲಸೆ ಕಾರ್ಮಿಕರಿಗಾಗಿ ಅವರ ಹಕ್ಕು ಭಾದ್ಯತೆಗಳನ್ನು ರಕ್ಷಿಸಲು ಹಾಗೂ ಅವರು ಸ್ಥಿರವಾದ ಆಸ್ತಿಪಾಸ್ತಿಗಳನ್ನು ಹೊಂದಲು ಅವಶ್ಯಕವಾದ ಹಣಕಾಸಿನ ಹಾಗೂ ಇನ್ನಿತರ ಸೌಲಭ್ಯಗಳನ್ನು ಒದಗಿಸುವುದು ಸೂಕ್ತ.
- ಸ್ಥಳೀಯ ಆಡಳಿತ ಸಂಸ್ಥೆಗಳು ಮತ್ತು ಸರ್ಕಾರೇತರ ಸಂಘ-ಸಂಸ್ಥೆಗಳು ವಲಸೆ ಪ್ರವೃತ್ತಿಯುಳ್ಳ ಗಣಿ ಕಾರ್ಮಿಕರ ಭದ್ರತೆಗಾಗಿ ಅನೇಕ ಯೋಜನೆಗಳನ್ನು ಜಾರಿಗೊಳಿಸಬೇಕು ಹಾಗೂ ಮಾರ್ಗೋಪಾಯಗಳನ್ನು ಕೈಗೊಳ್ಳುವುದು.
- ಗಣಿಕಾರ್ಮಿಕರ ವಾಸಸ್ಥಳದ ಸುತ್ತ ಮುತ್ತ ಯೋಗ್ಯ ಪರಿಸರವನ್ನು ರೂಪಿಸಲು ಗಣಿಮಾಲಿಕರು, ಖಾಸಗಿ ಸಂಘ-ಸಂಸ್ಥೆಗಳು ಹಾಗೂ ಆರೋಗ್ಯ ಕಾರ್ಯಕರ್ತರು ಜಂಟಿಯಾಗಿ ಶ್ರಮಿಸಬೇಕು.
- ಸುವ್ಯವಸ್ಥಿತವಾದ ಕಾರ್ಮಿಕರ ವಸತಿ ನಿರ್ಮಾಣಕ್ಕೆ ಗಣಿ ಮಾಲೀಕರು, ಸರ್ಕಾರ ಹಾಗೂ ಖಾಸಗಿ ಸಾಮಾಜಿಕ ಸೇವಾ ಸಂಸ್ಥೆಗಳು ಜಂಟಿಯಾಗಿ ವಿವಿಧ ಕಾರ್ಯಯೋಜನೆಗಳನ್ನು ಕೈಗೊಳ್ಳಬೇಕು.

- ಸ್ಥಳೀಯ ರಾಜಕೀಯ ಸಂಸ್ಥೆಗಳು ಸರ್ಕಾರದ ಬೇರೆ ಬೇರೆ ಸೌಲಭ್ಯಗಳನ್ನು ಹಂಚಿಕೆ ಮಾಡುವಾಗ ಗಣಿಯಲ್ಲಿರುವ ಕಾರ್ಮಿಕರಿಗೂ ವಿಶೇಷ ಪ್ರಾತಿನಿಧ್ಯ ನೀಡಲು ಶ್ರಮಿಸಬೇಕು.
- ಕಾರ್ಮಿಕರ ವಸತಿ ಪ್ರದೇಶದ ಸುತ್ತ-ಮುತ್ತ ಕುಡಿಯುವ ನೀರು, ವಿದ್ಯುಚ್ಛಕ್ತಿ ಸೌಲಭ್ಯ ಮತ್ತು ಶಿಕ್ಷಣದ ಸೌಕರ್ಯಗಳನ್ನು ಯಥೇಚ್ಛವಾಗಿ ಕಲ್ಪಿಸುವ ಕಾರ್ಯಕ್ರಮವನ್ನು ಜಿಲ್ಲಾಡಳಿತ ಜಾರಿಗೆ ತರಬೇಕು.
- ಕಾರ್ಮಿಕರಲ್ಲಿ ಶಿಕ್ಷಣದ ಬಗ್ಗೆ ಆಸಕ್ತಿ ಬೆಳೆಸಲು, ಹೆಚ್ಚು ಅಂಕಗಳನ್ನು ಪಡೆದ ಗಣಿ ಕಾರ್ಮಿಕ ಮಕ್ಕಳನ್ನು ಹಾಗೂ ಪೋಷಕರನ್ನು ಸಾರ್ವಜನಿಕವಾಗಿ ಗೌರವಿಸುವ ಕಾರ್ಯಕ್ರಮಗಳನ್ನು ಗಣಿಮಾಲೀಕರು ಹಾಗೂ ಸ್ಥಳೀಯ ಆಡಳಿತ ವ್ಯವಸ್ಥೆ ಏರ್ಪಡಿಸಬೇಕು.
- ಕಾರ್ಮಿಕ ಕುಟುಂಬಗಳಿಗೆ ನಿರಂತರ ದುಡಿಮೆಯ ಭದ್ರತೆಯನ್ನು ಗಣಿಸಂಸ್ಥೆಗಳು ಹಾಗೂ ಸರ್ಕಾರ ಒದಗಿಸುವ ಕಾರ್ಯಕ್ರಮ ಜಾರಿಗೊಳ್ಳಬೇಕು.
- ಗಣಿ ಚಟುವಟಿಕೆಯಲ್ಲಿ ತಂತ್ರಜ್ಞಾನದ ಬಳಕೆಯ ಜೊತೆಗೆ ಮಾನವ ಸಂಪನ್ಮೂಲದ ಬಳಕೆಯನ್ನು ಹೆಚ್ಚಿಸುವ ಕಾರ್ಯಯೋಜನೆಗಳ್ನು ಮಾಲೀಕ ವರ್ಗ ಹಾಗೂ ಸರ್ಕಾರಗಳು ಪಾಲಿಸುವ ಕಾರ್ಯತಂತ್ರಗಳನ್ನು ರೂಪಿಸಬೇಕು.
- ಗಣಿಯಲ್ಲಿ ಆಕಸ್ಮಿಕವಾಗಿ ಸಂಭವಿಸುವ ಅನಾಹುತಗಳಿಗೆ ಸೂಕ್ತ ಪರಿಹಾರ ಹಾಗೂ ಕುಟುಂಬದ ಭದ್ರತೆಗಾಗಿ ಗಣಿ ಸಂಸ್ಥೆ ಹಾಗೂ ಸರ್ಕಾರ ವಿವಿಧ ನೆರವಿನ ಕಾರ್ಯಕ್ರಮಗಳನ್ನು ಜಾರಿಗೊಳಿಸಬೇಕು.
- ಗಣಿ ಮಾಲೀಕರು ತಮ್ಮ ಸಂಸ್ಥೆಗಳಲ್ಲಿ ಕಾರ್ಮಿಕ ಸಂಘಟನೆಗಳನ್ನು ಸ್ಥಾಪಿಸಲು ಮೃದು ಧೋರಣೆಗಳನ್ನು ಅನುಸರಿಸಲು ಮುಂದಾಗಬೇಕಾಗಿದೆ.
- ಕಾರ್ಮಿಕರಲ್ಲಿ ಸಂಘಟನೆಯ ಬಗ್ಗೆ ಸೂಕ್ತ ತಿಳುವಳಿಕೆ ಹಾಗೂ ಜಾಗೃತಿ ಮೂಡಿಸಲು ಸರ್ಕಾರಿ ಮತ್ತು ಖಾಸಗಿ ಸೇವಾಸಂಸ್ಥೆಗಳು ತಮ್ಮ ಕಾರ್ಯ ಚುಟವಟಿಕೆಗಳನ್ನು ಹೆಚ್ಚಿಸಬೇಕು.
- ಅನಕ್ಷರಸ್ಥ ಗಣಿ ಕಾರ್ಮಿಕರಿಗೆ ಸಾಕ್ಷರತೆಯನ್ನು ಮೂಡಿಸಲು ರಾತ್ರಿ ಶಾಲೆಗಳನ್ನು, ಮನೋರಂಜನಾ ಸೇವೆಗಳನ್ನು, ದೂರದರ್ಶನ, ರೇಡಿಯೋ ಹಾಗೂ ಬಯಲು ನಾಟಕಗಳಂತಹ ದೃಶ್ಯ ಮಾಧ್ಯಮಗಳಿಂದ ಕಾರ್ಮಿಕರ ಮನಪರಿವರ್ತನೆಯ ಕಾರ್ಯಕ್ರಮಗಳನ್ನು ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಳ್ಳಬೇಕು.
- ಜಿಲ್ಲೆಯಲ್ಲಿರುವ ವಿವಿಧ ಕಾರ್ಮಿಕ ಸಂಘಟನೆಗಳೆಲ್ಲಾ ಒಂದುಗೂಡಿ ತಮ್ಮೆಲ್ಲಾ

ಭಿನ್ನಾಭಿಪ್ರಾಯಗಳನ್ನು ತೊರೆದು, ಒಂದೇ ಸಿದ್ಧಾಂತದ ಅಡಿಯಲ್ಲಿ ಗಣಿಸಂಸ್ಥೆಗಳಲ್ಲಿ ಕಾರ್ಮಿಕ ಸಂಘಟನೆಗಳ ಸ್ಥಾಪನೆಗೆ ಪ್ರಥಮ ಆದ್ಯತೆ ನೀಡಬೇಕು.

- ಜಿಲ್ಲೆಯ ಗಣಿ ಸಂಸ್ಥೆಗಳಲ್ಲಿ ಆಯಾ ಸ್ಥಳೀಯ ಭಾಷೆಗೆ ಪ್ರಾತಿನಿಧ್ಯ ಮತ್ತು ಆಯಾ ಗಣಿ ಸಂಸ್ಥೆಗಳಲ್ಲಿ ಉನ್ನತ ಹುದ್ದೆಗಳನ್ನು ಸ್ಥಳೀಯರಿಗೆ ನೀಡಲು ಮಾಲೀಕವರ್ಗ ಮುಂದಾಗಬೇಕಾಗಿದೆ.

- ಗಣಿ ಕಾರ್ಮಿಕರ ಆರೋಗ್ಯದ ರಕ್ಷಣೆಗಾಗಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ವೈದ್ಯಕೀಯ ಸೌಲಭ್ಯಗಳನ್ನು ಕೈಗೊಳ್ಳುವುದು ಸೂಕ್ತ.

- ಜಿಲ್ಲೆಯಲ್ಲಿ ಕಂಡುಬರುತ್ತಿರುವ ಮಿತಿಮೀರಿದ ಗಣಿಗಾರಿಕೆಯಿಂದಾಗಿ ಈ ಭಾಗದ ಅರಣ್ಯ ಸಂಪತ್ತು ನಾಶಗೊಂಡು, ಸರಾಸರಿ ಮಳೆಯ ಪ್ರಮಾಣ ಕಡಿಮೆಯಾಗಿ, ಹಲವು ಸಮಸ್ಯೆಗಳಿಗೆ ಎಡೆ ಮಾಡಿಕೊಟ್ಟಿರುವುದನ್ನು ತಡೆಯಲು, ಸಾಮೂಹಿಕ ಚಳುವಳಿಯ ಅವಶ್ಯಕತೆ ಹೆಚ್ಚಾಗಿದೆ.

- ಈಗಿರುವ ಗಣಿ ಕಾರ್ಮಿಕ ಆಸ್ಪತ್ರೆಗಳಲ್ಲಿ ಹತ್ತಾರು ಸಮಸ್ಯೆಗಳಿಂದ ಕೂಡಿದ್ದು, ಅವುಗಳನ್ನು ಹೋಗಲಾಡಿಸಲು ಸರ್ಕಾರವು ಅಗತ್ಯಕ್ರಮಗಳನ್ನು ಕೈಗೊಳ್ಳಲು ಮುಂದಾಗಬೇಕು.

- ಜಿಲ್ಲೆಯ ಎಲ್ಲಾ ಗಣಿ ಸಂಸ್ಥೆಗಳು ಸೇರಿ ಕಾರ್ಮಿಕರಿಗಾಗಿ ಪ್ರತ್ಯೇಕ ಜಿಲ್ಲೆಯಲ್ಲಿ ವೈದ್ಯಕೀಯ ವ್ಯವಸ್ಥೆಯನ್ನು ಸ್ಥಾಪಿಸಲು ಮುಂದೆ ಬರಬೇಕು.

- ಗಣಿ ಕಾರ್ಮಿಕರ ಆರೋಗ್ಯದ ಬಗ್ಗೆ ಜನಜಾಗೃತಿ ಕಾರ್ಯಕ್ರಮಗಳನ್ನು ರೂಪಿಸುವುದು ಮತ್ತು ಗಣಿ ಸಂಸ್ಥೆಗಳ ಉತ್ಪದನಾ ವಲಯದಲ್ಲಿ ಶಾಶ್ವತ ವೈದ್ಯಕೀಯ ಸೌಲಭ್ಯವನ್ನು ಆರಂಭಿಸುವಂತೆ ಗಣಿ ಮಾಲೀಕರನ್ನು ಹಾಗೂ ಸರ್ಕಾರವನ್ನು ಸಂಘ-ಸಂಸ್ಥೆಗಳು ಒತ್ತಾಯಿಸಬೇಕು.

- ಪ್ರತಿಯೊಂದು ಗಣಿ ಸಂಸ್ಥೆಗಳಲ್ಲಿ ಕುಡಿಯುವ ನೀರು ಹಾಗೂ ವಿಶ್ರಾಂತಿಗೃಹಗಳನ್ನು ಸಂಸ್ಥೆಯ ವ್ಯವಸ್ಥಾಪಕರು ಪ್ರಾರಂಭಿಸುವುದು.

- ಗಣಿಯಲ್ಲಿರುವ ಮಹಿಳೆಯರಿಗಾಗಿ ವೈದ್ಯಕೀಯ, ತಪಾಸಣೆ, ಭದ್ರತೆ, ಸ್ವಯಂ ಉದ್ಯೋಗಗಳ ಮೂಲಕ ಮಹಿಳೆಯರಲ್ಲಿ ನೈತಿಕ ಬೆಂಬಲ ಹಾಗೂ ಆತ್ಮಸ್ಥೈರ್ಯವನ್ನು ಬೆಳೆಸುವ ಕಾರ್ಯ ಕ್ರಮಗಳನ್ನು ಗಣಿಸಂಸ್ಥೆಗಳು ಅನುಸರಿಸುವಂತೆ ಸರ್ಕಾರ ನಿರ್ಬಂಧನೆಗಳನ್ನು ಜಾರಿಗೊಳಿಸಬೇಕು.

- ಮಹಿಳೆಯರಿಗೆ ಹೆರಿಗೆ ಸೌಲಭ್ಯದ ಜೊತೆಗೆ ಪುರುಷರೊಂದಿಗಿನ ಕೂಲಿಯ ತಾರತಮ್ಯವನ್ನು ಹೋಗಲಾಡಿಸಲು ಸರ್ಕಾರ ಮತ್ತು ಕಾರ್ಮಿಕ ಅಧಿಕಾರಿಗಳು ಸೂಕ್ತ ಕ್ರಮ ಕೈಗೊಳ್ಳಬೇಕು.

- ಸರ್ಕಾರವು ತನ್ನ ವ್ಯಾಪಕ ಪ್ರಚಾರ ಕಾರ್ಯಕ್ರಮಗಳಿಂದ ಕಾರ್ಮಿಕ ಕಾಯ್ದೆ ಕಾನೂನುಗಳ ಬಗ್ಗೆ ಜನರಿಗೆ ಜಾಗೃತಿ ಮೂಡಿಸುವ ಕಾರ್ಯತಂತ್ರಗಳನ್ನು ಕಟ್ಟು ನಿಟ್ಟಾಗಿ ಪಾಲಿಸಬೇಕು.
- ಸರ್ಕಾರಿ ಅಧಿಕಾರಿಗಳು ಕನಿಷ್ಠ ಪಕ್ಷ ತಮ್ಮ ಕರ್ತವ್ಯಗಳನ್ನು ಪಾಲಿಸುವಂತೆ ಪ್ರೇರೆಪಿಸಲು ಸಾಮಾಜಿಕ ಸಂಘುಸಂಸ್ಥೆಗಳು ಹಾಗೂ ಸ್ಥಳೀಯ ರಾಜಕೀಯ ಇಚ್ಛಾಶಕ್ತಿ ರೂಪಗೊಳ್ಳಬೇಕು.
- ಸರ್ಕಾರೇತರ ಸಂಘ-ಸಂಸ್ಥೆಗಳು ಕಾರ್ಮಿಕ ಕಾಯ್ದೆಗಳನ್ನು ಪಾಲಿಸುವಂತೆ ಅಧಿಕಾರಿಗಳ ಮೇಲೆ ಹಾಗೂ ಸರ್ಕಾರದ ಮೇಲೆ ಒತ್ತಡ ತರುವ ಕಾರ್ಯಯೋಜನೆಯನ್ನು ಕೈಗೊಳ್ಳಬೇಕು.
- ಗಣಿಗಾರಿಕೆ ಈಗಾಗಲೇ ಯಾಂತ್ರೀಕರಣಗೊಂಡಿರುವುದರಿಂದ ಗಣಿಕಾರ್ಮಿಕರಿಗಾಗಿ ಹೆಚ್ಚು, ಹೆಚ್ಚು ಪರ್ಯಾಯ ಉದ್ಯೋಗಗಳನ್ನು ಗಣಿಮಾಲಿಕರು ಹಾಗೂ ಸರ್ಕಾರ ಪ್ರಾರಂಭಿಸುವ ಚಿಂತನೆ ಮಾಡಬೇಕು. ಇದಕ್ಕೆ ಖಾಸಗಿ ಸಂಘುಸಂಸ್ಥೆಗಳು ಸಹ ಧ್ವನಿಗೂಡಿಸಬೇಕು.
- ಗಣಿ ಕಾರ್ಮಿಕರ ವೃತ್ತಿ ಹಾಗೂ ಸ್ವರೂಪದ ಬಗ್ಗೆ ಸಾರ್ವಜನಿಕರೊಂದಿಗೆ ನಿಕಟವಾದ ಸಂಪರ್ಕವನ್ನು ಬೆಳೆಸಲು ಪೂರಕವಾದ ಚರ್ಚೆಗಳನ್ನು ಸ್ಥಳೀಯ ಆಡಳಿತ ವ್ಯವಸ್ಥೆ ಕೈಗೊಳ್ಳಬೇಕು.
- ಜಿಲ್ಲೆಯ ಪರಿಸರವನ್ನು ರಕ್ಷಿಸಿ, ಜನಸಮುದಾಯಗಳ ಆರೋಗ್ಯವನ್ನು ಕಾಪಾಡಲು ಸ್ಥಳೀಯ ಸಂಘ-ಸಂಸ್ಥೆಗಳು, ಪ್ರಜ್ಞಾವಂಥ ನಾಗರಿಕರು ಹಾಗೂ ಜಿಲ್ಲಾಡಳಿತವು ಕಟ್ಟುನಿಟ್ಟಿನ ಕ್ರಮಗಳನ್ನು ಅನುಸರಿಸಬೇಕು.

ಈ ಮಹಾ ಪ್ರಬಂಧದ ಅಧ್ಯಯನದ ದೃಷ್ಟಿಯಿಂದ ಕೈಗೊಂಡ ಸಂಶೋಧನಾ ಸಂದರ್ಭದಲ್ಲಿ ಈ ಮೇಲ್ಕಾಣಿಸಿದ ವಿಷಯಗಳ ಅವಶ್ಯಕತೆಯು ಗಣಿಕಾರ್ಮಿಕರಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ. ಪ್ರಸ್ತುತ ಜಾಗತೀಕರಣದ ಸನ್ನಿವೇಶವು ಹಲವಾರು ವೈಪರಿತ್ಯಗಳನ್ನು ಹುಟ್ಟುಹಾಕಿರುವುದರಿಂದ ಈಗಾಗಲೇ ಅನೇಕ ಸಂಪ್ರದಾಯಿಕ ಉದ್ಯೋಗವಕಾಶಗಳು ನಾಶಗೊಂಡಿವೆ. ದೈಹಿಕ ಸಾಮರ್ಥ್ಯವನ್ನೇ ನಂಬಿ ತಮ್ಮ ಬದುಕನ್ನು ಕಟ್ಟಿಕೊಂಡ ಕೋಟ್ಯಾಂತರ ಮಾನವ ಸಂಪನ್ಮೂಲವು ನಿರುದ್ಯೋಗಿಗಳಾಗಿ, ನಿರ್ಗತಿಕರಾಗಿ ತಮ್ಮ ಜೀವನವನ್ನು ಕಳೆಯುವಂತಾಗಿದೆ. ಇಂತಹ ಭಯಾನಕವಾದ ವ್ಯವಸ್ಥೆಯಲ್ಲಿ ಜಿಲ್ಲೆಯ ಗಣಿಕಾರ್ಮಿಕರು ಬರುವುದರಿಂದ ಅವರ ದೈನಂದಿನ ಜೀವನ ಕಷ್ಟಕರವಾಗಿದೆ. ಅವರು ತಮ್ಮ ವೃತ್ತಿ ಜೀವನದ ಬದಲಾವಣೆಗೆ ಪೂರಕವಾದ ಸಂಕ್ರಮಣ ಕಾಲಘಟ್ಟದಲ್ಲಿದ್ದಾರೆಂಬುದು ಕ್ಷೇತ್ರಕಾರ್ಯದಿಂದ ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮ ಘನಸರ್ಕಾರಗಳು, ಅಧಿಕಾರಿ ವರ್ಗದವರು, ಗಣಿ ಮಾಲಿಕರು, ರಾಜಕೀಯ ನಾಯಕರು, ಸ್ಥಳೀಯ ಸಂಘುಸಂಸ್ಥೆಗಳು ಹಾಗೂ ಸಾಮಾಜಿಕ ಕಾರ್ಯಕರ್ತರು ಒಗ್ಗೂಡಿ ಗಣಿಯಲ್ಲಿ ದುಡಿಯುವ ಕಾರ್ಮಿಕರ ಹಿತಾ ರಕ್ಷಣೆಗೆ ಅಗತ್ಯ ಕಾರ್ಯಕ್ರಮಗಳನ್ನು ಕೈಗೊಳ್ಳಲು ಮುಂದಾಗಬೇಕಾಗಿದೆ. ಇಂದು ನಾವುಗಳು ಜಾಗತೀಕರಣದ ಸಂದರ್ಭದಲ್ಲಿ ಕೇವಲ ಲಾಭದ ಬೆನ್ನುಹತ್ತಿ, ಆಧುನಿಕ ಹಾಗೂ ತಂತ್ರಜ್ಞಾನಕ್ಕೆ ಮನಸೋಲುವುದು

ಸರ್ವಥಸಲ್ಲದು. ಏಕೆಂದರೆ ಸಮಾಜದ ಮತ್ತೊಂದು ಭಾಗವಾಗಿ ಕೇವಲ ದೈಹಿಕ ಸಾಮರ್ಥ್ಯದಿಂದಲೇ ತಮ್ಮ ಜೀವನವನ್ನು ರೂಪಿಸಿಕೊಳ್ಳುತ್ತಿರುವ ಲಕ್ಷಾಂತರ ಮಾನವ ಸಂಪನ್ಮೂಲವನ್ನು ಕಡೆಗಾಣಿಸಿದಂತಾಗುತ್ತದೆ. ಏಕೆಂದರೆ ಹಿಂದೊಂದು ಕಾಲಕ್ಕೆ ಯಾವುದೇ ಉತ್ಪಾದನೆಯನ್ನು ನಿರ್ಧರಿಸುವಲ್ಲಿ ಮಾನವೀಯ ಮೌಲ್ಯವುಳ್ಳ ಶ್ರಮ ಶಕ್ತಿಯು ನಿರ್ವಹಿಸುತ್ತಿದ್ದ ಪಾತ್ರವನ್ನು ಪ್ರತಿಯೊಬ್ಬರು ಗಂಭೀರವಾಗಿ ಪರಿಗಣಿಸಿದಾಗ ಮಾತ್ರ ಅದು ಧರ್ಮಸಮ್ಮತವೆನಿಸುತ್ತದೆ. ಅಲ್ಲದೆ ದೈಹಿಕ ಶ್ರಮವೊಂದನ್ನು ನೆಚ್ಚಿಕೊಂಡ ಅನೇಕ ಜನಸಮುದಾಯಗಳಿಗೆ ಬದುಕಲು ಅವಕಾಶ ಮಾಡಿಕೊಟ್ಟಾಂತಾಗುತ್ತದೆ. ಶಿಕ್ಷಣ, ತಂತ್ರಜ್ಞಾನ ಹಾಗೂ ಆಧುನೀಕರಣದ ಜ್ಞಾನವನ್ನು ಅವರಿಗೆ ಒದಗಿಸಲು ವ್ಯವಸ್ಥಿತವಾದ ಕಾರ್ಯಯೋಜನೆಯನ್ನು ಕೈಗೊಳ್ಳುವುದು ಸೂಕ್ತ. ಇಲ್ಲವಾದರೆ ನಿರುದ್ಯೋಗಿ ಕಾರ್ಮಿಕರ ಹೆಚ್ಚಳದಿಂದಾಗಿ ಬಡತನ, ಅನಾರೋಗ್ಯ, ಹಸಿವುಗಳಿಂದಾಗಿ ಸಮಾಜದಲ್ಲಿ ಅಶಾಂತಿ, ದರೋಡೆ, ಕಳ್ಳತನದ ಪ್ರಕರಣಗಳು ಹೆಚ್ಚಾಗುವುದರಲ್ಲಿ ಎರಡು ಮಾತಿಲ್ಲ. ಇಂತಹ ಅಸಂಬಂಧ ಬೆಳವಣಿಗೆಯು ನಮ್ಮ ಸುತ್ತಲಿನ ಸಮಾಜದ ಸಮತೋಲನವನ್ನು ಕಲುಷಿತಗೊಳಿಸುತ್ತದೆ. ಈ ದೃಷ್ಟಿಕೋನದಿಂದಾಗಿ ನಮ್ಮ ಸುತ್ತಲಿನ ವ್ಯವಸ್ಥೆಯು ಗಣಿ ಕಾರ್ಮಿಕರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬೆಳವಣಿಗೆಗೆ ಪೂರಕವಾದ ಕಾರ್ಯ ಯೋಜನೆಗಳನ್ನು ಕೈಗೊಳ್ಳಲು ಮುಂದಾಗಬೇಕಾಗಿದೆ. ಅಂದಾಗ ಮಾತ್ರ ಸಮಾಜದ ಸರ್ವತೋಮುಖ ಬೆಳವಣಿಗೆಗೆ ಅಗತ್ಯವಾದ ಸೇವೆ, ಸಹಕಾರ ಹಾಗೂ ಭದ್ರತೆ ಒದಗಿಸಿದ ಕೀರ್ತಿ ಸರ್ವರ ಪಾಲಿಗೆ ಸೇರುತ್ತದೆ. ಇದಕ್ಕಾಗಿ ಬುಡಕಟ್ಟು ಗಣಿಕಾರ್ಮಿಕರ ಸಮುದಾಯಗಳ ಬಗ್ಗೆ ಮತ್ತು ಅವರ ವೃತ್ತಿಯ ಬಗ್ಗೆ ಸಮಾಜದ ಸಮಸ್ತ ಸದಾವಕಾಶಗಳ ನರ ನಾಡಿಗಳಲ್ಲಿ ಜಾಗೃತಿಯನ್ನುಂಟು ಮಾಡುವುದು ಪ್ರತಿಯೊಬ್ಬರ ಕರ್ತವ್ಯವಾಗಬೇಕಾಗಿದೆ.

**ಮುಂದಿನ ಅಧ್ಯಯನದ ಸಾಧ್ಯತೆಗಳು**

ಜಿಲ್ಲೆಯ ಬುಡಕಟ್ಟು ಗಣಿ ಕಾರ್ಮಿಕರ ಅಧ್ಯಯನದ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ಸಂಶೋಧಕರು, ಅಧ್ಯಯನಕಾರರು, ಇಂತಹ ಕಾರ್ಮಿಕರ ಬಗ್ಗೆ, ಸಾಮಾಜಿಕ, ರಾಜಕೀಯ, ಆರ್ಥಿಕ, ಮಹಿಳಾ ಮತ್ತು ಮಾನವಶಾಸ್ತ್ರೀಯ ದೃಷ್ಟಿಕೋನಗಳಲ್ಲಿ ಅಧ್ಯಯನ ಮಾಡುವ ಸಾಧ್ಯತೆಗಳಿವೆ.

ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡಿರುವ ಗಣಿಗಾರಿಕೆ ಕುರಿತು ಅಧ್ಯಯನ ಮಾಡುವವರಿಗೆ ಪ್ರಸ್ತುತ ಈ ಮಹಾಪ್ರಬಂಧ ಮಾರ್ಗಸೂಚಿಯಾಗಬಹುದು. ಒಟ್ಟಿನಲ್ಲಿ **ಬಳ್ಳಾರಿ ಜಿಲ್ಲಾ ಗಣಿಕಾರ್ಮಿಕರ ಸಮಾಜೋ-ಆರ್ಥಿಕ ಅಧ್ಯಯನ** ಎಂಬೀ ವಿಷಯದ ನಿಬಂಧ ಬುಡಕಟ್ಟು ಕಾರ್ಮಿಕರ ವಿವಿಧ ಅಂಶಗಳ ಕುರಿತು ಮಾಹಿತಿ ದೊರಕಿಸಿಕೊಡಬಲ್ಲ ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ. ಆದಾಗ್ಯೂ ನನ್ನ ಗಮನಕ್ಕೆ ಬರದೆ ಇರುವ ಸಂಶೋಧನಾಂಶಗಳು ಉಳಿದಿರುವ ಸಾಧ್ಯತೆಗಳಿವೆ. ಆಸಕ್ತಿ ಇರುವ ಅಧ್ಯಯನಕಾರರು ಆ ಬಗೆಗೆ ಹೆಚ್ಚಿನ ಅಧ್ಯಯನವನ್ನು ಮಾಡಬಹುದಾಗಿದೆ.

# ಗ್ರಂಥಋಣ

Bandopadhya and M. Mauncha, Local needs and Forest Resources Management in the Himalaya, India's Enviornment Crises and Responses, Dehradon, Nataraj Publishers, 1985

Bhagoliwal T.N., Economics of Labour and Industrial Relation, Sahitya Bhavan, Agra, 1985

Chandra Mahapatro, Economic Development of Tribal India, Assian Publishing house, New Delhi, 1987

Francis Wilson, Labour in the South African Gold Mines, 1911-1969, Cambridge, 1972

Giri V.V., Labour Problems in Indian Industry, Asia Publishing House, Bombay - 1972.

Hasan N., Social Security System in India, S. Chand and Company, NewDelhi, 1972

Indian National Forest Policy, Ministry of Enviornment and Forest, 1988

Konlier Kishore Kumar Chatargee, An Introduction to IndianMineral Economics, 1991

Mamata and Mamoria, Industrial Labour, Social and Industrial Peace in India, Kitab Mahal Allahabad, 1979

Mathew, Areeparmpil, Tribals of Jharkhand Victims of Development, Indian Social Institute, New Delhi, 2002

Mehrotra, Labour Problems in India, S. Chand Company Ltd., New Delhi, 1981

Memoria C.B., and Satisha Memoria, Some Aspects of Industrial Labour in India, Kitab Mahal Allahabad, 1983

Memoria C.B., and Memoria, Indisurial Labour, Social Security and Industrial Peace in India, Kitab Mahal, Allahabad, 1987

Mishra K.K., Labour Welfare in Indian Industry, Meenakshi Prakashana, Meerat, 1972

Nadakarni M.V., Economics and Ecological Concerns Sieze Publishers, NewDelhi, 1991

Rajgopal Swamy .K, Distribution of the World's Minerl Wealth, Prasarnga Universtiy of Mysore, 1971

Rakhahari Chatterji., Union Politics and the State, Sourth Asian Publishers, NewDelhi, 1980

Ramaswamy E.A., Workers Consciousness Trade Union Response, Oxford University Press, 1988

Ramarao B., An Out link Survery of the Mineral Resources of Mysore, Department of Mines and Geology, Bangalore, 1962

Ravindra Kumar Gowda Y., Socio-Economic Conditions of Lime Stone mine Labour in Dhone Karnool Distrist, Srikrishina Devaraya University, Ananthapur, 1987

Sathya Sundaram, National Wage Policy, B.R. Publcation Corportion, New Delhi, 1987

Sen B.R., Indian Labour laws, All India Managment Association, NewDelhi, 1978

Sharma G.K., Labour Movements in India, Sterling Publishers, NewDelhi, 1972

Upadhya H.C., Status of Schduled Tribes in India, Anmol Publication pvt Ltd, New Delhi, 1999

Vandana Shiva, J. Bandopadhya and H.C. Sharath Chandra, The Social Ecological and Economic impact of Social forest in Koalr, IIM, Bangalore, 1981

ಚಂದ್ರಶೇಖರ .ಟಿ.ಆರ್., ಅಮರ್ತ್ಯಸೇನ್ ಅಭಿವೃದ್ಧಿ ಕಥನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಚಂದ್ರಶೇಖರ ನಂಗಲಿ ವಿ., ಕಾಡು ಮತ್ತು ತೋಪು, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೦

ಲಕ್ಕಪ್ಪಗೌಡ ಎಚ್.ಜೆ., (ಸಂ) ಕರ್ನಾಟಕ ಬುಡಕಟ್ಟುಗಳು, ಸಂಪುಟ - ೧-೨, ಕರ್ನಾಟಕ ಜಾನಪದ ಆಕಾಡೆಮಿ, ಬೆಂಗಳೂರು, ೧೯೯೯

ವಿಶ್ವನಾಥ ಕರ್ನಾಡ, ತುಳುವರ ಮುಂಬಯಿ ವಲಸೆ, ಕನ್ನಡ ವಿಭಾಗ, ಮು.ವಿ.ವಿ. ೧೯೯೭

ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರೀಕರಣ ಮತ್ತು ಜನಾಂದೋಲನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

ವಂದನಾ ಶಿವ, ಬತ್ತದ ಚಿಲುಮೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

## GAZETTERS

ಪ್ರಾದೇಶಿಕ ಅಸಮತೋಲನಾ ಉನ್ನತಾಧಿಕಾರ ಆಯೋಗದ ವರದಿ(ಡಿ.ಎಂ.ನಂಜುಂಡಪ್ಪ ವರದಿ)

Law of Mines and Minerals, Feederalim of Indian Mineral Industries, Minestry of Mines and Minerals Publication, NewDelhi, 1990

Manograph on Iron ore,Indian Bureau of Mines, Indian Bureau of Mines Publication, Bangalore, 1997-98

Mines and Minerals (Development and Regulation) Act - 1957, Federation of Indian Mineral, Industrial Bakshi House, New Delhi, 1999

The World Book of Encyclopedia, Vol-13, 1990

## ARTICALS

Agrwal S.L., Labour Welfare and Constitution, National Labour Institute Bullotion, Jan-Mar-1981

Baldev Sharma SL., The Industrial worker: Some Myths and Realities, Economics and Political Weekly, Vol-No. 22, 1970, May 30th

Dharshini Dhar, Welfare of Mines Workers, Mysore Labour Journal, Vol-6(vii) Nov-1972

Gupta S. Das, Lowest Wages, Poorest Amenities for workers of Richest Mines, Indian Workers Vol-19(8) 23, Nov-1970

Meher M.R., Concept and Problems of Labour Welfare Economic times, 6th Jan, 1971

Stanely K.A., Welfare of Iron ore Mine workers in Mysore State, Mysore Labour Journal, V-III, 38, July 1969

Subramanyam K.V., Mine Workers afety of no account-economic and political weekly, No.29, 1980

ಚಂದ್ರಶೇಖರ ಟಿ.ಆರ್., *ದುಡಿಮೆಯ ಮಹಿಳೀಕರಣ* - ಲೇಖನ, ಪ್ರಜಾವಾಣಿ ದಿನಪತ್ರಿಕೆ, ೧೭.೦೩.೨೦೦೫, ಪು.೬

ಶ್ರೀಧರ ವಿ.ಎಸ್., ಶಿವಸುಂದರ್, *ಉಳ್ಳವರ ಶಿವಾಲಯವಾಗಿರುವ ನಮ್ಮ ಶಿಕ್ಷಣ* - ಲೇಖನ, ಲಂಕೇಶ ವಾರಪತ್ರಿಕೆ, ೨೧.೦೪.೨೦೦೪, ಪು.೨

**PERIODICALS AND DAILIES** (ನಿಯತಕಾಲಿಕೆ ಹಾಗೂ ದಿನಪತ್ರಿಕೆಗಳು)

1. Karnataka Mineral policy 2000, Government of Karnataka, Department of Mines and Geology, Bangalore,
2. Mines Environment and Mineral conservation Association Bellary, Conducted by Indian Bureau of mines, Bangalore Region Souvenir - 2002
3. National Seminar on sentific and late mining emerging challenges, organised by mines safety association Karnataka - 2002
4. Proceedings of the workshop on Mineral Resources utilisation and Environmental Issues related to Iron and Steel Industry, Orgnised by Department of Earth Science, Gulburga University P. G. Centre Nandhi Halli Sendur Dec. 13, 1999

**REPORTS AND GAZETTEER** (ಗೆಜಟೀಯರ್ ಹಾಗೂ ವರದಿಗಳು)

1. Annual Administrative Report of the Department of Mines and Geology Bangalore
2. Annual Production and Dispatch Report of the Department of Mines and Geology Ballary
3. Annual Production and Dispatch Report of the Department of Mines and Geology Hospet
4. Government of India, Constitution of India, New Delhi - 1969
5. Mysore State Gazetteer, Ballary District - 1962

**BARE ACTS** (ರಿಕ್ತಾ ಕಾನೂನುಗಳು)

1. Mattaliferous Regulation 1961
2. Mines Rules -1955, 1966
3. The Mines Act1952, (As Amended by the mines amendment act-1983) central law Agency Allahabad - 1987
4. The Forest act -1963

# ಹೊಸಪೇಟೆ: ಕೆಂಧೂಳಿನ ಮಧ್ಯೆ ಚುನಾವಣೆ ಕಾವು

ಹೊಸಪೇಟೆ, ಏ. 1- ಕಬ್ಬಿಣ ಅದುರಿನ ಧೂಳು ಸಾಮ್ರಾಜ್ಯದಂತಿರುವ ಹೊಸಪೇಟೆ ಮತ ಕ್ಷೇತ್ರದ ರಸ್ತೆಗಳು, ಕಟ್ಟಡಗಳು ಕೆಂಪಾಗಿವೆ. ಅದರ ಜೊತೆಗೆ ಮತದಾರರ ಕಣ್ಣುಗಳು ಧೂಳು ಕುಡಿದು ಕೆಂಪಾಗಿವೆ. ಇಲ್ಲಿನ ಸಂಪನ್ಮೂಲ ಲೂಟಿ ನಡೆಯುತ್ತಿದ್ದರೂ ಮತದಾರರು ಅಭಿವೃದ್ಧಿ ಹಾಗೂ ವಿದೇಶಿ ವಿನಿಮಯ ಗಳಿಕೆ ಗಮನಿಸಿ ಸುಮ್ಮನಿರಬೇಕಾಗಿದೆ. ಈ ಪ್ರಕ್ರಿಯೆಯಲ್ಲಿ ಚುನಾವಣೆಯ ಧೂಳು ಮೆಲ್ಲಗೆ ಏಳುತ್ತಿದೆ.

ತುಂಗಭದ್ರಾ ಜಲಾಶಯದ ಮಡಿಲಿನಲ್ಲಿ, ಪಂಪಾ ಕ್ಷೇತ್ರದ ಕೃಪಾ ಕಟಾಕ್ಷದಲ್ಲಿ ಹಾಗೂ ಕಬ್ಬಿಣ ಅದುರಿನ ನಿಕ್ಷೇಪ ಇರುವ ಈ ಪ್ರದೇಶದಲ್ಲಿ ಆರೋಗ್ಯ, ಸ್ವಚ್ಛತೆಯ ಸೌಕರ್ಯದ ಕೊರತೆ ಎದ್ದು ಕಾಣುತ್ತದೆ. ರೈತರು ತಮ್ಮ ಕಾಲುವೆಗಳಲ್ಲಿ ನೀರು ಹರಿಸಲು, ಕಬ್ಬು ಪೂರೈಸಿದ್ದಕ್ಕೆ ಹಣ ಪಡೆಯಲು ಪಡಬಾರದ ಕಷ್ಟ ಪಡುತ್ತಿದ್ದಾರೆ. ಕಳೆದ ಮೂರು ವರ್ಷಗಳಿಂದ ತುಂಗಭದ್ರಾ ಜಲಾಶಯ ತುಂಬಿ ನೀರು ತೂಬುಗಳ ಮೂಲಕ ಹೊರ ಚೆಲ್ಲಲೇ ಇಲ್ಲ.

ಇಂಥ ಕಷ್ಟದ ಪರಿಸ್ಥಿತಿಯ ಒಳಗೆ ಸಾರ್ವತ್ರಿಕ ಚುನಾವಣೆಗಳನ್ನು ರಾಜಕೀಯ ಪಕ್ಷಗಳು ಎದುರಿಸಬೇಕಾಗಿದೆ. ಸ್ಥಳೀಯ ಅನೇಕ ಸಂಘ ಸಂಸ್ಥೆಗಳು ನಾಗರಿಕರ ಸೌಲಭ್ಯಕ್ಕಾಗಿ ಹಾಗೂ ಬೇಡಿಕೆಗಳಿಗಾಗಿ ಹೋರಾಟ ನಡೆಸಿವೆ. ರಸ್ತೆ ತಡೆ ನಡೆಸಿವೆ. ಅವರಿಗೆಲ್ಲಾ ಚುನಾವಣಾ ಕಾಲದಲ್ಲಿ ಮತ ಯಾಚಿಸಿದಾಗ ಉತ್ತರಿಸಬೇಕಾಗುತ್ತದೆ.

ಭಾರತೀಯ ಜನತಾ ಪಕ್ಷದಿಂದ ಸ್ಪರ್ಧಿಸಲು ಮಾಜಿ ಶಾಸಕ ಜಿ. ಶಂಕರಗೌಡರಿಗೆ ಟಿಕೆಟ್ ನೀಡಲಾಗಿದೆ. ಟಿಕೆಟ್ ಆಕಾಂಕ್ಷಿಗಳಾಗಿದ್ದ ಪೃಥ್ವಿರಾಜ ಸಿಂಗ್ ಹಾಗೂ ಇನ್ನಿತರರಿಗೆ ಅಸಮಾಧಾನವಾಗಿದೆ. ಆದರೆ ಅದು ತಾತ್ಕಾಲಿಕ. ಬಿ.ಜೆ.ಪಿ. ಪ್ರಚಾರ ಬಿರುಸಿನಿಂದ ಜರುಗಿದೆ. ಈಗಾಗಲೇ ಒಂದು ಸುತ್ತ ಹಳ್ಳಿಗಳಿಗೆ ಹೋಗಿ ಬರಲಾಗಿದೆ ಎಂದು ಬಿ.ಜೆ.ಪಿ. ತಾಲ್ಲೂಕು ಅಧ್ಯಕ್ಷ ಎಸ್. ಪರಮೇಶ್ವರ ರೆಡ್ಡಿ ತಿಳಿಸುತ್ತಾರೆ.

ಕಾಂಗ್ರೆಸ್ ಪಾಳೆಯದಲ್ಲಿ ಟಿಕೆಟ್ ಪಡೆಯಲು ಅನೇಕರು ಅಪೇಕ್ಷೆ ಪಟ್ಟಿದ್ದರೂ ಅಂತಿಮವಾಗಿ ಜಿ.ಕೆ. ಹನುಮಂತಪ್ಪ ಅವರಿಗೆ ಟಿಕೆಟ್ ನೀಡಲಾಗಿದೆ. ಕಳೆದ ಬಾರಿ ಈ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿ ಗುಜ್ಜಲ ಜಯಲಕ್ಷ್ಮಿ ಶೇ.50.24 ಮತ ಪಡೆದು 11,205 ಮತಗಳ ಅಂತರದಿಂದ ಜಯಗಳಿಸಿದ್ದರು.

ಜನತಾದಳ (ಎಸ್) ಪಕ್ಷದಲ್ಲಿ ಟಿಕೇಟ್‌ಗಾಗಿ ಪೈಪೋಟಿ ಅಯ್ಯಾಳಿ ತಿಮ್ಮಪ್ಪ ಹಾಗೂ ಹೊಸದಾಗಿ ಪಕ್ಷ ಸೇರಿದ ಎಸ್. ರತನ್ ಸಿಂಗ್ ಮಧ್ಯೆ ಪೈಪೋಟಿ ಇದ್ದರೂ ಅಂತಿಮವಾಗಿ ಅಯ್ಯಾಳಿ ತಿಮ್ಮಪ್ಪ ಟಿಕೆಟ್ ಗಿಟ್ಟಿಸುವಲ್ಲಿ ಯಶಸ್ವಿಯಾಗಿದ್ದಾರೆ. ಕನ್ನಡ ನಾಡು ಪಕ್ಷ, ಸಿ.ಪಿ.ಐ.(ಎಂ) ಪಕ್ಷದಿಂದ ಹಾಗೂ ಪಕ್ಷೇತರರಾಗಿ ಕೂಡ ಕೆಲವರು ಕಣಕ್ಕೆ ಇಳಿದಿದ್ದಾರೆ.

ಈ ಬಾರಿಯ ಚುನಾವಣೆಯಲ್ಲಿ ವಿದ್ಯುನ್ಮಾನ ಯಂತ್ರಗಳ ಮೂಲಕ ಮತ ಚಲಾಯಿಸಬೇಕಾಗಿದೆ. ಒಟ್ಟು 1,90,904 ಮತದಾರರು ಇರುವ ಈ ಕ್ಷೇತ್ರದಲ್ಲಿ 95,427 ಗಂಡಸು 95,477 ಹೆಂಗಸರು ಇದ್ದಾರೆ. ಒಟ್ಟು ಮತಗಟ್ಟೆಗಳು 180. ಅತಿ ಕಡಿಮೆ ಮತದಾರರು ಇರುವ ಮತಗಟ್ಟೆ ಹೊಸ ಚಿನ್ನಾಪುರ (253) ಸುಮಾರು 45 ಕಿ.ಮಿ. ದೂರ ಇರುವ ಮತಗಟ್ಟೆ ಶ್ರೀ ರಾಮ ರಂಗಾಪುರ.

ಜಾತ್ಯತೀತ ಜನತಾದಳ ಪಕ್ಷದ ಬೃಹತ್ ಸಭೆಗಳು ಎರಡು ಈ ನಗರದಲ್ಲಿ ನಡೆದಿವೆ. ವಿಧಾನ ಪರಿಷತ್ ಸದಸ್ಯ ಎಂ.ಪಿ. ಪ್ರಕಾಶ್ ತಂಡ ಅಖಿಲ ಭಾರತ ಪ್ರಗತಿ ಪರ ಜನತಾದಳದಿಂದ ಜಾತ್ಯತೀತ ಪಕ್ಷಕ್ಕೆ ಸೇರುವಾಗ ಹಾಗೂ ಕಾಂಗ್ರೆಸ್ ಮಾಜಿ ಶಾಸಕ ಎಸ್. ರತನ್ ಸಿಂಗ್ ಸೇರುವಾಗ ಅಪಾರ ಸಂಖ್ಯೆಯ ಅಭಿಮಾನಿಗಳು ಸೇರಿದ್ದರು.

ಕಾಂಗ್ರೆಸ್ ಮತ್ತು ಬಿಜೆಪಿ ಪಕ್ಷಗಳು ತಮ್ಮ ಬೆಂಬಲದ ಸಂಖ್ಯೆಯ ಪ್ರದರ್ಶನವನ್ನು ಇನ್ನೂ ನೀಡಬೇಕಾಗಿದೆ. ಬಿ.ಜೆ.ಪಿ. ಅಲೆ ಎದ್ದಿದೆ ಎಂದು ಮತದಾರರು ಹೇಳಿದರೆ, ಕರ್ನಾಟಕದಲ್ಲಿ ಏನಿದ್ದರೂ ಕಾಂಗ್ರೆಸ್ ಅಥವಾ ಜನತಾದಳ ಅಧಿಕಾರಕ್ಕೆ ಬರುತ್ತವೆ ಎಂದೂ ಹೇಳುತ್ತಿದ್ದಾರೆ. ಯಾರು ಅಧಿಕಾರಕ್ಕೆ ಬರುತ್ತಾರೆ ಕಾದು ನೋಡಬೇಕು.

ಹೊಸಪೇಟೆ ಮತ ಕ್ಷೇತ್ರದ ಜನರು ಕೊಪ್ಪಳ ಲೋಕಸಭಾ ಕ್ಷೇತ್ರಕ್ಕೂ ಮತ ಚಲಾಯಿಸಬೇಕು. ಈ ಭಾಗದಲ್ಲಿ ವಾಲ್ಮೀಕಿ ಜನಾಂಗ, ಹಾಗೂ ಮುಸ್ಲಿಂರು ಸಮ ಸಮವಾಗಿದ್ದಾರೆ. ಕುರುಬರು, ಲಿಂಗಾಯತರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

ಈ ಮತಕ್ಷೇತ್ರದ ಮತದಾರರ ಮನಸು ಯಾವ ಕಡೆ ವಾಲಿದೆ ಎಂದು ಈಗಲೇ ತಿಳಿಸುವುದು ಸಾಧ್ಯವಿಲ್ಲ. ಕಬ್ಬು ಭಾಗದ ಮತದಾರರು ಯಾವಾಗಲೂ ನಿರ್ಣಾಯಕವಾಗಿ ಇರುವುದು ಈ ಮೊದಲು ನಡೆದ ಚುನಾವಣೆಗಳಲ್ಲಿ ಕಂಡು ಬಂದಿದೆ. ಈ ಮತ ಕ್ಷೇತ್ರದಲ್ಲಿ ಬಹುಕೋನ ಸ್ಪರ್ಧೆ ನಡೆದರೆ ಆಶ್ಚರ್ಯವೇನಿಲ್ಲ. ಈವರೆಗೆ ಈ ಕ್ಷೇತ್ರದಿಂದ 10 ಪುರುಷ ಅಭ್ಯರ್ಥಿಗಳು 2 ಮಹಿಳಾ ಅಭ್ಯರ್ಥಿಗಳು ಜಯ ಗಳಿಸಿದ್ದಾರೆ.

-ಕೆ. ರಾಮಚಂದ

ಕೊಪ್ಪಳ ಜಿಲ್ಲೆಯಲ್ಲಿ ಹಾದು ಹೋಗಿರುವ ರಾಷ್ಟ್ರೀಯ ಹೆದ್ದಾರಿ-63 ಹಾಗೂ 13ರಲ್ಲಿ [illegible] ಅಧಿಕಾರಿಗಳು ತಪಾಸಣೆ ನಡೆಸುವ ಸಂದರ್ಭದಲ್ಲಿ [illegible] ಮ್ಯಾಂಗನೀಸ್ ಲಾರಿಗಳನ್ನು ಎಲ್ಲೆಂದರಲ್ಲಿ ನಿಲ್ಲಿಸಲಾಗುತ್ತಿದ್ದು, ವ್ಯಾಪಕ ಶಂಕೆಗೆ ಕಾರಣವಾಗಿದೆ. ([illegible] 13ರ [illegible] ದೃಶ್ಯ)

## ಮ್ಯಾಂಗನೀಸ್ ಸಾಗಾಟ: ಭ್ರಷ್ಟಾಚಾರ ಶಂಕೆ

ಕೊಪ್ಪಳ, ಮಾರ್ಚ್ 18- [illegible]

## ಧೂಳು: ಮನವಿ

ಸಂಡೂರು, ಜೂ. 22 - ತಾಲೂಕಿನ ಸುಶೀಲಾನಗರದಲ್ಲಿ ಮೈನ್ಸ್ ಲಾರಿಗಳ ಓಡಾಟದಿಂದ ವಿಪರೀತ ಧೂಳು ಹರಡುತ್ತಿದ್ದು, ಇದರಿಂದ ತೊಂದರೆ ಯಾಗುತ್ತಿದೆಂದು ಗ್ರಾಮಸ್ಥರು ತಿಳಿಸಿದ್ದಾರೆ.

ತಹಸೀಲ್ದಾರರಿಗೆ ಈ ಕುರಿತು ಮನವಿ ಮಾಡಿರುವ ಗ್ರಾಮಸ್ಥರು, ಲಾರಿಗಳ ಓಡಾಟದಿಂದ ಅನಾರೋಗ್ಯ ಸಮಸ್ಯೆ ಎದುರಿಸುವುದರ ಜತೆಗೆ ರಸ್ತೆ ಪಕ್ಕದ ಮನೆಗಳಿಗೆ ಧಕ್ಕೆಯಾಗುತ್ತಿದೆ. ಇದರಿಂದ ರಸ್ತೆ ಮೇಲೆ ನಿರಂತರ ನೀರು ಚುಮುಕಿಸಲು ಸಂಬಂಧಿಸಿದವರಿಗೆ ಸೂಚಿಸುವಂತೆ ಕೋರಿದ್ದಾರೆ.




(1) Banded Magnetite Quartzite intercalated with metabasic volcanic rocks.

(2) Banded Haematite Quartzite interbedded with Limestones & Manganiferous sediments.

(3) Banded Ferruginous Cherts; non-iron ore bearing BIF; Auriferous at many places.

1. Anmod
2. Castle Rock
3. Supa
4. Kalchi
5. Idagundi
6. Ramanguli
7. Telaginkere
8. Apsarakonda
9. Kodachadri
10. Agumbe
11. Kigga
12. Gulganjimane
13. Gangrikal
14. Kudremukh
15. Nellibeeu
16. Kemmanna-gandi
17. Doddabale-Siddara Gudda
18. Hungund
19. Doni
20. Ramandurg - Range
21. Donimalai
22. Vibhutigudda, Belagal
23. Bhimasamudra
24. Shivagange
25. Kenkere
26. Lakkihalli
27. Buksagara
28. Chiknayakan-halli
29. Karekurchi, Hatyal
30. Maddur
31. Halagur (Malavalli)

Map of Karnataka showing distribution of the three different types of Banded Iron Formation.

# KARNATAKA
# DISTRICT BELLARY






| | |
|---|---|
| TOTAL AREA OF DISTRICT (IN SQ.KM) | 8,450.00 |
| TOTAL POPULATION OF DISTRICT | 2,027,140 |
| TOTAL NUMBER OF TOWNS IN DISTRICT | 11 |
| TOTAL NUMBER OF VILLAGES IN DISTRICT | 554 |



Based upon Survey of India map with the permission of the Surveyor General of India.

# ಪ್ರಶ್ನಾವಳಿಯ ಮಾದರಿ

## ೧. ಗಣಿ ಕಾರ್ಮಿಕರಿಗೆ ಸಂಬಂಧಿಸಿದಂತೆ

೧. ಮಾಹಿತಿದಾರನ/ಳ ಹೆಸರು :

೨. ವಯಸ್ಸು :

೩. ವೈವಾಹಿಕ ಸ್ಥಾನಮಾನ : ವಿವಾಹಿತ / ಅವಿವಾಹಿತ :

೪. ಜಾತಿ : ಧರ್ಮ :

೫. ನಿಮ್ಮ ಸ್ವಂತ ಊರು ಹಾಗೂ ಜಿಲ್ಲೆಯ ವಿವರ :

೬. ನಿಮ್ಮ ವಾಸಸ್ಥಳಕ್ಕೆ ಹಾಗೂ ಗಣಿಗಾರಿಕೆಗೆ ಇರುವ ದೂರ ೧ ರಿಂದ ೩ / ೪ ರಿಂದ ೭ / ೮ ರಿಂದ ೧೦ ಕಿ.ಮೀ. :

೭. ಸಾರಿಗೆ ಸೌಲಭ್ಯವಿದೆಯೇ ಬಸ್ಸು / ಜೀಪ್ / ಲಾರಿ / ಇತರೆ

೮. ಕೆಲಸ ಮಾಡುವ ಗಣಿ ಪ್ರದೇಶದ ಹೆಸರು :

೯. ವಾಸವಾಗಿರುವ ಪ್ರದೇಶದ ಹೆಸರು :

೧೦. ಕುಟುಂಬದ ವಿವರಗಳು :

| ಕ್ರ.ಸಂ. | ಹೆಸರುಗಳು | ಸಂಬಂಧ | ಲಿಂಗ | ವಯಸ್ಸು | ಶಿಕ್ಷಣ | ವೃತ್ತಿ | ಮದುವೆ ವಯಸ್ಸು | | | ಕುಟುಂಬದ ಯೋಜನೆ | |
|---|---|---|---|---|---|---|---|---|---|---|---|
| | | | | | | | ೧೫ | ೨೦-೨೫ | ೩೦ | ಇದೆ | ಇಲ್ಲ |

೧೧. ನೀವು ವಾಸವಾಗಿರುವ ಕ್ಯಾಂಪಿನ ಸುತ್ತಮುತ್ತ ಶಿಕ್ಷಣದ ಸೌಲಭ್ಯಗಳಿವೆಯೇ - ಹೌದು / ಇಲ್ಲ

ಹೌದಾದರೆ : ಸರ್ಕಾರಿ / ಖಾಸಗಿ / ಬಾಲಕಾರ್ಮಿಕ ಶಾಲೆ / ಅಂಗನವಾಡಿ / ಕ್ರಷ್‌ಗಳು / ಇತರೇ

೧೨. ಇತ್ತೀಚಿಗೆ ಕುಟುಂಬದಲ್ಲಿ ಜನನವಾಗಿದೆಯೇ ಹೌದು / ಇಲ್ಲ

ಹೌದಾದರೆ : ಗಂಡು / ಹೆಣ್ಣು

೧೩. ಜನನದ ಸಂದರ್ಭದಲ್ಲಿ ಏನಾದರೂ ತೊಂದರೆಗಳಿವೆಯೇ? ಹೌದು / ಇಲ್ಲ

ಹೌದಾದರೆ : ಹೆರಿಗೆಯ ತೊಂದರೆ / ಗರ್ಭದ ತೊಂದರೆ / ಆರೋಗ್ಯದ ತೊಂದರೆ / ಇತರೆ

೧೪. ಜನನದ ಸಮಯದಲ್ಲಿ ಏನಾದರೂ ಸಾವು ಸಂಭವಿಸಿದೆಯಾ? ಹೌದು / ಇಲ್ಲ

ಹೌದಾದರೆ : ತಾಯಿ / ಮಗು

೧೫. ಮರಣದ ಸಮಯದಲ್ಲಿದ್ದ ತಾಯಿ ಮಗುವಿನ ವಯಸ್ಸು________

೧೬. ಹಿರಿಯರಿಂದ ಬಂದ ರೂಢಿಸಂಪ್ರದಾಯಗಳ ಬಗ್ಗೆ ನಂಬಿಕೆ ಇದೆಯೇ? ಹೌದು / ಇಲ್ಲ

ಹೌದು ಎಂದಾದರೆ ವಿವರಿಸಿರಿ-

ಇಲ್ಲವೆಂದಾದರೆ ಏಕೆ ತಿಳಿಸಿರಿ-

**ಆರ್ಥಿಕ ಅಂಶಗಳಿಗೆ ಸಂಬಂಧಿಸಿದಂತೆ**

೧. ಗಣಿ ಸಂಸ್ಥೆಗೆ ಸೇರ್ಪಡೆಯಾದ ವರ್ಷ

೨. ಉದ್ಯೋಗದ ಸ್ವರೂಪ : ಶಾಶ್ವತ / ತಾತ್ಕಾಲಿಕ / ಒಪ್ಪಂದ

೩. ಉದ್ಯೋಗದ ಸ್ವರೂಪ : ಕುಶಲ / ಅರೆಕುಶಲ / ಕುಶಲರಹಿತ

೪. ಕೂಲಿ : ದಿನವೊಂದಕ್ಕೆ________ ತಿಂಗಳಿಗೆ______

೫. ಈ ಹಿಂದಿನ ವೃತ್ತಿ ಅನುಭವದ ವಿವರ

೬. ಹಿಂದಿನ ವೃತ್ತಿ ಪಲ್ಲಟಕ್ಕೆ ಕಾರಣಗಳೇನು

ಕಡಿಮೆ ಕೂಲಿ / ದುಡಿಮೆ ಅಭಾವ / ಕುಟುಂಬದ ವೈಯಕ್ತಿಕ ಸಮಸ್ಯೆಗಳು / ಅತೃಪ್ತಿ / ಇತರೆ

೭. ಕುಟುಂಬದ ಸ್ವರೂಪ : ಅವಿಭಕ್ತ / ವಿಭಕ್ತ

೮. ವಸತಿ ವಿವರ : ಸ್ವಂತ / ಬಾಡಿಗೆ

೯. ವಸತಿಯ ಸ್ವರೂಪ : ಗುಡಿಸಲು / ಕಚ್ಚಾ / ಆರ್.ಸಿ.ಸಿ. / ಹೆಂಚು / ಶೀಟ್ / ಇತರೆ

೧೦. ವಸತಿಯಲ್ಲಿನ ಸೌಲಭ್ಯಗಳು : ವಿದ್ಯುತ್ / ಶೌಚಾಲಯ / ಕೋಣೆಗಳು / ಸ್ನಾನದಗೃಹ

೧೧. ಅವಲಂಬಿತರ ವಿವರ : ಕುಟುಂಬದ ಒಟ್ಟು ಸದಸ್ಯರ ಸಂಖ್ಯೆ

ದುಡಿಯುವವರ ಸಂಖ್ಯೆ

ದುಡಿಯದವರ ಸಂಖ್ಯೆ

೧೨. ದುಡಿಮೆಯ ವಿವರ :

| ಸಂ. | ಕಾರ್ಮಿಕರ ಬಳಕೆ | ಕೆಲಸದ ಸಮಯ | ಕೂಲಿ | ದುಡಿಮೆಯ ದಿನಗಳು | ತಿಂಗಳ ವೇತನ | ವೆಚ್ಚ | ಉಳಿತಾಯ | ಸಾಲ |
|---|---|---|---|---|---|---|---|---|
| | | | | | | | | |

೧೩. ಕೆಲಸದ ಸ್ವರೂಪ :

| ಕೆಲಸದ ಸ್ವರೂಪ | ಕೆಲಸದ ಸಮಯ | ಮುನ್ನೆಚ್ಚರಿಕೆ ಕ್ರಮ | ತರಬೇತಿ ವ್ಯವಸ್ಥೆ |
|---|---|---|---|
| ೧. ಲೋಡಿಂಗ್ ಮಾಡುವುದು | | | |
| ೨. ಬಂಡಿ ಹಿಡಿಯುವುದು | | | |
| ೩. ಡ್ರಿಲ್ಲಿಂಗ್ ಮಾಡುವುದು | | | |
| ೪. ಕಲ್ಲು ಸಂಗ್ರಹಿಸುವುದು | | | |
| ೫. ಡ್ರೈವರ್ | | | |
| ೬. ಬ್ಲಾಸ್ಟರ್ಸ್ | | | |
| ೭. ಸೂಪರ್‌ವೈಸರ್ | | | |
| ೮. ಕ್ಲೀನರ್ | | | |
| ೯. ಇತರೆ | | | |

೧೪. ಗಣಿ ಸಂಸ್ಥೆಯಲ್ಲಿರುವ ಸೌಲಭ್ಯಗಳು

ಬೋನಸ್ / ರೇಷನ್ / ರಜೆ ಸೌಲಭ್ಯ / ಪಿ.ಎಫ್. / ವಿಶೇಷ ರಜೆ ಸೌಲಭ್ಯ / ವೈದ್ಯಕೀಯ ಸೌಲಭ್ಯ / ಅಪಘಾತ ವಿಮೆ

೧೫. ನೀವು ನಿಮ್ಮ ಕೈಗಾರಿಕೆಯಲ್ಲಿ ಕಾರ್ಮಿಕ ಸಂಘ ಕಟ್ಟಿದ್ದೀರಾ? ಹೌದು / ಇಲ್ಲ

ಇಲ್ಲವೆಂದಾದರೆ ಏಕೆ______ ಹೌದಾದರೆ ಯಾವುದು________

೧೬. ಸಂಘಟನೆಯ ಮೇಲೆ ನಂಬಿಕೆ ಇದೆಯಾ? ಹೌದು / ಇಲ್ಲ

ಹೌದಾದರೆ ಹೇಗೆ______ ಇಲ್ಲವಾದರೆ ಕಾರಣ_______

೧೭. ಯಾವುದಾದರೂ ಪ್ರತಿಭಟನೆಯನ್ನು ಕೈಗೊಂಡಿದ್ದಾರಾ ಹೌದು / ಇಲ್ಲ

ಹೌದಾದರೆ ಏಕೆ______ ಇಲ್ಲವಾದರೆ ಕಾರಣ________

೧೮. ಕಾರ್ಮಿಕ ಅಧಿಕಾರಿಗಳು ಸಂದರ್ಶನ ನೀಡುತ್ತಾರೆಯೇ ಹೌದು / ಇಲ್ಲ

**ಆರೋಗ್ಯಕ್ಕೆ ಸಂಬಂಧಿಸಿದಂತೆ**

೧. ನಿಮ್ಮ ವಸತಿಯ ಸುತ್ತಮುತ್ತ ಆಸ್ಪತ್ರೆಗಳ ಸೌಕರ್ಯ ಉಂಟೆ ಹೌದು / ಇಲ್ಲ

ಹೌದಾದರೆ : ಸರ್ಕಾರಿ / ಖಾಸಗಿ / ಇತರೆ

ಇಲ್ಲವಾದರೆ : ಇರುವ ದೂರ ೧ ಕಿ.ಮೀ. / ೩ ಕಿ.ಮೀ. / ೫ ಕಿ.ಮೀ. / ೧೦ ಕಿ.ಮೀ.

೨. ಕಾರ್ಮಿಕ ಯೋಗಕ್ಷೇಮ ಆಸ್ಪತ್ರೆ ಇದೆಯೇ? ಹೌದು / ಇಲ್ಲ

ಹೌದಾದರೆ : ವೈದ್ಯರ ಸಂಖ್ಯೆ_________ ಸೌಲಭ್ಯಗಳ ವಿವರ__________

೩. ಗಣಿ ಪ್ರದೇಶಕ್ಕೆ ವೈದ್ಯರ ಭೇಟಿ ಇದೆಯೇ? ಹೌದು / ಇಲ್ಲ

ಹೌದಾದರೆ : ವಾರಕ್ಕೆ / ೧೫ ದಿನಕ್ಕೆ / ೧ ತಿಂಗಳಿಗೆ / ೩ ತಿಂಗಳಿಗೆ / ಇತರೆ

೧೯. ಗಣಿಯಲ್ಲಿ ಖಾಸಗಿ ವೈದ್ಯರ ಸೇವೆಗೆ ಅವಕಾಶವಿದೆಯೇ ಹೌದು/ಇಲ್ಲ

ಹೌದಾದರೆ : ಹಣಕಾಸು ನೆರವು / ಹಣದ ಸಾಲ / ಪುಕ್ಕಟೆಯಾಗಿ ಹಣ / ಚಿಕಿತ್ಸೆ / ಇತರೆ

೧. ಗಣಿ ಆಸ್ಪತ್ರೆಯಿಂದ ಸಿಗುವ ಸೌಲಭ್ಯ : ಇಂಜೆಕ್ಷನ್ / ಗುಳಿಗೆ / ಎಕ್ಸ್‌ರೇ / ಲ್ಯಾಬ್ / ಇತರೆ

೨. ಗಣಿಯಲ್ಲಿರುವ ಭಾಷೆಗಳು : ಕನ್ನಡ / ಇಂಗ್ಲಿಷ್ / ಹಿಂದಿ / ತೆಲುಗು

೩. ಮಾತೃಭಾಷೆ : ಕನ್ನಡ / ತೆಲುಗು / ಹಿಂದಿ / ಇಂಗ್ಲಿಷ್ / ತಮಿಳು

ರಾಜಕೀಯ ಪಾಲ್ಗೊಳ್ಳುವಿಕೆ

೧. ಮತಾಧಿಕಾರ ಹಕ್ಕು ಇದೆಯಾ? ಹೌದು / ಇಲ್ಲ

೨. ಹೌದಾದರೆ ಯಾರ ಮೂಲಕ ಪಡೆದಿದ್ದೀರಿ?

ಮಾಲೀಕ / ಶಿಕ್ಷಕ / ಸಂಘಸಂಸ್ಥೆ / ರಾಜಕೀಯಪಕ್ಷ ಅಥವಾ ಸ್ಥಳೀಯ ನಾಯಕರಿಂದ

೩. ಬೆಂಬಲಿಸುವ ಪಕ್ಷಗಳು : ಕಾಂಗ್ರೆಸ್/ ಜನತಾದಳ / ಕಮ್ಯುನಿಷ್ಟ್ / ಬಿ.ಜೆ.ಪಿ. / ಇತರೆ

೪. ರಾಜಕೀಯವಾಗಿ ಸ್ಪರ್ಧಿಸಿದ್ದೀರಾ : ಹೌದು / ಇಲ್ಲ

ಹೌದಾದರೆ ಗ್ರಾಮ / ಪಟ್ಟಣ / ತಾಲೂಕು / ಜಿಲ್ಲಾ ಪಂಚಾಯತಿ

೫. ರಾಜಕೀಯದಲ್ಲಿ ಪಾಲ್ಗೊಂಡಿದ್ದೀರಾ:

ಚುನಾವಣೆಯ ಮೂಲಕ / ಆಯ್ಕೆ ಮೂಲಕ / ನಾಮ ನಿರ್ದೇಶನ ಮೂಲಕ

೬. ಸ್ಥಳೀಯ ಸಂಸ್ಥೆಗಳಿಂದ ದೊರೆತ ಸೌಲಭ್ಯಗಳು

ಹೊಲ / ಮನೆ / ರೇಷನ್ ಕಾರ್ಡ್ / ವಿದ್ಯುಚ್ಛಕ್ತಿ / ವಾಹನ / ಇತರೆ

೭. ಗಣಿ ಮಾಲೀಕರನ್ನು ನೋಡಿದ್ದೀರಾ : ಹೌದು / ಇಲ್ಲ

ಅವರ ಹೆಸರುಗಳು_______

೮. ಗಣಿ ಮಾಲೀಕರೊಂದಿಗೆ ಮಾತನಾಡಿದ್ದೀರಾ : ಹೌದು / ಇಲ್ಲಾ

೯. ಹೌದಾದರೆ ಯಾವ ವಿಷಯದ ಬಗ್ಗೆ ಕೂಲಿ ಹೆಚ್ಚಳ / ಮನೆ / ಉಡುಪು / ಸಾಲ / ವಿವಿಧ ಸೌಕರ್ಯ / ಇತ್ಯಾದಿ

೧೦. ಗಣಿ ಮಾಲೀಕರೊಂದಿಗಿನ ಒಡನಾಟ ಹೇಗೆನ್ನಿಸಿತು :

ತೃಪ್ತಿಕರ / ತಿರಸ್ಕಾರ / ಕನಿಷ್ಟ

# ಪ್ರಶ್ನಾವಳಿಯ ಮಾದರಿ

## ೨. ಕಾರ್ಮಿಕ ಮತ್ತು ಆಡಳಿತ ಮಂಡಳಿಯ ಸಂಬಂಧ

೧. ನಿಮ್ಮ ಗಣಿ ಸಂಸ್ಥೆಯಲ್ಲಿರುವ ಕಾರ್ಮಿಕ ಹಾಗೂ ಮಾಲೀಕರ ಸಂಬಂಧ ಹೇಗಿದೆ?:

ಅನ್ಯೋನ್ಯತೆ / ಪ್ರೀತಿಪೂರ್ವಕ / ಕನಿಷ್ಠ / ಸಾಧರಣ

೨. ನಿಮ್ಮ ಸಂಸ್ಥೆಯಲ್ಲಿ ನೀಡುತ್ತಿರುವ ಕೂಲಿಯ ಪ್ರಮಾಣದ ದರವೆಷ್ಟು?

೩. ನಿಮ್ಮ ಸಂಸ್ಥೆಯಲ್ಲಿ ಲಭ್ಯವಿರುವ ಸೌಲಭ್ಯಗಳನ್ನು ತಿಳಿಸಿರಿ.

ಅ. ಕಾರ್ಮಿಕ ಹಾಗೂ ಆಡಳಿತ ಮಂಡಳಿಯ ಸಂಬಂಧ______ ಉತ್ತಮ / ಮಧ್ಯಮ / ಕನಿಷ್ಠ

ಆ. ಹೆರಿಗೆ ಭತ್ಯೆ

ಇ. ಸುರಕ್ಷತೆ ಹಾಗೂ ಭದ್ರತೆ

ಈ. ಯೋಗಕ್ಷೇಮದ ಸೌಲಭ್ಯಗಳು

ಉ. ಮುಂಗಡ ನೀಡುವ ಸೌಲಭ್ಯಗಳು

ಊ. ಸನ್ಮಾನ ಹಾಗೂ ಪ್ರಶಂಸೆ

೪. ಕಾರ್ಮಿಕರ ಯೋಗಕ್ಷೇಮ ಮತ್ತು ಕೆಲಸದ ಸ್ಥಿತಿಗತಿ

೧. ಚಿಕ್ಕ ಕೈಗಾರಿಕೆಗಳಲ್ಲೂ ಕಾರ್ಮಿಕ ಕಾಯ್ದೆಗಳು ಅನ್ವಯಿಸುವುದರ ಬಗ್ಗೆ ನಿಮಗೆ ತಿಳಿದಿದೆಯಾ

ಹೌದು / ಇಲ್ಲ

೨. ನಿಮ್ಮ ಗಣಿಸಂಸ್ಥೆ ಕೊಡುತ್ತಿರುವ ಯೋಗಕ್ಷೇಮದ ಸೌಕರ್ಯಗಳ ಬಗ್ಗೆ ತೃಪ್ತಿ ಇದೆಯೇ

ಹೌದು / ಇಲ್ಲ

೩. ನೀವು ಕೆಲಸ ಮಾಡುವ ಸಂಸ್ಥೆಯಲ್ಲಿನ ಕೆಲಸದ ಸ್ಥಿತಿಗತಿಯ ಬಗ್ಗೆ ತೃಪ್ತಿ ಇದೆಯೇ

ಹೌದು / ಇಲ್ಲ

೫. ಈ ಕೆಳಗಿನ ಸೌಕರ್ಯಗಳಿಗೆ ನಿಮ್ಮ ಆದ್ಯತೆಗಳನ್ನು ತಿಳಿಸಿರಿ.

ಅ. ಕಾರ್ಮಿಕರ ಯೋಗಕ್ಷೇಮದ ಸೌಲಭ್ಯಗಳು ಉತ್ತಮ / ಸಾಧಾರಣ / ಕನಿಷ್ಠ



ಈ ಒಡಲು ಲೋಹಾದ್ರಿಯ ಮಡಿಲು



ಕಲ್ಲು ಕರಗುವ ಸಮಯ



ಬ್ಲಾಸ್ಟಿಂಗ್... ಬ್ಲಾಸ್ಟಿಂಗ್... ಬಲ್ಲಾಸ್ಟಿಂಗ್....!



ಭೂಗರ್ಭಕ್ಕೂ ತಪ್ಪಿಲ್ಲ ಕನ್ನ



ಅದಿರಿಗಾಗಿ ಬಾಯ್ದೆರೆದ ಭೋಗಿಗಳು



ವಿಲೇವಾರಿಗೆ ನಾವು ಸಿದ್ಧ



ಇಲ್ಲಿ ಎಲ್ಲಾ ಮಾಯ ನಾಳೆ ನಾವು....?



ಬರೀ ಮಣ್ಣಲ್ಲವೋ ಇದು ಕೆಂಪು ಚಿನ್ನ



ಹಸಿರೇ ಉಸಿರು



ಕೆಂಪಾದವೋ ಎಲ್ಲಾ ಕೆಂಪಾದವೋ.....



ಕುಡಿಯುವ ನೀರಿಗೂ ಬಂತು ಆಪತ್ತು



ಕಿತ್ತಾಳೆಗೂ ಬಂತು ಕುತ್ತು

